ಭಾಗ-8

ತತ್ವಪ್ರಕಾಶಿಕಾ

ಸತ್ತರ್ಕದೀಪಾವಳಿ ತತ್ವಪ್ರದೀಪ

# ಭಾವದೀಪ



ಅಧ್ಯಕ್ಷರು :

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿ ಆಚಾರ್ಯ
ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

ಭಾಗ -೮

ಶ್ರೀಪದ್ಮನಾಭತೀರ್ಥಮುನಿ ವಿರಚಿತ

# ಸತ್ತರ್ಕದೀಪಾವಳಿ

ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತ

# ತತ್ವಪ್ರದೀಪ

ಶ್ರೀಜಯತೀರ್ಥಮುನಿ ವಿರಚಿತ

# ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,

ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ

ಶ್ರೀಮಂತ್ರಾಲಯಪ್ರಭುಗಳ ಭಾವದೀಪ

ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ

* * * * * *

ಪ್ರಕಾಶನ :

ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,

ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

II

'ಭಾವದೀಪ' : ಮಂತ್ರಾಲಯ ಕ್ಷೇತ್ರದಲ್ಲಿ ದುರ್ಮುಖಿ II ಶ್ರಾವಣ ಮಾಸ II ಕೃಷ್ಣಪಕ್ಷ ಶ್ರೀರಾಘವೇಂದ್ರ ಸ್ವಾಮಿಗಳ ಆರಾಧನೆಯ ದಿನದಂದು (ದಿನಾಂಕ : ೨೦-೮-೨೦೧೬) ಶ್ರೀರಾಘವೇಂದ್ರಸ್ವಾಮಿಗಳ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | |
|---|---|
| ಪ್ರಕಾಶನ | : ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : ವಿ II ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.<br>ದೂರವಾಣಿ : 914149120 |
| ಪ್ರಥಮಮುದ್ರಣ | : 2016 |
| ಪುಟಗಳು | : 720 |
| ಬೆಲೆ | : 600 ರೂ |
| ಪ್ರತಿಗಳು | : 1000 |





ಅಕ್ಷರಜೋಡಣೆ :
ಶ್ರೀ ಬೆಮ್ಮತ್ತಿ ಶ್ರೀನಿವಾಸ
ಶ್ರೀಮತಿ ಎಸ್. ನಾಗಲತಾ

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

|| Srimanmoola Ramo Vijayate || || Sri Gururajo Vijayate ||

## Vol. - 8

**SRI PADMANABHATIRTHAMUNI'S**
**SATTARKADIPAVALI**

**SRIJAYATIRTHAMUNI'S**
**TATVAPRAKAASHIKAA**

**SRI TRIVIKRMAPANDITAACHARYA'S**
**TATVAPRADIPA**

# BHAVADIPA

**Sri Vedavyasa's Brahmasutra,**
**Sri Madhvacharya's Bhashya,**
**Teekas - Sattarkadipawali, Tatvapradipa, Tatvaprakaashikaa**

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries & overall critisism**

**Published by :**

**Sri Gurusarvabhouma Samshodhana Mandira,**
Jagadguru Srimanmadhvacharya Mula Mahasamsthana,
Sri Raghavendraswamy Mutt, Mantralayam - 518 345 A.P.

'BHAVADIPA' : HH Sri Sri Subhudendra Thirta sripada has submitted this 8th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya,

Bangalore. Ph : 9141495120

First Edition : 2016

Price : Rs. 600

Copies : 1000





Type set :

Smt. S. Nagalatha, Bangalore.
Sri Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :

ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ॥ ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvaprakaashikaa**

**Tatvapradipa**

# BHAVADIPA

******

**President:**

**HH Sri Subhudhendratirtha Sripadaru**

**PeeTadhipati of Sri Raghavendraswamy Mutt, Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

ಎಂಟನೆಯ
# ವಾಙ್ಮಯ-ಕುಸುಮಹಾರ
## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು

ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ

ಅಂತರ್ಯಾಮಿಗಳಾದ ಶ್ರೀಮನ್‌ಮೂಲರಾಮಚಂದ್ರದೇವರಿಗೆ ಈ ಕೃತಿಯನ್ನು

ಎಂಟನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿದ್ದಾರೆ.

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಪರಮಪೂಜ್ಯ ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರ ಆರಾಧನೆಯ ಶುಭಪರ್ವ-ಕಾಲದಲ್ಲಿ ಭಾವದೀಪ ಗ್ರಂಥದ ಎಂಟನೆಯ ಸಂಪುಟವು ಬಿಡುಗಡೆಗೊಳ್ಳುತ್ತಿದೆ. ಸಮಗ್ರ ವೇದವಾಙ್ಮಯದ ಸಮನ್ವಯವನ್ನು ಪರಮಾತ್ಮನಲ್ಲಿ ತಿಳಿಯುವುದೇ ರಾಯರ ಆರಾಧನೆ. ನಿರಂತರ ಅಪೌರುಷೇಯವಾದ ವೇದಗಳ ಅರ್ಥವನ್ನು ಮನನ ಮಾಡುವ ಮೂಲಕ ಪರಮಾತ್ಮನ ಪಾದಾರವಿಂದಗಳ ಧ್ಯಾನದಲ್ಲಿ ರಾಯರು ಆಸಕ್ತರಾಗಿರುವರು. ಪರಮಾತ್ಮನನ್ನು ಬಿಟ್ಟು ಇತರರ ಲೌಕಿಕವಿಚಾರವನ್ನು, ಮಾಡುತ್ತಾ ಕುಳಿತಿರುವವರಲ್ಲ. ಇಂಥ ರಾಯರಿಗೆ ಬ್ರಹಮೀಮಾಂಸಾಶಾಸ್ತ್ರದ ಪ್ರಥಮಾಧ್ಯಾಯದ ವಿಚಾರವು ಪರಮಪ್ರೇಮಾಸ್ಪದವಾಗಿದೆ. ಏಕೆಂದರೆ ಸಮಗ್ರ ವೇದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುವ ಮೂಲಕ ಜಗಜ್ಜನ್ಮಾದಿಕಾರಣನಾದವನು ಹಾಗೂ ಗುಣಪೂರ್ಣನಾದವನು ಶ್ರೀಹರಿ ಮಾತ್ರ ಎಂಬುದಾಗಿ ಈ ಅಧ್ಯಾಯವು ಪ್ರತಿಪಾದನೆ ಮಾಡುತ್ತಿದೆ. ಇಂಥ ಶ್ರೇಷ್ಠವಾದ ಪ್ರಥಾಮಾಧ್ಯಾಯದ ಕಾರ್ಯವು ರಾಯರ ಆರಾಧನೆಯ ದಿವಸ ಪೂರ್ಣಗೊಂಡು ಸಮರ್ಪಣೆ ಆಗುತ್ತಿದೆ.

ಮುಂದಿನ ವಿಚಾರ ವಿರೋಧ ಪರಿಹಾರ. ಶ್ರೀಹರಿಯನ್ನು ಪಡೆಯಬೇಕೆಂಬ ತವಕವುಳ್ಳ ಜಿಜ್ಞಾಸುವು ವೇದಗಳಿಂದ ಶ್ರೀಹರಿಯ ಜ್ಞಾನವನ್ನು ಸಂಪದಾನೆ ಮಾಡಬೇಕು. ಪ್ರಥಮಾಧ್ಯಾಯದಲ್ಲಿ ಹೇಳಿದಂತೆ ಪ್ರತಿಯೊಂದು ಶ್ರುತಿಗಳು, ವಾಕ್ಯಗಳು, ಪದಗಳು, ಅಕ್ಷರಗಳು, ಪ್ರಕೃತಿಗಳು,

ಪ್ರತ್ಯಯಗಳು, ಅಷ್ಟೇಅಲ್ಲದೇ ಧ್ವನಿಗಳೂ ಕೂಡ ಶ್ರೀಹರಿಯನ್ನೊಬ್ಬನನ್ನೇ ಕೊಂಡಾಡುತ್ತವೆ ಎಂಬುದನ್ನು ಮನಗಾಣಬೇಕು. ಈ ವಿಷಯದಲ್ಲಿ ಹತ್ತುಹಲವು ರೀತಿಯಲ್ಲಿ ಪುನಃ ಸಂದೇಹ ಉಂಟಾಗುತ್ತದೆ. ವೇದವಾಕ್ಯಗಳಲ್ಲೇ ಪರಸ್ಪರ ವಿರೋಧವಿದೆ ಅಥವಾ ಸ್ಮೃತಿಗ್ರಂಥಗಳಿಗೂ ವೇದಗಳಿಗೂ ವಿರೋಧಬರುತ್ತದೆ. ಅಥವಾ ಲೌಕಿಕ ಜನರ ವ್ಯವಹಾರ ಅಥವಾ ಸಂಪ್ರದಾಯಗಳಿಂದಲೂ ವಿರೋಧ ಪ್ರಾಪ್ತವಾಗುತ್ತದೆ. ಅಥವಾ ಲೋಕದಲ್ಲಿ ಬಹಳಷ್ಟು ವ್ಯಾಪಕಾಗಿ ಬೆಳೆದಿರುವ ಕೆಲವೊಂದು ಮತಗಳ ವಿರೋಧವೂ ಬರುತ್ತದೆ. ತರ್ಕಗಳ ವಿರೋಧವಷ್ಟೇ ಅಲ್ಲದೇ ತರ್ಕದ ಬೆಂಬಲವಿರುವ ಶ್ರುತಿಗಳ ವಿರೋಧವೂ ಬರುತ್ತದೆ. ಹೀಗೆ ಅನೇಕ ಬಗೆಯ ವಿರೋಧಗಳನ್ನು ಪರಿಹರಿಸಿಕೊಳ್ಳದಿದ್ದರೆ ಪುನಃ ಭಗವಂತನ ಸರ್ವೋತ್ತಮತ್ವದ ಉಪಾಸನೆಯೇ ನಷ್ಟವಾಗುವ ಪರಿಸ್ಥಿತಿ ಪ್ರಾಪ್ತವಾಗುತ್ತದೆ. ಈ ಸಮಸ್ಯೆಯ ಪರಿಹಾರಕ್ಕಾಗಿಯೇ ಬ್ರಹ್ಮಮೀಮಾಂಸಾಶಾಸ್ತ್ರದ ಎರಡನೆ ಅಧ್ಯಾಯ ಹೊರಟಿದೆ. ಸರ್ವೋತ್ತಮತ್ವದ ಉಪಾಸನೆಗೆ ಅಣುಮಾತ್ರದಷ್ಟು ವಿರೋಧವೂ ಇರುವುದಿಲ್ಲ. ಹಾಗೂ ಮೇಲೆ ಹೇಳಿದ ಯಾವುದೇ ವಿರೋಧಗಳಿಗೂ ಅವಕಾಶವಿಲ್ಲ ಎಂಬುದನ್ನು ಈ ಅಧ್ಯಾಯವು ಪ್ರತಿಪಾದನೆ ಮಾಡುತ್ತಿದೆ.

ಪ್ರಕೃತ ಈ ಸಂಪುಟದಲ್ಲಿ ಪ್ರಥಮಾಧ್ಯಾಯವು ಸಮಾಪ್ತವಾಗಿರುವುದಷ್ಟೇ ಅಲ್ಲದೆ ಎರಡನೇ ಅಧ್ಯಾಯದ ಪ್ರಾರಂಭವೂ ಕೂಡ ಆಗಿದೆ. ಹೀಗೆ ಪ್ರಥಾಮಾಧ್ಯಾಯದ ಸಮಾಪ್ತಿ ದ್ವಿತೀಯಾಧ್ಯಾಯದ ಪ್ರಾರಂಭದಿಂದ ಒಳಗೊಂಡ ಈ ಸಂಪುಟವನ್ನು ರಾಯರ ಆರಾಧನೆಯ ಶುಭಸಂದರ್ಭದಲ್ಲಿ ಸಮರ್ಪಣೆ ಮಾಡುತ್ತಿರುವುದು ಬಹಳ ಅರ್ಥಪೂರ್ಣವಾದದ್ದು. ಇದರಿಂದ ನಾವು ತಿಳಿಯಬೇಕಾದದ್ದು ಇಷ್ಟು - 'ಪ್ರತಿನಿತ್ಯ ಭಗವಂತನ ಗುಣಪರಿಪೂರ್ಣತ್ವವನ್ನು ಅನುಸಂಧಾನ ಮಾಡಬೇಕು ಏತನ್ಮೂಲಕವಾಗಿ ವಿಷ್ಣು ಒಬ್ಬನೇ ಸರ್ವೋತ್ತಮನಾಗಿದ್ದಾನೆ ಉಳಿದವರೆಲ್ಲರೂ ಅವನ ಕಿಂಕರರು ಯಾವುದೇ ಶಬ್ದಗಳಿದ್ದರೂ ಅದು ಕೇವಲ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ ಇತರರನ್ನು ಪ್ರತಿಪಾದನೆ ಮಾಡುವುದಿಲ್ಲ' ಎಂಬ ತತ್ವದ ದೀಕ್ಷೆಯನ್ನು ಪಡೆದು ಗುರುಗಳಾದ ರಾಯರಿಗೆ ಇದನ್ನು ಸಮರ್ಪಣೆ ಮಾಡಬೇಕು. ಮತ್ತು ಈ ವಿಷಯದಲ್ಲಿ ಯಾವುದೇ ಗ್ರಂಥಗಳು ವಿರೋಧ ಮಾಡಿದರೂ ಅಥವಾ ಬೇರೆ ಬೇರೆ ಪ್ರತಿವಾದಿಗಳು ವಿರೋಧ ಮಾಡಿದರೂ ಅಥವಾ ನಮ್ಮ ಜನರೇ ವಿರೋಧ ಮಾಡಿದರೂ ಕೂಡ ಇದರಿಂದ ನಾನು ವಿಚಲಿತನಾಗುವುದಿಲ್ಲ ಎಂಬ ದೃಢ ನಿರ್ಧಾರವನ್ನು ರಾಯರ ಎದುರಿನಲ್ಲಿ ಮಾಡಬೇಕು. ಇದೇ ಜೀವನ, ಇದರ ಹೊರತಾದ ಮತ್ತೊಂದು ಜೀವನವೇ ಇರುವುದಿಲ್ಲ ಇದಕ್ಕಾಗಿಯೇ ಜೀವನದ ಬೇರೆ ಲೌಕಿಕದ ಕಾರ್ಯಗಳನ್ನು

ಮಾಡಬೇಕು, ಇತರ ಅರ್ಥಕಾಮಾದಿಗಳ ಪ್ರಯೋಜನಕ್ಕಲ್ಲ. ಎಲ್ಲಿಯತನಕ ಈ ಅನುಸಂಧಾನವನ್ನು ದೃಢಪಡಿಸಿಕೊಳ್ಳುವುದಿಲ್ಲವೋ ಅಲ್ಲಿಯತನಕ ಬದುಕಿದ್ದೂ ವ್ಯರ್ಥ.

ರಾಘವೇಂದ್ರಸ್ವಾಮಿಗಳ ಆರಾಧನೆಯೆಂದರೆ ವಿಷ್ಣುಸರ್ವೋತ್ತಮತ್ವದ ದೀಕ್ಷಾಸಂಪತ್ತನ್ನು ಪ್ರಚುರಮಾಡಿಕೊಳ್ಳುವುದೇ ಹೊರತು ಬೇರೇನೂ ಅಲ್ಲ. ರಾಯರಿಗೆ ಹಲವುವಿಧ ಭಕ್ತರು ಹಲವಾರು ರೀತಿಯಲ್ಲಿ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಅವೆಲ್ಲವೂ ವ್ಯರ್ಥವೆಂಬುದು ನಮ್ಮ ಮಾತಿನ ಉದ್ದೇಶವಲ್ಲ. ಆ ಎಲ್ಲ ಸೇವೆಗಳು ಬ್ರಹ್ಮಮೀಮಾಂಸಾಶಾಸ್ತ್ರ ಹೇಳುವ ಗುಣಪರಿಪೂರ್ಣತ್ವ ಹಾಗೂ ದೋಷವಿದೂರತ್ವದ ಚಿಂತನೆಯಲ್ಲಿ ಅಂತಿಮಗೊಳ್ಳಬೇಕು ಎಂಬುದಷ್ಟೇ ಮುಖ್ಯ ಅಭಿಪ್ರಾಯ.

ಜಗತ್ತಿನಲ್ಲಿ ಹಲವು ರೀತಿಯ ಗುರುಗಳ ಬಳಿ ನಾವು ಹೋಗಬಹುದು. ಯಾರ ಬಳಿ ಬೇಕಾದರೂ ಶಿಷ್ಯತ್ವವನ್ನು ವಹಿಸಬಹುದು. ಆದರೆ ಅಂಥ ನೂರಾರು ಮಂದಿ ಗುರುಗಳೆನಿಸಿಕೊಂಡಿರುವವರ ಬಳಿ ತೆರಳಿದರೆ ವಿಷ್ಣುವೇ ಸರ್ವೋತ್ತಮನಾಗಿದ್ದಾನೆ ಅವನು ದೋಷವಿದೂರನಾಗಿದ್ದಾನೆಂಬ ಅನುಸಂಧಾನ ಬರಲು ಸಾಧ್ಯವಿಲ್ಲ. ಈ ಪ್ರಯೋಜನವು ದೊರಕಬೇಕೆಂದರೆ ರಾಯರನ್ನೇ ಶರಣಾಗಬೇಕು, ರಾಯರನ್ನೇ ಸೇವೆಗೈಯಬೇಕು, ರಾಯರನ್ನೇ ಗುರುಗಳೆಂದು ಉಪಾಸನೆ ಮಾಡಬೇಕು. ಇದರಿಂದ ನಮಗೆ ಸಂಕಲ್ಪ ಇಲ್ಲದಿದ್ದರೂ ಕರುಣಾಮಯಿಗಳಾದ ರಾಯರು ಭಗವಂತನೆಡೆ ನಮ್ಮನ್ನು ಕರೆದುಕೊಂಡು ಹೋಗುತ್ತಾರೆ. ಅವರಿಗಿರುವ ಭಕ್ತವಾತ್ಸಲ್ಯ ಶಬ್ದಗಳಿಂದ ವರ್ಣಿಸಲೇ ಸಾಧ್ಯವಿಲ್ಲ. ನಾವು ಮಾಡಿದ ಎಲ್ಲ ದೋಷಗಳನ್ನು ಪರಿಹರಿಸಿ ನಮ್ಮನ್ನು ಗುಣಶಾಲಿಗಳನ್ನಾಗಿ ಮಾಡುವ ದೊಡ್ಡ ಗುಣ ಇರುವುದು ರಾಯರಲ್ಲಿ ಮಾತ್ರ. ಹಾಗಾಗಿ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಾಧ್ಯಾಯ ಹಾಗೂ ಎರಡನೇ ಅಧ್ಯಾಯವನ್ನು ಯಾರು ಅಧ್ಯಯನ ಮಾಡುತ್ತಾರೋ ಅಂಥವರ ಎಲ್ಲ ದೋಷಗಳನ್ನು ರಾಯರು ಪರಿಹರಿಸುತ್ತಾರೆ, ಅಷ್ಟೇ ಅಲ್ಲದೇ ಗುಣಭರಿತರನ್ನಾಗಿ ಮಾಡಿ ಮೋಕ್ಷಕ್ಕೆ ಕರೆದೊಯ್ಯುತ್ತಾರೆ. ಇದನ್ನು ತಿಳಿಸುವುದಕ್ಕಾಗಿಯೇ ಭಾವದೀಪ ಗ್ರಂಥವನ್ನು ರಚನೆ ಮಾಡಿದ್ದಾರೆ. ದೀಪದ ಗುಣ ಕತ್ತಲೆಯನ್ನು ಪರಿಹರಿಸುವುದು ಮಾತ್ರವಲ್ಲ ಬೆಳಕನ್ನು ನೀಡುವುದು ಕೂಡ ಆಗಿದೆ. ಹಾಗೆಯೇ ನಮ್ಮ ಜೀವನದಲ್ಲಿರುವ ದೋಷಗಳೆಂಬ ಕತ್ತಲೆಯನ್ನು ಪರಿಹರಿಸಿ ಗುಣಗಳೆಂಬ ಬೆಳಕನ್ನು ನೀಡಿ ಅನಂತಕಾಲದ ತನಕ ಸುಖವನ್ನೀಯುವ ಏಕೈಕ ಗುರುಗಳು ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರು.

ಇಂಥ ಗುರುಗಳ ಆರಾಧನೆ ವರ್ಷಕ್ಕೊಮ್ಮೆ ಅಲ್ಲ ಪ್ರತಿನಿತ್ಯ ಪ್ರತಿಕ್ಷಣವೂ ನಮ್ಮ ಹೃದಯದಲ್ಲಿ ನಡೆಯತ್ತಲೇ ಇರಲಿ, ಎಂದೆಂದೂ ರಾಯರೇ ಗುರುಗಳಾಗಿರಲಿ ತನ್ಮೂಲಕವಾಗಿ ಶ್ರೀಮದಾಚಾರ್ಯರ ಮುಖ್ಯಗುರುತ್ವದ ಉಪಾಸನೆ ಮತ್ತಷ್ಟು ಹೆಚ್ಚಾಗಲಿ.

ಅವಿರತವಾಗಿ ಎರಡು ವರುಷಗಳಿಂದ ಮೂರು ಟೀಕೆಗಳ ಜೊತೆ ಭಾವದೀಪ ಗ್ರಂಥವನ್ನು ಅಚ್ಚುಕಟ್ಟಾಗಿ ವಿದ್ವಾನ್. ಬೆಮ್ಮತ್ತಿ ವೇಂಕಟೇಶಾಚಾರ್ಯರು ಅನುವಾದ ಮಾಡುತ್ತಿದ್ದಾರೆ. ಎರಡು ವರ್ಷಗಳಲ್ಲಿ ಎಂಟು ಸಂಪುಟವನ್ನು ಬರೆದು ರಾಯರಿಗೆ ಸಮರ್ಪಣೆ ಮಾಡಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರದ ನಾಕು ಅಧ್ಯಾಯಗಳಲ್ಲಿ ಒಂದು ಅಧ್ಯಾಯ ಪೂರ್ಣಗೊಂಡಿದೆ. ಇನ್ನೂ ಮೂರು ಅಧ್ಯಾಯಗಳ ಅನುವಾದಕಾರ್ಯ ನಡೆಯಬೇಕು. ಎಂಟಕ್ಕೂ ಹೆಚ್ಚಿನ ಸಂಪುಟಗಳನ್ನು ಬರೆಯಬೇಕು. ಅದನ್ನು ನಿರ್ದುಷ್ಟವಾಗಿ ಬರೆಯುವಂತೆ ರಾಯರು ಅವರಿಗೆ ಅನುಗ್ರಹಿಸಲಿ ಮತ್ತು 'ಮುಂದಿನ ರಾಯರ ಆರಾಧನೆಯಲ್ಲಿ ಮುಂದಿನ ಮೂರು ಅಧ್ಯಾಯಗಳನ್ನು ಪರಿಪೂರ್ಣವಾಗಿ ಬರೆದು ಸಮರ್ಪಣೆ ಮಾಡಬೇಕು ಅದಕ್ಕಾಗಿ ಅವರಿಗೆ ಸರಸ್ವತಿಯ ವಿಶೇಷ ಅನುಗ್ರಹವಾಗಲಿ' ಎಂಬುದಾಗಿ ನಾವು ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ಆಶೀರ್ವಾದವನ್ನು ಮಾಡುತ್ತಿದ್ದೇವೆ. ಜಿಜ್ಞಾಸುಗಳಿಗೆ ಸಂಪೂರ್ಣ ಭಾವದೀಪ ಕೃತಿಯ ಆವಶ್ಯಕತೆ ಬಹಳಷ್ಟು ಇರುವುದರಿಂದ ಸುಮಾರು ಇಪ್ಪತ್ತು ಸಂಪುಟಗಳಷ್ಟು ಆಗುವ ಈ ಭಾವದೀಪ ಕೃತಿಯನ್ನು ಬಹಳ ಕಡಿಮೆ ದರದಲ್ಲಿ ನೀಡಬೇಕೆಂದು ಸಂಕಲ್ಪಿಸಿದ್ದೇವೆ. ಈ ನಮ್ಮ ಸಂಕಲ್ಪ ಮುಂದಿನ ರಾಯರ ಆರಾಧನೆಯಲ್ಲಿ ಪೂರ್ಣಗೊಳ್ಳಬೇಕೆಂಬುದೇ ನಮ್ಮ ಆಶಯವಾಗಿದೆ. ಹಾಗಾಗಿ ಅತ್ಯಂತ ಮುತುವರ್ಜಿಯಿಂದ ನಿರ್ದುಷ್ಟವಾಗಿ ವಿಷಯವೈಶಾಲ್ಯದಿಂದ ಈ ಯೋಜನೆಯನ್ನು ಮುಂದಿನ ಆರಾಧನೆಯಲ್ಲಿ ಮುಕ್ತಾಯಗೊಳಿಸುವಂಥ ಶಕ್ತಿ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ಶ್ರೀಮನ್ ಮೂಲರಘುಪತಿರಾಮಚಂದ್ರದೇವರು ಹಾಗೂ ಹರಿವಾಯುಗುರುಗಳು ವಿಶೇಷ ಅನುಗ್ರಹವನ್ನು ಮಾಡಿ ಇನ್ನು ಹೆಚ್ಚಿನ ಅನುವಾದ ಕಾರ್ಯದ ಸಾಮರ್ಥ್ಯವನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-
ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ -
ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# Brahmasutra Bhashya
# With
# Select Commentaries including
# Bhavadipa of Sri Raghavendra Tirtha

*By*

**Vachaspati Dr. V. R. Panchamukhi**

At the outset, I would like to express our sincere respectful danda pranams, to His Holiness Sri Subudhendra Tirtha for his encouragement to publish this Series of Volumes on Sutra Bjhashya, Tatvaprakasika, and other commentaries with Focus on Bhavadipa, with Kannada Translations.

We would also express our gratitude to Mahamahopadhyaya, Pandita Kesari, Vidwan Sri Raja .S. Giri Acharya, for his guidance, support and encouragement in the finalisation of the different Volumes.

The present Volume is concerned with the last six Adhikaranas of the Fourth Pada and the Three Adhikarana's of the First Pada of the Second Adhyaya.

As done in the other Volumes, Vidwan Venkateshacharya has provided translations, with critical notes and discussions, of other commentaries on Sutra Bhashya, such as Sattarkadipavali, Tatva prakasika, Tatvapradipa, along with the Translation of Bhavadipa of Sri Raghavendra Swamigalu. He has also given the account of Tantradipika of Sri Raghavendra Tirtha, whenever necessary.

The present Volume - Volume No. 8 in the series of Volumes on Sri Madhva Bhashya and the Commentaries/Tippanis, thereupon, consists

of the Kannada Translation and Notes, pertaining to the following Nine Adhikaranas:

1. *Jyotirupkramadhikarana (the Second Adhikarana of the Fourth pada of the first Adhyaya);*
2. *Na Sankyopasangrahadhikarna, (the Third Adhikarana of the Fourth pada of the first Adhyaya));*
3. *Akshadhikarana, (the Fourth Adhikarana of the Fourth pada of the first Adhyaya);*
4. *Samakarshadhikarana (the Fifth Adhikarana of the Fourth pada of the first Adhyaya);*
5. *Prakrutyadhikarana (the Sixth Adhikarana of the Fourth pada of the first Adhyaya);*
6. *Etenadhikarana (the Seventh Adhikarana of the Fourth pada of the first Adhyaya);*
7. *Smrutyadhikarana (the First Adhikarana in the First Pada of the Second Adhyaya);*
8. *Navilakshnatvadhikarana (the Second Adhikarana of the First Pada of the Second Adhyaya).*
9. *Abhimanyadhikarna (the Third Adhikarana of the First Pada of the Second Adhyaya).*

Thus, this Eighth Volume deals with, Nine Adhikaranas, in Total - the first six being the Adhikarana of the Fourth Pada of the First Adhyaya, while the remaining three Adhikarana's, belonging to the First Pada of the Second Adhyaya.

Vidwan Sri Bemmatti Venkateshacharya, has covered the detailed explanations given in all the commentaries stated above, in the sequential manner. He has very competently presented the main arguments of Purvapaksha and Siddhanta, and has upheld the superiority of Siddhanta of Madhvacharya, as the final interpretation.

Sri Venkateshacharya, presents, in a succinct manner, the summaries of arguments, developed in the different Adhikaranas listed above.

In order to facilitate the understanding of the main themes dealt with in the different Brahmasutras, covered in this Volume, I have ventured to present brief English Translations of the Brahmasutras. These translations are based upon one of my earlier Books, published by Rashtriya Sanskrita Vidyapeetha, (deemed University) Tirupati.

**Jyorirupakramadhikarna**

**।। ज्योतिरुपक्रमात्तु तथा ह्यधीयत एके ।।**

The word Jyotis referring to the Jyotishtoma Yajna in the context of a Sruti, has the prime meaning of Lord Brahma because this is how all the words are interpreted to refer to Lord Brahma by the use of various interpretative approaches such a etymological meaning (Yougika), more significant etymology (Mahayaga) and the usage by the learned (Vidwadrudhi)

**।। कल्पनोपदेशाच्च मध्वादिवदविरोधः ।।**

To interpret Avyakta to have the prime meaning of Brahma does not conflict with its use in prescribing or implementing the Karmas. Keeping in view the meanings in common usage, the approach of more significant etomology (Mahayoga) will have to be invoked derive the prime meaning. Interpretation of the Avyakta as Brahman has the purpose of facilitating Upasana or worshipping Lord Brahma as an entity who is described by all Vedic words. This approach does not disturb the use of the same words for common wordly activities. For example, the word Madhu is used, in its prime sense, to refer to Lord Vishnu residing inside the Sun, and in its secondary sense to refer to the honey.

**Na Sankyopasangrahadhikarna**

।। न सङ्ख्योपसङ्ग्रहादपि नानाभावादतिरेकाच्च ।।

Here the words dealing with large numbers are reconciled to mean Lord Brahma. In the Phrase "Pancha Pancha Janah" the words Pancha Pancha refer to Lord Brahma in their prime meaning and not the five entities viz. Prana, Eyes, Ears, Food and Mind. All the reasonings, given earlier, justifying such interpretation, are applicable, since the entities like Prana, Eyes etc., are under the control of Lord Brahma, as such the words used to describe the subordinate entities can also be used to describe the commanding entities. Further it is not prescribed that these subordinate entities should be understood to be eligible for Moksha. Lord Brahma has several forms which, though not distinct from each other, can be distinguished from each other on account of 'Visesha". Further, the features of the 'resort' and 'resortee' (Adhara and Adheya) are also applicable to the same Lord Brahma.

।। प्राणादया वाक्यशेषात् ।।

The entities which give the respective capabilities in the Prana, Eyes, Ears, Food and Mind are nothing but the different forms of Lord Brahma because it is only he who has the prowess to bestow these capabitilites and this inference is indicated by the remaining part of the text in the same Sruti.

।। ज्योतिषैकेषामसत्यन्ने ।।

According to a school of thought of the Kanwas, if Food (Anna) is not one of the given entities, Jyotis or the Brahman in the form of lustre could be regarded as the fifth entity. The two systems of counting the five entities with Anna as the fifty entity or with Jyotis as the fifty entity can be mutually reconciled by arguing either that Jyotis and Anna mean the same thing or that these different sets of five are meant for Uapansa by different types of eligible people.

### Akashadhikarna

।। कारणत्वेन चाकाशादिषु यथा व्यपदिष्टोक्तेः ।।

The entity Akasha described in the Sruti, both as the cause and as the effect, refers to Lord Vishnu residing in it and not to the physical entity of Akasha. Just as Vishnu was described in one context as the entity that cannot be fully understood in the same way here also it is described that entity inside the Akasha is the one that cannot be fully understood.

### Samakarshadhikarna

।। समाकर्षात् ।।

All the Vedic words by prime relevance (Mukhya Vrtti) signify Lord Vishnu by the special power of Drawal (Samakarsha), the same words could also be used to refer to the objects of common activities of the world.

।। जगद्वाचित्वात् ।।

Since the words, due to everday common use signify the objects of everyday life, they are obviously well-known in those uses, concealing their prime reference to Brahman.

।। जीवमुख्यप्राणलिङ्गादिति चेत् तद्व्याख्यातम् ।।

Earlier many words were reconciled in Lord Brahma on the reasoning that the entitites denoted by them are under the control of Lord Brhama. However in many contexts in the Sruti, it is stated that as Jiva leaves, every thing dries up or that Mukhya Prana leads all the beings into activities, and hence it appears that Jiva and Mukhya Prana are also the controlling entities. This is not so because in all such contexts it is explained that Lord Vishnu is the inner commanding entity (Antaryami) in Jiva and Mukhya Prana and it is he who motivates everyting into action.

।। अन्यार्थं तु जैमिनिः प्रश्नव्याख्यानाभ्यामपि चैवमेके ।।

Drawing away the words from their prime meaning of Vishnu for facilitating their use in wordly activities is also meant to promote knowledge of Lord Brahma. This is understood by close scrutiny of the questions put forth by Shounaka and the explanations given by Angirasa, and also of the questions put forth by Swetaketu and the explanations given by Uddalaka. In all these contexts the significance of the knowledge of Para Brahma is well brought out. This is the view of sage Jaimini.

।। वाक्यान्वयात् ।।

The prime relevance of the Vaidika words which apparently signify the worldly objects and actions (karma), in referring to Lord Brahma is meant for facilitating a consistent interpretation of the complete sentences of the Vedic text in relation to Lord Brahma.

।। प्रतिज्ञासिद्धेर्लिङ्गमाश्मरथ्यः ।।

Sage Ashmarathya believes that the purpose of using Vedic words to signify wordly actions and objects is necessarily meant for convincingly establishing the thesis that knowledge is the only instrument for achieving salvation and not Karma. If the actions (Karmas) are explained in details, the ultimate futility of their results will be demonstrated and thereby the prime status of knowledge is clearly established.

।। उत्क्रमिष्यत एवं भावादित्यौडुलोमिः ।।

Sage Audulomi opines that for every eligible person desiring to realise salvation through the path of knowledge, the performance of action (Karmas) is an extremely essential step for acquiring purity of mind and thereby realising greater devotion and inquisitiveness for true knowledge - Jijnasa. Hence the use of the Vedic words to describe Karmas is Justified.

॥ अवस्थितेरिति काशकृत्स्नः ॥

Sage Kasa Krtsna holds the view that if we have to acquire the conviction that Lord Brahma is the ultimate Resort of everything in world, such as Karma, deities etc, we should acquire knowledge about the Karmas and the worldly objects which are all dependent on Him. Hence the use of the Vedic words to describe the wordly actions is justified.

**Prakrutyadhikarna**

॥ प्रकृतिश्च प्रतिज्ञादृष्टान्तानुपरोधात् ॥

Lord Brahma is referred to not only by words of masculine gender but also by all words of feminine gender. The word Prakrti and all such faminine gender words signify Lord Vishnu. It is only if such interpretation is accepted that the various statements and similies and examples given in the Srutis become appropriate.

॥ अभिध्योपदेशाच्च ॥

The word Prakrti signifies Lord Brahma because is it preached in Smrtis that Lord Brahma is in the form of his desire referred to by the word Prakrti.

॥ साक्षाच्चोभयाम्नानात् ॥

The feminine words like Prakrti also should signify Lord Brahma because in a single context Lord Vishnu is directly described as both feminine (Stri) and masculine (Purusha)

॥ आत्मकृतेः परिणामात् ॥

The word Prakrti would also mean special action. Since Lord Brahma causes the transformations of the Prakrti and thereby demonstrated the diversity of his Special Actions, he is aptly described by the word Prakrti.

।। योनिश्च हि गीयते ।।

Lord Brahma can be described by all the feminine words because in many contexts His capability to reproduce from his own body is well narrated.

**Etena sarve vyakhyataadhikarna**

।। एतेन सर्वे व्याख्याता व्याख्याताः ।।

As a result of the reasoning given in the earlier sections, all the Vedic words-even those signifying Null and Void etc. would have the prime meaning of Lord Vishnu. This is firmly True and True only.

**First Adhyaya Ends**

## ADHYAYA - II

## AVIRODHADHAYAYA

### Pada -1

**Smrutyadhikarna**

।। स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ।।

We cannot argue that the Srutis which proclaim that Lord Vishnu is the creator of the Universe, become unauthentic because they are incongruent with respect to the Smrtis like Pasupata, Sankhya, Kanada etc. which preach that Shiva is the cause of the entire Universe. On the contrary, the Smrtis proclaiming Shiva's supremacy themselves should be regarded as unauthentic since they are incogruent with the relatively more forceful Srutis like Pancharatra that preach the Supremacy of Lord Vishnu.

।। इतरेषां चानुपलब्धेः ।।

It is actually observed in reality that even by performing the functions prescribed in the Smrtis like Pashupata and by conforming to the Do's and Don't prescribed in them one would not derive the results that ought to have been visible and perceptible as stipulated in them. Hence these Smrtis are obviously not authoritative for knowledge.

।। एतेन योगः प्रत्युक्तः ।।

For the same reason that often the prescribed results are not realised in reality, even the Yogasastra deserves to be discarded. Yogasastra stipulates that by performing Yogas, first one would experience sweat, then body tremble etc. but his sequence of effects if often not seen in many cases of the practitioners.

**Na Vilakshnatvadhikarna**

।। न विलक्षणत्वादस्य तथात्वं च शब्दात् ।।

On the contrary, we cannot argue that the Srutis and those Smrtis that conform to the Srutis, are not authentic because they have the special features distinct from others. Srutis are Apourusheya unwritten by anybody and are also self-authentic (Swatah-Pramana) without the needs of any other authority. Smrtis that conform to Srutis have the distinction of strictly conforming to the thesis propounded in the Srutis. There is corroborative evidence in this regard. Thus Srutis and the conforming Smrtis are indeed authentic unlike the Shaiva Smrtis.

।। दृश्यते तु ।।

In the case of Srutis and the Srouta Smrtis, the results of the Do's and Don'ts prescribed in them are invariably realised by the eligible ones in the same manner as stated in them.

**Abhimanyadhikarna**

**।। अभिमानिव्यपदेशस्तु विशेषानुगतिभ्याम् ।।**

There are many statements in the Srutis such as 'The earth spoke, water spoke'. In their apparent meaning, such statements seem to imply falsehood because earth or water cannot speak as they are motionless and inanimate. We cannot argue that for this reason, the Srutis are unauthentic. In all such statements, the reference, is to the commanding deities which provide the inner motive force. The commanding deities have the special prowess of being invisible despite possessing their own bodies and being all-pervasive. They have also the special capability of entering the other objects and being pervasive despite the feature of limited size.

**।। दृश्यते च ।।**

The commanding deities are visible to the eligible Yogins.

The Jijnasus are indeed grateful to Vidwan Sri Bemmatti Venkateshacharya, for preparing such an extremely useful Volume on Brahmasutra Bhashya, covering several Commentaries and providing good critical comparative discussions.

We pray the the scholar author continues his pains-taking exercise to complete all the Four Adhyayas of Brahmasutras, in a similar manner with useful details.

**Vachaspati Dr. V. R. Panchamukhi**
Chancellor, Sri Gurusarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

## ಜನಮನದಲ್ಲಿ ಸದ್-ಭಾವನೆ ಬಿತ್ತಲು
## ಇನ್ನೊಮ್ಮೆ ಬಾ ಗುರುರಾಯ ..!!

''ನಾ ಗುಣವಂತ...'' ''ನಾ ಸಿರಿವಂತ...'' ''ನಾ ರೂಪವಂತ...'' ''ನಾ ಮಾಡಿದ್ದು ತಪ್ಪಲ್ಲ...'' ''ನಾ ತಪ್ಪು ಮಾಡೋದೂ ಇಲ್ಲ...'' ''ನಾ ಹೇಳಿದಂತೆಯೇ ಆಗಬೇಕು...'' ''ನಾ ಅಂದುಕೊಂಡಿದ್ದೇ ಸತ್ಯ...'' ಇಂಥ ಅಹಂಕಾರ ಮಮಕಾರಗಳಿಂದ ತುಂಬಿದ ಬಿಗುಮಾನದ ಜಗತ್ತಿದು. ಇಲ್ಲಿ ತಪ್ಪಿಗೆ ಮಾತ್ರ ಸಮರ್ಥನೆ, ಸತ್ಯಕ್ಕಲ್ಲ...!!!

ಇಂಥ ಜಗತ್ತಿನಲ್ಲಿ ಸತ್ಯ ತಲೆ ಎತ್ತಲು ಸಾಧ್ಯವಾ....? ಸಾತ್ವಿಕ ಬಯಕೆಗಳು ಚಿಗುರಲು ಸಾಧ್ಯವಾ...? ಏನು ಮಾಡೋದು...? ಕಣ್ಣಾರೆ ಕಂಡದ್ದನ್ನು "ಕಂಡಿದ್ದೇನೆ" ಎನ್ನುವಂತಿಲ್ಲ. ಕಿವಿಯಾರೆ ಕೇಳಿದ್ದನ್ನು "ಕೇಳಿದ್ದೇನೆ" ಎನ್ನುವಂತಿಲ್ಲ. ಕಣ್ಣಿದ್ದೂ ಕುರುಡರಾಗಿ ಬದುಕಬೇಕು. ಕಿವಿಯಿದ್ದೂ ಕಿವುಡರಾಗಿ ಬದುಕಬೇಕು. ಎಲ್ಲಿ ಏನೇ ಆದರೂ ತುಟಿ ಬಿಚ್ಚುವಂತಿಲ್ಲ. ಅನ್ಯಾಯ ಪ್ರತಿಭಟಿಸುವಂತಿಲ್ಲ. ಮೌನಪ್ರತಿಭಟನೆಗೆ ಕಿಮ್ಮತ್ತಿಲ್ಲ.

ಬಿಸಿರಕ್ತ ಕುದಿಯುವ ಈ ಯೌವನದಲ್ಲೂ ತಾಕತ್ತಿಲ್ಲದ ನಪುಂಸಕನಂತೆ ಬದುಕಬೇಕಾಗಿದೆ. ಇಂಥವರ ನಡುವೆ ಬದುಕುವ ದೌರ್ಭಾಗ್ಯ ಒಂದೇ ನನ್ನ ಸ್ವತ್ತು. "ಅಬ್ಬಾ .... !!" ಈಗಲೇ ಹೀಗೆ. ಮುಂದೆ ..... ಹೇಗೋ...... ? ಏನೋ .... !!!! ನೆನೆದರೆ ದಿಗಿಲಾಗುತ್ತೆ. ಮೈ ಜುಮ್ ಎನ್ನುತ್ತೆ. ಅನ್ಯಾಯ, ಅಧರ್ಮಗಳ ಈ ಬಿರುಗಾಳಿಗೆ ಜಗತ್ತನ್ನು ಮುಗಿಸುವ ತನಕವೂ ಸಮಾಧಾನ ಇಲ್ಲವೆನಿಸುತ್ತೆ.... !!!!

ಜಗತ್ತು ಕೆಟ್ಟಿತು. ಈ ಜಗತ್ತಿನಲ್ಲಿ ಮುಂದೆ ನಾ ಬದುಕಲಾರೆ. ಇಂಥ ಗೊಂದಲದ ಬಿರುಗಾಳಿಯಲ್ಲಿ ನಾ ಸಿಲುಕಿ ಕಂಗಾಲಾಗಿರುವೆ. ಗುರುರಾಯರೇ ಭಕ್ತಿಯಿಂದ ನಿಮ್ಮಲ್ಲೊಂದು ನನ್ನ ಕಳಕಳಿಯ ಪ್ರಾರ್ಥನೆ.... -

ಜನಮನದಲಿ ಸದ್ಭಾವನೆ ಬಿತ್ತಲು ಇನ್ನೊಮ್ಮೆ ಬಾ ಗುರುರಾಯ...!!

ಇನ್ನೊಮ್ಮೆ ಬಾ ಗುರುರಾಯ...!!

ಗುರುರಾಯರು ಉತ್ತರಿಸುವರು : - "ಜಗತ್ತು ಕೆಟ್ಟಿಲ್ಲ, ಕೆಡುವುದೂ ಇಲ್ಲ'. ಜನರ ಮನಸ್ಸುಗಳು ಕೆಟ್ಟಿವೆ. ಇದ ಕಂಡು "ಜಗತ್ತೇ ಕೆಟ್ಟಿದೆ" ಎಂದು ಕಂಗಲಾಗಬೇಕಿಲ್ಲ. ಒಮ್ಮೆ ಕಣ್ಮುಚ್ಚಿ ಕುಳಿತು ಯೋಚಿಸಿದರೆ ಸತ್ಯಸಂಗತಿ ಅರಿವಾಗುವುದು. ಮತ್ತೊಬ್ಬರ ಮನಸ್ಸು ಎಷ್ಟು ಹಾಳಾಗಿದೆ ಎಂದು ಅರಿಯುವ ಮೊದಲು ನಿನ್ನ ಮನಸ್ಸು ಎಷ್ಟು ಶುದ್ಧವಾಗಿದೆ ಎಂದು ಪರೀಕ್ಷಿಸು. ನಿನ್ನ ಮನಸ್ಸು ಉಚ್ಚಾಯಸ್ಥಿತಿಯಲ್ಲಿದ್ದರೆ ನೂರು ಕೋಟಿ ಜನರ ಮನಸ್ಸು ಹಾಳಾದರೂ ನಿನ್ನ ಆತ್ಮೋದ್ಧಾರಕ್ಕೆ ಭಂಗವಿಲ್ಲ. ನಿನ್ನ ಎಲ್ಲ ಸಾಧನೆಯ ದಾರಿದೀಪಗಳು ಬೆಳಗುತ್ತಲೇ ಇವೆ".

ಆ ಭಗವಂತ ಮಾತ್ರ ಗುಣವಂತ, ಸಿರಿವಂತ, ಸಕಲರ ಕಣ್ಮಣಿಯಾದ ರೂಪವಂತ. ಕ್ರಿಯಾವಂತ, ಹಿರಿವಂತ. ಅವನ ಮುಂದೆ ಈ ವಿಶಾಲ ಜಗತ್ತು ಪರಮಾಣು ಕೂಡ ಅಲ್ಲ. ಕಣ್ಣು ಹರಿಸಿದಷ್ಟು ಎತ್ತರದ ಗುಣಗಳ ಹಿಮಾಲಯ. ಮೈಮನಗಳ ಮರೆಸುವ ದಿವ್ಯಚೆಲುವು. ಪ್ರತಿಯೊಬ್ಬರ ನೆಮ್ಮದಿಯ ಶಾಶ್ವತ ತಾಣ. ವೇದಗಂಗೆಯ ರಭಸದ ಪ್ರವಾಹದ ಏಕೈಕ ದಿವ್ಯಸಂಗಮ. ಇದುವೇ ವಾಚ್ಯ-ವಾಚಕಗಳ ಗಂಗಾ-ಸಾಗರ ಸಂಗಮ. ಭಗವತ್‌ಸಾಗರಕ್ಕೆ ಬಂದು ಸೇರುವುದು ವೇದಗಂಗೆ ಮಾತ್ರವಲ್ಲ. ಇತಿಹಾಸ

ಪುರಾಣಾದಿಗಳೆಂಬ ಸಿಂಧು, ಸರಸ್ವತಿ, ಯಮುನಾ ಮೊದಲಾದ ಮಹಾನದಿಗಳೂ ಕೂಡ ಒಮ್ಮತದಿಂದ ಬಂದು ಸೇರುವವು. ಲೌಕಿಕ ಶಬ್ದಗಳೆಂಬ ಹಳ್ಳ-ಕೊಳ್ಳಗಳ ನೀರು, ಬೈಗುಳ ಶಬ್ದಗಳೆಂಬ ರಸ್ತೆ ಬದಿಗಳ ನೀರುಗಳೂ ಸಹ ನದಿಯ ಜೊತೆ ಸೇರಿ, ಸಮುದ್ರ ಸೇರುವವು. ಪ್ರತಿಯೊಂದು ಶಬ್ದಗಳೆಂಬ ನೀರಿನ ಹನಿಗಳು ಬಹುಗುಣಗಳನ್ನು ಹೊತ್ತು ತರುವವು. ಆದ್ದರಿಂದ ಇವನು ಉಪ್ಪಿನ ಸಮುದ್ರವಲ್ಲ, ಗುಣಗಣಸಮುದ್ರ. ಜಗತ್ತಿನಲ್ಲಿ ಎಲ್ಲೆಲ್ಲೂ ಹುಡುಕಿದರೂ ದೊರೆಯದ ಅನರ್ಘ್ಯ ರತ್ನಗಳೆಂಬ ಮಹಾಗುಣಗಳಿಂದ ತುಂಬಿದ ಅನಂತ ಸಮುದ್ರ. ಇದುವೇ ಗುರುರಾಯರು ಸಾಧಿಸಿದ ಸಮನ್ವಯಾಧ್ಯಾಯದ ಸಾರಸರ್ವಸ್ವ. ಏತನ್ಮೂಲಕ ಸದ್ಭಾವನೆ ಬಿತ್ತಲು ಶಿಷ್ಯನಿಗಿಂತ ಮೊದಲೇ ಬಂದು ಕುಳಿತಿರುವ ನಿಜವಾದ ಗುರು, ಗುರುಗಳಿಗೂ ಗುರು, ಆದ್ದರಿಂದಲೇ ಗುರುರಾಘವೇಂದ್ರರಿವರು.

ಎಲ್ಲಾ ನಾದದಲ್ಲೂ ಭಗವಂತನ ಗುಣವೇ ಕಾಣುತ್ತದೆ. ಸಮುದ್ರದ ಭೋರ್ಗರೆಯುವ ಶಬ್ದವೂ ಕೂಡ ಕೈಯೆತ್ತಿ ಹರಿಪಾದಗಳಲ್ಲಿ ಶರಣೆಂದು 'ಜಗದೊಡೆಯನೆಂದರೆ ನೀನೊಬ್ಬನೇ' ಎಂದು ಸಾರುತ್ತಿದೆ. ಹಲ್ಲಿಯ ಲೊಚ ಲೊಚ ಶಬ್ದ 'ಎಷ್ಟು ಅದ್ಭುತ ಹರಿಮಹಿಮೆ' ಎನ್ನುತ್ತಿದೆ. ಗಾಳಿ ಬೀಸುವ ಶಬ್ದ ಶ್ರೀಹರಿಗೆ ಸುವ್ವೀ ಸುವ್ವೀ ಎಂದು ಜೋಗುಳ ಪಾಡುತ್ತಿದೆ. ಪ್ರಪಂಚದ ಚರಾಚರವೆಲ್ಲ ಭಗವಂತನನ್ನೇ ಕೊಂಡಾಡುತ್ತಿದೆ. ಅಜ್ಞಾನದ ಕೊಂಪೆಯಲ್ಲಿ ಮುಳುಗಿದ ಮನದಲ್ಲಿ ಇಂಥ ಶ್ರೀಹರಿಯೆಂಬ ಸದ್-ಭಾವವೆಂಬ ಬೀಜಬಿತ್ತಿದ ಗುರುರಾಯರಿಗೆ ಶರಣು ! ಶರಣು !!

ಸಮನ್ವಯಾಧ್ಯಾಯ ಓದಿ ಮುಗಿಸಿದ ನನ್ನ ಬಾಳು ಪಾವನವಾಯಿತು. ಆಹಾ !! ಗುರುರಾಯರೇ ತಮ್ಮ ತಿಳಿವಿನ ಸಾಗರ ಕಂಡಾಗ ಆಗುವ ಸಂತೋಷ ಬಣ್ಣಿಸಲಸಾಧ್ಯ. ಭಗವಂತನ ಸರ್ವೋತ್ಕರ್ಷವನ್ನು ಪ್ರತಿಪಾದನೆ ಮಾಡುವ ತಮ್ಮ ಜ್ಞಾನಾಮೃತದ ಸಮುದ್ರದಲ್ಲಿ ಮುಳುಗಿ ಎದ್ದವನಿಗೆ ಸುರಲೋಕದ ಸುಖವೂ ಕೂಡ ಅತಿ ತುಚ್ಛ! ಏನಿದು ತಮ್ಮ ಪ್ರತಿಭೆ ! ತಮ್ಮ ಈ ಗ್ರಂಥ ಪ್ರಪಂಚದ ಸಂಶಯಗಳಿಗೆಲ್ಲಾ ಉತ್ತರಿಸುತ್ತಿದೆ. ಅದೆಷ್ಟೋ ಜನ್ಮದ ನನ್ನ ಪುಣ್ಯ ಫಲಿಸಿದೆ. ಈ ಭಾವದೀಪ ಗ್ರಂಥದಲ್ಲಿ ತಮ್ಮನ್ನೇ ಸಾಕ್ಷಾತ್ತಾಗಿ ಕಾಣುವ ಸೌಭಾಗ್ಯ ಈ ಕಣ್ಣುಗಳಿಗೆ ಬಂದೊದಗಿದೆ. ನನ್ನ ಬಹು ಜನ್ಮಗಳ ದಾರಿದೀಪ ಈಗ ಕಂಗೊಳಿಸುತ್ತಿದೆ. ಸಮನ್ವಯಾಧ್ಯಾಯದ ಮೂಲಕ ಭಗವಂತನ ನಿಖಿಲಪೂರ್ಣಗುಣತ್ವವನ್ನು ಮನದಟ್ಟು ಮಾಡಿಸಿದ ತಮ್ಮ ಸೇವೆಯಲ್ಲಿ ನಾ ಅವಿರತನಿರತ.

ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥರು ಶ್ರೀಪಾದಂಗಳವರೇ

ತಮ್ಮ ಮಹಿಮೆಯನ್ನೇ ತಿಳಿಯಲು ಸಾಧ್ಯವಾಗದ ನನಗೆ ರಾಯರ ಮಹಿಮೆಯನ್ನು ತಿಳಿಯುವುದು ಹೇಗೆ ಸಾಧ್ಯ ? ತಮ್ಮ ಆಶೀರ್ವಾದದಿಂದ ಸಮನ್ವಯಾಧ್ಯಾಯದ ಕಾರ್ಯ ಮುಗಿಯಿತು. ಭಗವಂತನು ಸಕಲಗುಣಪರಿಪೂರ್ಣ ಎಂಬುದು ಸಾಬೀತಾಯಿತು. ರಾಯರ ಭಾವದೀಪದ ಪ್ರಕಾಶ

ನಿರಂತರ ಅಭಿವೃದ್ಧಿಯಾಯಿತು. ಎಂಟು ಬೃಹತ್ ಸಂಪುಟಗಳ ಮೂಲಕ ಬ್ರಹ್ಮಮೀಮಾಂಸಾಶಾಸ್ತ್ರದ ಒಂದು ಅಧ್ಯಾಯದ ಅನುವಾದ ಕಾರ್ಯ ಮುಗಿಯಿತು. ಇದು ತಮ್ಮ ಆಶೀರ್ವಾದದಿಂದ ಸಾಧ್ಯವಾಯಿತು. ಈ ಕಾರ್ಯ ತಾವೊಬ್ಬರು ಬಿಟ್ಟರೆ, ಬೇರೆ ಯಾರಿಂದಲೂ ಕೂಡ ಸಾಧ್ಯವಾಗುತ್ತಿರಲಿಲ್ಲ. ತಮ್ಮ ನರನಾಡಿಗಳಲ್ಲಿ ಹರಿಯುತ್ತಿರುವ ಗುರುಗಳ ಭಕ್ತಿ ದೇವರ ಚಿಂತನೆ ಅದ್ಭುತ ! ಅತ್ಯದ್ಭುತ !! ಒಂದೆಡೆ ಆಧ್ಯಾತ್ಮಿಕ ಸೇವೆ. ಮತ್ತೊಂದು ಕಡೆ ಆದಿಭೌತಿಕ ಸೇವೆ ತಾವು ಊಹೆಗೂ ನಿಲುಕದಷ್ಟು ಸಂಪತ್ತನ್ನು ವಿನಿಯೋಗ ಮಾಡಿ, ಇಂಥ ರಾಯರ ಗ್ರಂಥಗಳನ್ನು ಪ್ರಕಾಶನ ಮಾಡುತ್ತಿರುವಿರಿ. ಜೊತೆಯಾಗಿ ರಾಯರಲ್ಲಿ ಅತಿಶಯವಾದ ಭಕ್ತಿಯಿಂದ ಲೌಕಿಕ ಸಂಪತ್ತಿನಿಂದಲೂ ಅವರನ್ನು ಅಲಂಕರಿಸುತ್ತಿರುವಿರಿ. ಅದೇನು ಅದ್ಭುತ ! ರಾಯರ ಮೂಲ ಬೃಂದಾವನಕ್ಕೆ ಬಹುಕೋಟಿ ಮೌಲ್ಯದ ಶಿಲಾಮಂಟಪದ ನಿರ್ಮಾಣ. ಸುವರ್ಣಗೋಪುರದ ನಿರ್ಮಾಣ. ವಿಮಾನ ರಾಘವೇಂದ್ರರ ಪ್ರತಿಷ್ಠಾಪನೆ. ಮೂಲರಾಮಚಂದ್ರದೇವರಿಗೆ ಕಲ್ಪನೆಗೂ ಸಿಗದ ಬಹುಕೋಟಿ ಮೌಲ್ಯದ ಸುವರ್ಣ ಮಂಟಪದ ನಿರ್ಮಾಣ. ಒಂದೊಂದು ಅದ್ಭುತ ! ಒಂದೊಂದು ಅನ್ಯಾದೃಶ....!!

ಈಗ ದ್ವಿತೀಯಾಧ್ಯಾಯ ಪ್ರಾರಂಭ. ಸಕಲ ಕುವಾದಿಗಳ ನಿರಾಕರಣೆ ಶುರು. ಎರಡನೇ ಅಧ್ಯಾಯದ ಮೂಲಕ ಸಕಲ ಕುಮತಗಳ ನಿರಾಕರಣೆಯನ್ನು ಅಂತರಂಗದಲ್ಲಿ ಹೇಗೆ ತಂದುಕೊಳ್ಳಬೇಕೆಂಬ ವಿಚಾರವನ್ನು ಭಾವದೀಪಗ್ರಂಥದಲ್ಲಿ ಗುರುರಾಜರು ಖಚಿತಪಡಿಸಿರುವರು. ಅದನ್ನು ಯಥಾರ್ಥವಾಗಿ ಅನುವಾದ ಮಾಡಿ ರಾಯರ ಕೃಪೆಗೆ ಪಾತ್ರರಾಗುವಂತೆ ಆಶೀರ್ವದಿಸಿರಿ. ಎಂದೆಂದೂ ತಮ್ಮ ಅನುಗ್ರಹದ ರಕ್ಷಾಕವಚವಾಗಿರಲಿ. ತಮ್ಮ ಚರಣಕಮಗಳಲ್ಲಿ ಅನಂತಾನಂತ ನಮನಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಅನುಕ್ರಮಣಿಕಾ

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ಜ್ಯೋತಿರುಪಕ್ರಮಾಧಿಕರಣ

ಈ ಅಧಿಕರಣದಲ್ಲಿ ವರ್ಣ, ಪದ ಮೊದಲಾದ ಸಕಲವಿಧವಾದ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲು ಹೊರಟಿದ್ದಾರೆ. 'ತಾವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ, ಸರ್ವೇ ಘೋಷಾಃ' ಎಂಬುದಾಗಿ ಐದನೆಯ ಆರಣ್ಯಕವು ಭಗವಂತನನ್ನು ಸಕಲ ಶಬ್ದಪ್ರತಿಪಾದ್ಯನೆಂದು ಅವಶ್ಯವಾಗಿ ಮುಮುಕ್ಷುಗಳು ತಿಳಿಯಬೇಕೆಂದು ಘೋಷಣೆ ಮಾಡಿದೆ. ಆದ್ದರಿಂದ ಪ್ರತಿಯೊಂದು ವರ್ಣಗಳ, ಪ್ರತಿಯೊಂದು ಪದಗಳ ಸಮನ್ವಯವು ಅತ್ಯಂತ ಅನಿವಾರ್ಯ. ಹಿಂದಿನ ಅಧಿಕರಣದಲ್ಲಿ ದೇವತಾ ವಾಚಕವಾದ ಪದಗಳ ಸಮನ್ವಯವನ್ನು ಹಾಗೂ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳಲ್ಲಿರುವ ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಲಾಯಿತು. ಪ್ರಕೃತ ಈ ಅಧಿಕರಣದಲ್ಲಿ ಕರ್ಮವನ್ನು ಪ್ರತಿಪಾದನೆ ಮಾಡಲು ಹೊರಟಿರುವ ಕರ್ಮಕಾಂಡವೆನಿಸಿದ ಯಜುರ್ವೇದದ ಮಂತ್ರಗಳನ್ನೆಲ್ಲಾ ಸಮನ್ವಯ ಮಾಡಲಾಗಿದೆ. ಮತ್ತು ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನೂ ಕೂಡ ಮಾಡಲಾಗಿದೆ. ಅಷ್ಟೇ ಅಲ್ಲದೇ ಆಯಾ ಕರ್ಮವಾಚಕವಾದ ಜ್ಯೋತಿಷ್ಟೋಮಾದಿ ಸಮುದಾಯರೂಪವಾದ ಪದಗಳ ಅವಯವವೆನಿಸಿದ 'ಜ್ಯೋತಿಃ' 'ಸ್ತೋಮ' ಮೊದಲಾದ ಪದಗಳ ಸಮನ್ವಯವನ್ನೂ ಕೂಡ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಸಿದ್ಧಸ್ವರೂಪವಾದ ದೇವತಾವಾಚಕ ಪದಗಳ ಸಮನ್ವಯದ ಅನಂತರ ಸಾಧ್ಯಸ್ವರೂಪವಾದ ಕರ್ಮದ ಸಮನ್ವಯವು ಅತ್ಯಂತ ಪ್ರಸ್ತುತವಾಗುತ್ತದೆ. ಹಿಂದಿನ ಅಧಿಕರಣದಲ್ಲಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ', 'ಬದ್ಧಃ', 'ಅವರಃ' ಮೊದಲಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಇದರಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಗುಣವಷ್ಟೇ ಸಿದ್ಧವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸದೇ ಪ್ರತ್ಯೇಕವಾಗಿ ಒಂದೊಂದು ಪದಗಳ ಪ್ರವೃತ್ತಿನಿಮಿತ್ತವೂ ಕೂಡ ಪರಮಾತ್ಮನಲ್ಲೇ ಬರುತ್ತಿದೆಯೆಂದು ಹೇಳುತ್ತಿರುವುದರಿಂದ ಅನೇಕ ಪದಗಳ ಸಮನ್ವಯವೂ ಸಿದ್ಧವಾಗುತ್ತದೆ.

ಸಕಲಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ತಿಳಿದರೆ ಮಾತ್ರ, ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಹಾಗಾಗಿ ಪ್ರಥಮಾಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಮಾಡಲಾಗುತ್ತಿದೆಯೆಂದು ಸಮನ್ವಯಾಧಿ- ಕರಣದಲ್ಲಿ ಪ್ರತಿಜ್ಞೆ ಮಾಡಲಾಯಿತು. ಇದು ಸಾಧ್ಯವಿಲ್ಲ. ಏಕೆಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮಗಳಲ್ಲೇ ಪ್ರಸಿದ್ಧವಾಗಿವೆ. ಎಲ್ಲವೂ ಹರಿನಾಮಗಳೇ ಆದರೆ ಸ್ವರ್ಗವನ್ನು ಬಯಸುವವನು ವಸಂತಕಾಲದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂಬ ಅರಿವು ಹೇಗೆ ತಾನೇ ಮೂಡುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಆಯಾ ಶಬ್ದಗಳು ಕರ್ಮಪ್ರತಿಪಾದಕವಾಗಲಿ ಎಂಬ ಸಮಾಧಾನವನ್ನೇನೋ ಹೇಳಬಹುದು. ಇದರಿಂದ ಸ್ವಾತಂತ್ರ್ಯವೆಂಬ ಒಂದೇ ಗುಣವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ ಹೊರತು, ವಿಭಿನ್ನವಾದ ಶಬ್ದಗಳ ಸಮನ್ವಯದಿಂದ ಆಯಾ ಪ್ರವೃತ್ತಿನಿಮಿತ್ತಗಳು ಹೇಳುವ ವಿಭಿನ್ನವಾದ ಗುಣಗಳು ಬ್ರಹ್ಮನಲ್ಲಿ ಸಿದ್ಧವಾಗುವುದೇ ಇಲ್ಲ. ಆದ್ದರಿಂದ ಯಾವುದೇ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕಾದರೆ, ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸುವಂತೆ ಆಯಾ ಪ್ರವೃತ್ತಿನಿಮಿತ್ತಗಳನ್ನೂ ಕೂಡ ಬ್ರಹ್ಮನಲ್ಲಿ ಸಮನ್ವಯ ಮಾಡಲೇಬೇಕು. ಆವಾಗ ಮಾತ್ರ ಅನೇಕ ಗುಣಗಳನ್ನು ಸಾಧಿಸಿದಂತಾಗುತ್ತದೆ. ಹಾಗೇನಾದರೂ ಪ್ರತಿಯೊಂದು ಪದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲು ಹೊರಟರೆ, ಎಲ್ಲವೂ ಹರಿನಾಮವಾಗುತ್ತದೆ. ಆದ್ದರಿಂದ ವೇದದಲ್ಲಿರುವ ಕರ್ಮಕಾಂಡವು ವ್ಯರ್ಥವಾಗಿ ಕರ್ಮಾನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದೆ.

ಮತ್ತು 'ಜ್ಯೋತಿಷ್ಟೋಮೇನ' ಎಂಬಲ್ಲಿರುವ 'ಜ್ಯೋತಿ', 'ಸ್ತೋಮ' ಎಂಬ ಅವಯವಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದಾದರೆ, 'ಜ್ಯೋತಿಷ್ಟೋಮ' ಎಂಬ ಸಮುದಾಯವು ಬ್ರಹ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಅದರಂತೆ 'ಜ್ಯೋತಿ' ಎಂಬ ಪದದಲ್ಲಿರುವ 'ಜ' ಮತ್ತು 'ಓತಿಃ' ಎಂಬೆರಡು ಅವಯವಗಳು ಬ್ರಹ್ಮನ ಹೆಸರುಗಳಾದರೆ, 'ಜ್ಯೋತಿ' ಎಂಬ ಪದವು ಬ್ರಹ್ಮನ ಹೆಸರಾಗಲು ಸಾಧ್ಯವಿಲ್ಲ. ಏಕೆಂದರೆ ಯಾವ ಅರ್ಥವು ಯಾವ ಸಮುದಾಯದಿಂದ ಪ್ರತಿಪಾದ್ಯವಾಗುತ್ತದೋ, ಅದೇ ಅರ್ಥವು ಅದರ ಅವಯವದಿಂದ ಪ್ರತಿಪಾದ್ಯವಾಗುವುದಿಲ್ಲವೆಂಬುದು ಲೋಕಸಿದ್ಧವಾದ ನಿಯಮ. 'ಪಂಕಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುತ್ತದೆ. ಆದರೆ 'ಪಂಕಜ' ಶಬ್ದದ ಅವಯವವಾದ 'ಪಂಕ' ಮತ್ತು 'ಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುವುದಿಲ್ಲ. ಆದ್ದರಿಂದ ಸರ್ವಶಬ್ದಸಮನ್ವಯವನ್ನು ಮಾಡುವುದು ಸುಲಭದ ಮಾತಲ್ಲ.

ಜಗತ್ತಿನಲ್ಲಿ ಶ್ರುತವಾದ ಸರ್ವಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಇದನ್ನು 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರವು ಪ್ರತಿಪಾದನೆ ಮಾಡುತ್ತಿದೆ.

ಐತರೇಯೋಪನಿಷತ್ತಿನಲ್ಲಿ ಪರಮಾತ್ಮನು ಬ್ರಹ್ಮಾದಿಜೀವರ ಶರೀರದಲ್ಲಿ ಪ್ರವೇಶ ಮಾಡಿದ್ದಾನೆಂದು ಪ್ರಾರಂಭ ಮಾಡಿ, ಸಕಲ ಋಙ್ ಮಂತ್ರಗಳೂ, ಸಕಲ ವೇದಗಳೂ, ಧ್ವನಿಗಳೆಲ್ಲವೂ ಪರಮಾತ್ಮನ ನಾಮಗಳೆಂದು ಮುಕ್ತಾಯ ಮಾಡಲಾಗಿದೆ. ಆದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ 'ಜ್ಯೋತಿಃ' ಶಬ್ದದ ಸಮನ್ವಯವಷ್ಟೇ ವಿವಕ್ಷಿತವಲ್ಲ. ಹಾಗಾಗಿದ್ದಲ್ಲಿ ಸರ್ವಶಬ್ದಸಮನ್ವಯದ ಉಪಪಾದನೆಗಾಗಿ 'ಉಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ ಉಪನಿಷತ್ತನ್ನು ಉಲ್ಲೇಖಿಸುವ ಅವಶ್ಯಕತೆ ಇರುತ್ತಿರಲಿಲ್ಲ. ಹೀಗೆ ಸರ್ವಶಬ್ದಸಮನ್ವಯಕ್ಕೆ ಉಪಯುಕ್ತವಾದ ಪ್ರಮಾಣವನ್ನು ಹೇಳಿದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ ಸಕಲಶಬ್ದಗಳೂ ಕೂಡ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಐತರೇಯೋಪನಿಷತ್ತೇ ಆಧಾರವಾದ ಪ್ರಮಾಣ. ಮತ್ತು

> ಅವಸ್ವರತಿ ಗರ್ಗರೋ ಗೋಧಾ ಪರಿ ಸನಿಷ್ವಣತ್ ।
> ಪಿಂಗಾ ಪರಿ ಚನಿಷ್ಕದದಿಂದ್ರಾಯ ಬ್ರಹ್ಮೋದ್ಯತಮ್ ॥

ಎಂಬ ಶ್ರುತಿಯೂ ಸಹ ಸಕಲವಿಧವಾದ ಧ್ವನಿಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಹೇಳಿ, ವಿಶೇಷವಾಗಿ ವೇದಪ್ರತಿಪಾದ್ಯತ್ವವನ್ನು ಸಮರ್ಥನೆ ಮಾಡುತ್ತಿದೆ. ಆದ್ದರಿಂದಲೂ ಪರಮಾತ್ಮನೇ ಸರ್ವಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನು.

ವೇದದಲ್ಲಿರುವ ಎಲ್ಲ ಸಂಧಿಗಳೂ ಪೂರ್ವೋತ್ತರವರ್ಣಗಳೂ ವಿಷ್ಣುವೆಂಬ ನಾಮದ ಅರ್ಥವೇ ಆಗಿವೆ. ಆದ್ದರಿಂದ ಎಲ್ಲವೂ ಪರಮಾತ್ಮ ಪ್ರತಿಪಾದಕವೆಂದು ತಿಳಿಯಬೇಕು. ಎಲ್ಲ ವರ್ಣಗಳೂ, ಎಲ್ಲ ಸಂಧಿಗಳೂ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' ಎಂಬ ಶ್ರುತಿಯು ವಿಷ್ಣುನಾಮಾರ್ಥವೆಂದು ತಿಳಿದೇ ವೇದಾಧ್ಯಯನದಲ್ಲಿ ತೊಡಗಬೇಕೆಂದು ಎಚ್ಚರಿಸುತ್ತಿದೆ.

'ಣ'ಕಾರ, 'ಷ'ಕಾರಗಳ ಅರ್ಥವನ್ನು ಸಕಲವರ್ಣಗಳು ಹೇಳಿದ ಮಾತ್ರದಿಂದ ವಿಷ್ಣುನಾಮಾರ್ಥವನ್ನು ಹೇಳಿದಂತೆ ಹೇಗಾಗುತ್ತದೆ ? ಎಂದು ಶಂಕಿಸಬಾರದು. 'ಣ'ಕಾರ ಹಾಗೂ 'ಷ'ಕಾರ ಎಂಬೆರಡು ಅಕ್ಷರಗಳೇ ವಿಷ್ಣುನಾಮದಲ್ಲಿ ಮುಖ್ಯವಾಗಿವೆ. 'ವಿ' ಎಂಬುವುದು ಉಪಸರ್ಗವಾಗಿದೆ. 'ಉನ್' ಎಂಬುದೂ ಕೂಡ ಶೀಲಾರ್ಥಕವಾದ ಪ್ರತ್ಯಯವಾಗಿದೆ. ಇವೆರಡೂ ಅಪ್ರಧಾನವಾದ್ದರಿಂದ ಮುಖ್ಯವಾಗಿ ಣಕಾರ, ಷಕಾರಗಳೇ ವಿಷ್ಣುನಾಮವೆಂದು ಶ್ರುತಿಯ ಅಭಿಪ್ರಾಯವಾಗಿದೆ. ಆದ್ದರಿಂದ ಸ್ವರ, ವರ್ಣ, ಪದ ರೂಪದಿಂದಲೂ ವೇದಕ್ಕೆ ಪರಮಾತ್ಮನಲ್ಲೇ ಸಮನ್ವಯವಿದೆ ಎಂದು ಹೇಳುವುದರಿಂದ ವಾಕ್ಯದ ಸಮನ್ವಯೂ ಕೂಡ ಇದೆಯೆಂಬುದು ಅರ್ಥಾತ್ ಸಿದ್ಧವಾಗುತ್ತದೆ.

ಇದರಂತೆ 'ಅಃ ಇತಿ ಬ್ರಹ್ಮ' ಅ ಎಂಬ ಅಕ್ಷರವು ಪರಮಾತ್ಮನ ನಾಮ ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಪರಮಾತ್ಮನ ನಾಮಸ್ವರೂಪವೆಂದು ಹೇಳಲಾಗಿದೆ. 'ಅಕಾರೋ ವೈ ಸರ್ವಾವಾಕ್' ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಸಕಲಶಬ್ದಗಳ ಸ್ವರೂಪವಾಗಿದೆಯೆಂದು ಹೇಳಲಾಗಿದೆ. ಅಕಾರವು ಸರ್ವಶಬ್ದಗಳ ಸ್ವರೂಪವಾಗುವುದು ಪ್ರತ್ಯಕ್ಷವಾದ್ದರಿಂದ, ಎಲ್ಲಾ ಶಬ್ದಗಳೂ ಅಕಾರಕ್ಕೆ ವ್ಯಾಖ್ಯಾನಗಳಾಗಿವೆ ಎಂದು ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ಆವಾಗ ವ್ಯಾಖ್ಯೇಯವಾದ ಅಕಾರವು ಯಾರನ್ನು ಪ್ರತಿಪಾದನೆ ಮಾಡುತ್ತದೋ, ವ್ಯಾಖ್ಯಾನರೂಪವಾದ ಸಕಲಶಬ್ದಗಳೂ ಕೂಡ ಅವನನ್ನೇ ಪ್ರತಿಪಾದನೆ ಮಾಡಬೇಕು. ಇದರಿಂದ ಸರ್ವಶಬ್ದಗಳ ಮುಖ್ಯತಾತ್ಪರ್ಯ ಪರಮಾತ್ಮನೆಂದು ನಿರ್ಣಯವಾಗುತ್ತದೆ.

ಐತರೇಯೋಪನಿಷತ್ತಿನಲ್ಲಿ 'ಯದ್ವಾಚ ಓಮಿತಿ ಯಚ್ಚ ನೇತಿ ಯಚ್ಛಾಸ್ಯಾಃ' ಇತ್ಯಾದಿಯಾಗಿ ಅಂಗೀಕಾರವಾಚಕವಾದ, ನಿಷೇಧಾರ್ಥಕವಾದ, ಕಠಿಣಾರ್ಥಕವಾದ ಎಲ್ಲಾ ವಿಧಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದರೂ ಆ ಜ್ಞಾನವು ಪರಿಪಕ್ವವಾದಾಗ ಮುಕ್ತರಾಗಿ ಕೃತಕೃತ್ಯರಾದರು ಎಂದು ಹೇಳಲಾಗಿದೆ. ಆದರೆ 'ತಮೇವಂ ವಿದ್ವಾನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪರಮಾತ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು ಹೇಳಲಾಗಿದೆ. ಈ ಎರಡೂ ವಾಕ್ಯಗಳು ಉಪಪನ್ನವಾಗಬೇಕಾದರೆ ವೈದಿಕಶಬ್ದಗಳೆಲ್ಲವೂ ಪರಮಾತ್ಮ ವಾಚಕಗಳೇ ಆಗಬೇಕು. ಹೀಗೆ ಈ ಶ್ರುತಿಯಿಂದಲೂ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ.

ಮತ್ತು 'ಕಶ್ಛಂದಸಾಂ ಯೋಗಮಾವೇದ ಧೀರ' ಯಾರು ತಾನೇ ವೇದದ ಯೋಗಾರ್ಥವನ್ನು ತಿಳಿಯಲು ಸಮರ್ಥನು ಎಂದು ಶ್ರುತಿಯು ಆಕ್ಷೇಪ ಮಾಡಿದೆ. ಅನಂತರ ಪ್ರಜಾಪತಿಯೇ ಎಲ್ಲಾ ವೈದಿಕಶಬ್ದಗಳ ಯೋಗಾರ್ಥವನ್ನು ತಿಳಿಯಲು ಸಮರ್ಥನಾಗಿದ್ದಾನೆಂದು 'ಕಶ್ಛಂದಸಾಂ' ಎಂಬ ಶ್ರುತಿಯು ಉತ್ತರಿಸುತ್ತಿದೆ. 'ಪ್ರಜಾಪತಿರ್ವೈ ಕಃ' ಎಂಬ ಶ್ರುತಿಯು ಹೇಳುವಂತೆ ಪ್ರಜಾಪತಿಯು 'ಕಃ' ಎನಿಸಿದ್ದಾನೆ. ಆಕ್ಷೇಪಾರ್ಥದಲ್ಲಿಯೂ 'ಕಃ' ಎಂಬ ಶಬ್ದವನ್ನು ಪ್ರಯೋಗ ಮಾಡಬಹುದು. ಪ್ರಜಾಪತಿಯೆಂಬರ್ಥದಲ್ಲಿಯೂ 'ಕಃ' ಎಂಬರ್ಥವನ್ನು ಪ್ರಯೋಗ ಮಾಡಬಹುದು. ಶ್ರುತಿಯು ಎರಡು ಅರ್ಥಗಳನ್ನು ವಿವಕ್ಷಿಸುತ್ತಿದೆ. ಚತುರ್ಮುಖ ಎಂಬರ್ಥವನ್ನು ಇಟ್ಟುಕೊಂಡಾಗ, ಚತುರ್ಮುಖನಿಗೆ ಯೋಗಾರ್ಥಜ್ಞಾನ ಸಾಮರ್ಥ್ಯವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಪದಸಮನ್ವಯಕ್ಕೆ ಯಾರೂ ಅರ್ಹರಲ್ಲ ಎಂದು ಹೇಳಲಾಗದು. 'ಕಃ' ಎಂಬುದಕ್ಕೆ ಆಕ್ಷೇಪಾರ್ಥವನ್ನಿಟ್ಟುಕೊಂಡಾಗ ಬೇರೆಯವರಿಗೆ ಅರ್ಹತೆಯಿಲ್ಲ ಎಂದಷ್ಟೇ ಶ್ರುತಿಯ ಅಭಿಪ್ರಾಯ. ಆದ್ದರಿಂದ ಯೌಗಿಕವಾದ ಪದಸಮನ್ವಯವು ಕಠಿಣವೆಂದು ಹೇಳಿದ್ದರಿಂದ ಚತುರ್ಮುಖಾದಿಗಳು ಅರ್ಹರಾಗಿದ್ದಾರೆಂದು ತಿಳಿಯುತ್ತದೆ. ಕೃಷ್ಣ ಪರಮಾತ್ಮನೂ ಕೂಡ ಭಾಗವತದಲ್ಲಿ 'ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ' ಎಂಬುದಾಗಿ ಸಕಲ ವೈದಿಕಶಬ್ದಗಳ ತಾತ್ಪರ್ಯನು ತಾನೇ ಆಗಿದ್ದೇನೆಂದು

ಹೇಳಿಕೊಂಡಿದ್ದಾನೆ. ಈ ಎಲ್ಲಾ ಪ್ರಮಾಣಗಳ ಆಧಾರದಿಂದ ವೇದದಲ್ಲಿರುವ ಪ್ರತಿಯೊಂದು ಸ್ವರಗಳು, ವರ್ಣಗಳು, ಪದಗಳು, ವಾಕ್ಯಗಳು ಶ್ರೀಹರಿಯಲ್ಲಿಯೇ ಸಮನ್ವಯಗೊಳ್ಳುತ್ತವೆಂದು ನಿರ್ಣಯವಾಗುತ್ತವೆ.

ರೂಢಿ ಹಾಗೂ ಯೋಗಗಳ ನಡುವೆ ಯೌಗಿಕವಾದ ಅರ್ಥವೇ ಮುಖ್ಯವಾಗಿರುತ್ತದೆ. ವೇದದಲ್ಲಿರುವ ಸಕಲಶಬ್ದಗಳು ರೂಢ್ಯರ್ಥವನ್ನು ಹಾಗೂ ಯೋಗಾರ್ಥವನ್ನು ಹೇಳಿದರೂ ಯೋಗಾರ್ಥವೇ ಮುಖ್ಯ. ಅನವಸ್ಥಾದೋಷ ಪರಿಹಾರಕ್ಕಾಗಿ ಮಾತ್ರ ಯೌಗಿಕವಾದ ಶಬ್ದಗಳಲ್ಲಿ ರೂಢಿಗಳನ್ನು ಕಲ್ಪಿಸಲಾಗಿರುತ್ತದೆ.

ಯೌಗಿಕಾರ್ಥದಲ್ಲಿಯೂ ಕೂಡ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಉಳಿದೆಲ್ಲಾ ಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವೆ.

ಇವೇ ಮೊದಲಾದ ಸ್ಮೃತಿಗಳಿಂದ ಪರಮಾತ್ಮನೊಬ್ಬನೇ ಪರಮಮುಖ್ಯವೃತ್ತಿಯಿಂದ ಸಕಲವೇದ-ಪ್ರತಿಪಾದ್ಯನೆಂದು ತಿಳಿಯಬೇಕು.

ಹೀಗೆ ಭಗವಂತನಲ್ಲಿ ವೇದಗಳ ಅನೇಕರೀತಿಯ ಸಮನ್ವಯಗಳನ್ನು ತಿಳಿಯಬೇಕು. ವೇದದಲ್ಲಿರುವ ಪ್ರತಿಯೊಂದು ಪದಗಳು ಧರ್ಮ, ದೇವತೆ, ಯಜ್ಞ ಮತ್ತು ಅವುಗಳಿಗೆ ಸಂಬಂಧಪಟ್ಟ ವಸ್ತುಗಳನ್ನು ಅಮುಖ್ಯವಾಗಿ ತಿಳಿಸುವುದರ ಜೊತೆಗೆ ಭಗವಂತನನ್ನು ಮುಖ್ಯವಾಗಿ ತಿಳಿಸುತ್ತವೆ. ಪ್ರತಿಯೊಂದು ಪದಗಳು ಅಕ್ಷರಗಳು ಭಗವಂತನನ್ನೇ ಬೋಧಿಸುತ್ತವೆ. ಇಂಥ ಸಮನ್ವಯವನ್ನು ಬ್ರಹ್ಮದೇವರು ಮಾತ್ರ ತಿಳಿಯಬಲ್ಲರು. ಇದಕ್ಕೆ ಪದಸಮನ್ವಯವೆಂದು ಹೆಸರು.

ಮತ್ತೊಂದು ವಾಕ್ಯಸಮನ್ವಯ. ವಾಕ್ಯದಲ್ಲಿರುವ ಇಂದ್ರ, ಅಗ್ನಿ, ವರುಣ ಮುಂತಾದ ಒಂದೊಂದು ಪದಗಳು ಭಗವಂತನನ್ನು ತಿಳಿಸಿದಾಗ ಮಾತ್ರ ಇಡೀ ವಾಕ್ಯವು ಭಗವಂತನ ಗುಣವರ್ಣನೆಯಲ್ಲಿ ಪರ್ಯವಸಾನವಾಗುತ್ತದೆ. ಇದನ್ನು ವಾಕ್ಯಸಮನ್ವಯವೆಂದು ಹೇಳುತ್ತಾರೆ.

ವಾಕ್ಯಸಮನ್ವಯದ ಮತ್ತೊಂದು ಕ್ರಮ ಹೀಗಿದೆ - ಯಜ್ಞ ಮುಂತಾದ ಅನೇಕ ಕರ್ಮಗಳ ಅನುಷ್ಠಾನ ಪ್ರಕಾರವನ್ನು ವಾಕ್ಯಗಳು ತಿಳಿಸುತ್ತವೆ ಮತ್ತು ದೇವತೆಗಳನ್ನೂ ಕೂಡ ಸಮಗ್ರವಾಗಿ ತಿಳಿಸುತ್ತವೆ. ಆದರೆ ವಾಕ್ಯಗಳ ಮುಖ್ಯತಾತ್ಪರ್ಯ ಸ್ವರ್ಗವಾಗಲೀ, ದೇವತೆಗಳಾಗಲೀ ಆಗಿರುವುದಿಲ್ಲ. ಹೊರತಾಗಿ ಇಂತಹ ಸತ್ಕರ್ಮಗಳ ಅನುಷ್ಠಾನದಿಂದ ಅಂತಃಕರಣದ ನೈರ್ಮಲ್ಯವನ್ನು ಪಡೆದು ಅದರ ಜೊತೆಗೆ ಈ ಕರ್ಮಗಳು ಕೇವಲ ಅಲ್ಪವಾದ ಸಾಂಸಾರಿಕ ಫಲವನ್ನಷ್ಟೇ ನೀಡುತ್ತವೆಂದು ತಿಳಿದು ಶುದ್ಧವಾದ ಅಂತಃಕರಣದಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ನಮ್ಮನ್ನು ಪ್ರಚೋದಿಸುವುದೇ ಕರ್ಮಕಾಂಡದ ಉದ್ದೇಶವಾಗಿರುತ್ತದೆ. ಹೀಗೆ ಭಗವಂತನ ಉದ್ದೇಶವಾಗಿಯೇ ಎಲ್ಲಾ ವಾಕ್ಯಗಳು ಪರ್ಯವಾಸನಗೊಳ್ಳುತ್ತವೆ. ಇದು ವಾಕ್ಯಸಮನ್ವಯದ ಮತ್ತೊಂದು ಪ್ರಕಾರ.

ಇನ್ನೂ ಹೆಚ್ಚೆಂದರೆ ವೇದದಲ್ಲಿರುವ ಶಬ್ದಗಳಷ್ಟೇ ಅಲ್ಲದೇ ನಮ್ಮ ವ್ಯವಹಾರದಲ್ಲಿರುವ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ. ಅಷ್ಟೇ ಅಲ್ಲದೇ ಹಕ್ಕಿಗಳ ಕಲರವ, ಸಮುದ್ರದ ಘೋಷ, ಮಗುವಿನ ಗೆಜ್ಜೆಯ ನಿನಾದ, ಹಲ್ಲಿಯ ಲೊಚಗುಟ್ಟುವಿಕೆ ಇವೆಲ್ಲಾ ಧ್ವನಿಗಳು ಪರಮಾತ್ಮನ ಗುಣಗಾನಗಳೆಂದು ಜ್ಞಾನಿಗಳು ತಿಳಿಯುತ್ತಾರೆ. ಅತ್ಯಂತ ಕಠಿಣವಾದ ಪದಸಮನ್ವಯದ ವಿಷಯದಲ್ಲಿ 'ತಂ ಯಚ್ಛತಮ್' ಎಂಬ ವಾಕ್ಯವು ಪ್ರಮಾಣವಾಗಿದೆ. ಎಲ್ಲಾ ಪದಗಳೂ ಬ್ರಹ್ಮನ ಹೆಸರೇ ಆದಲ್ಲಿ ಸರ್ವಶಬ್ದವಾಚ್ಯತ್ವವನ್ನು ಈ ವಾಕ್ಯಕ್ಕೂ ಕೂಡ ವಿಧಾನ ಮಾಡಲು ಬರುವುದಿಲ್ಲ. ಏಕೆಂದರೆ ಈ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳೂ ಪರಮಾತ್ಮನ ಹೆಸರೇ ಆದಲ್ಲಿ ಎಲ್ಲಾ ಪದಗಳಿಂದಲೂ ವಾಚ್ಯನೆಂಬ ತಾತ್ಪರ್ಯವನ್ನು ಹೇಗೆ ಹೊಂದುತ್ತದೆ ? ಈ ಗೊಂದಲವು ಸಹಜವಾಗಿ ಬರುತ್ತದೆ. ಆದರೆ ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗಬೋಧಕವಾದ ಪದಸಮನ್ವಯವು ತನಗೆ ಉಪಜೀವ್ಯವಾದ ವಾಕ್ಯಸಮನ್ವಯವನ್ನು ವಿರೋಧಿಸಲು ಸಾಧ್ಯವಿಲ್ಲ. ಆದ್ದರಿಂದ ಪದಸಮನ್ವಯದ ಜೊತೆಗೆ ವಾಕ್ಯಸಮನ್ವಯವನ್ನೂ ಕೂಡ ಇದರಿಂದ ತಿಳಿಯಬೇಕು.

ವೇದಗಳಲ್ಲಿ ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ, ಎಲ್ಲವೂ ಭಗವಂತನ ನಾಮಗಳೇ ಆಗುತ್ತವೆ. ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ವಿಷಯವನ್ನು ಅವು ಹೇಳಲಾರವು. ಆವಾಗ ವೇದದಿಂದ ಯಾವ ಕರ್ಮಾನುಷ್ಠಾನಗಳನ್ನು ಯಾವುದೇ ಶಬ್ದಗಳ ವ್ಯುತ್ಪತ್ತಿಯನ್ನೂ ಕೂಡ ತಿಳಿಯಲು ಸಾಧ್ಯವಿಲ್ಲದಂತಾಗುತ್ತದೆ. ನಮ್ಮ ಎಲ್ಲಾ ಕರ್ಮಾನುಷ್ಠಾನಗಳು ಲೋಪವಾಗುವುದಲ್ಲದೇ, ಸಕಲ ವ್ಯವಹಾರಗಳೂ ಲೋಪವಾಗುತ್ತವೆ. ಆದ್ದರಿಂದ ಸರ್ವಶಬ್ದ ಸಮನ್ವಯವನ್ನು ತಿಳಿಯುವುದು ಬಹಳ ಕಷ್ಟವಲ್ಲವೇ?

ಸಮನ್ವಯದ ಕ್ರಮಗಳನ್ನು ಸರಿಯಾಗಿ ತಿಳಿದಾಗ ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಯಾವುದೇ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ ಆ ಶಬ್ದಗಳ ಅವಯವಗಳು ಲೌಕಿಕವಾದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿ' ಎಂಬ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ, 'ಜೀ' 'ಓತಿ' ಎಂಬ ಅವಯವಗಳು ಲೌಕಿಕವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಓತಿ' 'ಜೀ' ಎಂಬುದು ಪರಮಾತ್ಮನನ್ನು ಪ್ರತಿಪಾದನೆ ಮಾಡುವುದಾದರೆ ಆದರ ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವ್ಯುತ್ಪತ್ತಿಯ ತಿಳುವಳಿಕೆಯು ಕಷ್ಟವಾಗುವುದಿಲ್ಲ. ಇದರಂತೆ ಕರ್ಮವಿಲೋಪ ಪ್ರಸಂಗಕ್ಕೂ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೂ, ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ. ಮುಖ್ಯವೃತ್ತಿಯಿಂದ ಯಜ್ಞಯಾಗಾದಿಕರ್ಮಗಳನ್ನೂ ಕೂಡ ಪ್ರತಿಪಾದಿಸುತ್ತವೆ. 'ವಸಂತೇ ವಸಂತೇ ಜ್ಯೋತಿಷಾ ಯಜೇತ'

ಎಂಬ ವಾಕ್ಯವು ವಸಂತಮಾಸದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕೆಂದು ತಿಳಿಸುತ್ತದೆ. ಅದರ ಜೊತೆಗೆ ಪರಮಮುಖ್ಯವೃತ್ತಿಯಿಂದ ಪ್ರತಿಯೊಂದು ಪದಗಳೂ ಭಗವಂತನ ವಿಭಿನ್ನವಾದ ಗುಣಗಳನ್ನು ವರ್ಣಿಸುತ್ತವೆಂದು ಹೇಳುತ್ತವೆ. ಶಬ್ದಗಳಲ್ಲಿ ಮುಖ್ಯವೃತ್ತಿ, ಪರಮಮುಖ್ಯವೃತ್ತಿಯೆಂಬ ವೈವಿಧ್ಯವಿದೆ. ಶಬ್ದಗಳು ಪರಮಾತ್ಮನ ಗುಣಧರ್ಮಗಳನ್ನು ಹೇಳುವುದಷ್ಟೇ ಅಲ್ಲದೇ, ಜ್ಞಾನಿಗಳ ರೂಢಿಯು ಇದ್ದಲ್ಲಿ ಪರಮಮುಖ್ಯವೃತ್ತಿಯೆಂದು ಕರೆಸಿಕೊಳ್ಳುತ್ತದೆ. ಒಂದು ವೇಳೆ ಲೌಕಿಕವಾಗಿ ಯೋಗರೂಢಿಗಳಿದ್ದಲ್ಲಿ ಮುಖ್ಯವೃತ್ತಿಯೆನಿಸಿಕೊಳ್ಳುತ್ತದೆ. ಹೀಗೆ ವೈವಿಧ್ಯವನ್ನು ತಿಳಿದಾಗ ಯಾವುದೇ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಮತ್ತು ಲೌಕಿಕಪದಾರ್ಥಗಳೆಲ್ಲವನ್ನೂ ಶಬ್ದಗಳು ಲಕ್ಷಣಾವೃತ್ತಿಯಿಂದಲೇ ಪ್ರತಿಪಾದನೆ ಮಾಡಿದಂತಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಕೋಶ, ವ್ಯಾಕರಣ ಮೊದಲಾದವುಗಳಿಂದ ಲೌಕಿಕಾರ್ಥಗಳಲ್ಲಿ ಶಬ್ದಗಳು ಪ್ರಮಾಣಸಿದ್ಧವಾಗಿವೆ. ಬಾಧಕವಿಲ್ಲದೇ ಇಂತಹ ಪ್ರಮಾಣಸಿದ್ಧವಾದ ಅರ್ಥವನ್ನು ಬಿಡುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಲೋಕದಲ್ಲಿ ಮುಖ್ಯವೃತ್ತಿಯನ್ನು ಒಪ್ಪಿಯೇ ಪರಮಾತ್ಮನಲ್ಲಿ ಶಬ್ದಗಳ ಸಮನ್ವಯವನ್ನು ಮಾಡಬೇಕೆಂಬುದು ಗಮನಿಸಬೇಕಾದ ಸೂಕ್ಷ್ಮವಿಚಾರ.

ಶಬ್ದದಲ್ಲಿ ಅನೇಕವಿಧವಾದ ವೃತ್ತಿಗಳಿವೆ. ಅವುಗಳಲ್ಲಿ ಮಹಾಯೋಗ ಮತ್ತು ಮಹಾಯೋಗರೂಢಿ ಎಂಬುದು ಮುಖ್ಯವಾದ ಶಬ್ದವೃತ್ತಿಗಳು. ಆ ಶಬ್ದಗಳು ಹೇಳುವ ಗುಣಧರ್ಮಗಳು ಶ್ರೀಹರಿಯಲ್ಲಿ ನಿರತಿಶಯವಾಗಿ ಅಥವಾ ಸ್ವತಂತ್ರವಾಗಿ ಇರುವುದರಿಂದ ಜ್ಞಾನಿಜನರು ಅದನ್ನು ಶ್ರೀಹರಿಯಲ್ಲಿ ಬಹಳವಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ಶಬ್ದಗಳು ಪರಮಾತ್ಮನನ್ನು ಮಹಾಯೋಗವೃತ್ತಿಯಿಂದ ಕರೆಯುತ್ತವೆ. ಇಂದ್ರ, ಪ್ರಾಣ ಮೊದಲಾದ ಶಬ್ದಗಳೇ ಇದಕ್ಕೆ ಉದಾಹರಣೆಗಳು. ಇನ್ನು ಇಂದ್ರಶಬ್ದದ ಪ್ರವೃತ್ತಿನಿಮಿತ್ತವಾಗಿರುವ ಐಶ್ವರ್ಯ, ಅಗ್ನಿ, ಪ್ರಾಣ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುವ ಜಗತ್ಪ್ರವರ್ತಕತ್ವ ಇವುಗಳೆಲ್ಲವೂ ಶ್ರೀಹರಿಯಲ್ಲಿ ನಿರತಿಶಯವಾಗಿ ಇರುತ್ತವೆ. ಆದ್ದರಿಂದ ಈ ಶಬ್ದಗಳು ಭಗವಂತನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತವೆ.

ಆಯಾ ಶಬ್ದಗಳ ಗುಣಧರ್ಮಗಳು ಪರಮಾತ್ಮನಲ್ಲಿ ನಿರತಿಶಯವಾಗಿ ಇರುವುದರ ಜೊತೆಗೆ ಲೋಕದಲ್ಲಿ ಹಾಗೂ ವೇದದಲ್ಲಿ ಪ್ರಸಿದ್ಧಿಯಿದ್ದರೆ ಆ ಶಬ್ದಗಳು ಮಹಾಯೋಗರೂಢಿಯೆಂಬ ಶಬ್ದಶಕ್ತಿಯಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ. ವಿಷ್ಣು, ನಾರಾಯಣ, ಹರಿ ಮೊದಲಾದ ಶಬ್ದಗಳು ಇದಕ್ಕೆ ಉದಾಹರಣೆ. ಈ ಮಹಾಯೋಗ ಮತ್ತು ಮಹಾಯೋಗ ರೂಢಿಗಳನ್ನು ಪರಮಮುಖ್ಯವೃತ್ತಿಯೆಂದು ಕರೆಯುತ್ತಾರೆ. ಇದರಂತೆ ಯೋಗ, ರೂಢಿ, ಯೋಗರೂಢಿಯೆಂಬ ಮೂರು ಮುಖ್ಯವೃತ್ತಿಗಳಿವೆ. ಇವುಗಳು ಲೌಕಿಕವಾದ ಪದಾರ್ಥಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ ಎಂಬ ನಾಲ್ಕುಬಗೆಯ ವೃತ್ತಿಗಳು ಗೌಣವಾದ ವೃತ್ತಿಗಳೆಂದು ಕರೆಸಿಕೊಳ್ಳುತ್ತಾ

ಲೌಕಿಕವಾದ ಪದಾರ್ಥಗಳನ್ನು ಗೌಣವಾಗಿಯೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಪರಮಾತ್ಮನಲ್ಲಿ ಮಾತ್ರ ಇರುವ ಎರಡು ವೃತ್ತಿಗಳನ್ನು ಬಿಟ್ಟರೆ ಲೋಕದಲ್ಲಿ ಏಳುಬಗೆಯ ವೃತ್ತಿಗಳು ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ೧. ರೂಢಿ, ೨. ಯೋಗ, ೩. ಯೋಗರೂಢಿ, ೪. ರೂಢೋಪಚಾರ, ೫. ರೂಢಲಕ್ಷಣ, ೬. ಉಪಚಾರ, ೭. ಲಕ್ಷಣಾ ಎಂಬುದಾಗಿ.

ಈ ಅಧಿಕರಣದಲ್ಲಿ 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧಿಯತೇ ಏಕೇ', 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬೆರಡು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿ ಪ್ರತಿಯೊಂದು ಪದಗಳಿಂದ ಶ್ರೀಹರಿಯೇ ಪ್ರತಿಪಾದ್ಯನೆನ್ನಲು ಸ್ವಪಕ್ಷಸಾಧಕಪ್ರಮಾಣವನ್ನು ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ ಸಕಲಪದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಿದರೆ ಬರುವಂತಹ ಬಾಧಕವನ್ನು ಪರಿಹರಿಸಿದ್ದಾರೆ.

ಪ್ರಥಮಸೂತ್ರದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು ವಿಷಯವಾಕ್ಯವಾಗಿದೆ. ವಿಷಯವಾಕ್ಯದಲ್ಲಿ ಮೊದಲು ಶ್ರುತವಾದ ವಸಂತ ಶಬ್ದವನ್ನೇ ಸೂತ್ರದಲ್ಲಿ ಉಲ್ಲೇಖಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರಬಹುದು. ಆದರೆ ಜ್ಯೋತಿಷ್ಟೋಮಯಾಗವು ಅತ್ಯಂತ ಪ್ರಧಾನವಾದ್ದರಿಂದ ತತ್‌ಪ್ರತಿಪಾದಕವಾದ 'ಜ್ಯೋತಿಃ' ಶಬ್ದದಿಂದ ಉಳಿದ ಅಮುಖ್ಯವಾದ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸುವುದು ಸೂಕ್ತವೆಂಬ ದೃಷ್ಟಿಯಿಂದ 'ಜ್ಯೋತಿಃ' ಶಬ್ದವನ್ನೇ ಸೂತ್ರಕಾರರು ಉಲ್ಲೇಖಿಸಿದ್ದಾರೆ. ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಹೇತುವಿನಿಂದ ಕರ್ಮಕ್ರಮಗಳ ವಿರೋಧವನ್ನುಎಲ್ಲಾ ಶಬ್ದಗಳು ಶ್ರೀಹರಿಯಲ್ಲಿ ಸಮನ್ವಯವಾದರೆ ಶಬ್ದಗಳ ವ್ಯುತ್ಪತ್ತಿಯೇ ಅಶಕ್ಯವಾಗುತ್ತದೆಂಬ ವಿರೋಧವನ್ನು ಪರಿಹರಿಸಿದ್ದಾರೆ. ಪ್ರತಿಯೊಂದು ಪದಗಳೂ ಅವಾಂತರತಾತ್ಪರ್ಯದಿಂದ ಮುಖ್ಯವೃತ್ತಿಯನ್ನೇ ಹೊಂದಿ, ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಮುಖ್ಯತಾತ್ಪರ್ಯವನ್ನು ಹೊಂದಿ, ಅಲೌಕಿಕನಾದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ 'ಜ್ಯೋತಿಃ' ಎಂಬ ಶಬ್ದವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡುವಾಗ 'ಜೀ' ಮತ್ತು 'ಓತಿ' ಎಂಬ ಎರಡು ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿಃ' ಎಂಬ ಸಮಸ್ತಪದವು ಶ್ರೀಹರಿಯನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಪ್ರತಿಯೊಂದು ಪದಗಳ ಯೋಗಾರ್ಥವನ್ನು ಶ್ರೀಹರಿಯಲ್ಲಿ ತಿಳಿಯಬೇಕು.

ಗಮನಿಸಬೇಕಾದ ಮುಖ್ಯವಿಚಾರ - ಈ ಅಧಿಕರಣದಲ್ಲಿ ವೇದದಲ್ಲಿರುವ ಎಲ್ಲಾ ಪದಗಳ ಸಮನ್ವಯವನ್ನು ಮಾಡಿದ್ದಾರೆ. ಉಳಿದ ಅಧಿಕರಣಗಳಲ್ಲಿ ಒಂದೊಂದು ವಾಕ್ಯಗಳ ಸಮನ್ವಯವನ್ನು ಮಾಡಿದ್ದಾರೆ. ಹೊರತು, ಸಮಸ್ತ ವೇದಸಮನ್ವಯವನ್ನು ಎಲ್ಲಿಯೂ ಮಾಡಿಲ್ಲ. ಈ ಅಧಿಕರಣದ ವಿಶೇಷವೆಂದರೆ ಬೇರೆ ಅಧಿಕರಣಗಳಲ್ಲಿ ಪ್ರಸಕ್ತವಾದ ಎಲ್ಲಾ ವಾಕ್ಯಗಳಲ್ಲಿರುವ ಪದಗಳ ಸಮನ್ವಯ. ಆದ್ದರಿಂದಲೇ ಶ್ರೀಮದಾಚಾರ್ಯರು ಅಧಿಕರಣನ್ಯಾಯಗಳನ್ನು ಸಂಗ್ರಹಿಸುವಾಗ 'ಸರ್ವ' ಎಂಬುದನ್ನು ಈ ಅಧಿಕರಣದ ನ್ಯಾಯಗಳೆಂದು ಹೇಳಿರುತ್ತಾರೆ.

# ನಸಂಖ್ಯೋಪಸಂಗ್ರಹಾಧಿಕರಣ

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಹುತ್ವಸಂಖ್ಯೆಯನ್ನು ಹೇಳುವ 'ಪಂಚ' 'ಜನಾಃ' ಮೊದಲಾದ ಶಬ್ದಗಳು ಇರುತ್ತವೆ. ಈ ಶಬ್ದಗಳು ಒಬ್ಬನೇ ಬ್ರಹ್ಮನನ್ನು ಹೇಳಲು ಸಾಧ್ಯವಿಲ್ಲ. ಬಹುತ್ವವಾಚಕವಾದ ಈ ಶಬ್ದಗಳು ಬಹುಜನರನ್ನೇ ಹೇಳಬೇಕು ಹೊರತು, ಒಬ್ಬನನ್ನು ಹೇಳಲು ಸಾಧ್ಯವಿಲ್ಲ. ಮತ್ತು ಆಧಾರಾಧೇಯಭಾವವೂ ಕೂಡ ಈ ಶ್ರುತಿಯಿಂದಲೇ ತಿಳಿಯುತ್ತಿದೆ. ಒಬ್ಬನೇ ಬ್ರಹ್ಮನಲ್ಲಿ ಆಧಾರಾಧೇಯಭಾವವೂ ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ವಾಕ್ಯಶೇಷದಲ್ಲಿ ಪ್ರಸಕ್ತರಾದ ಪ್ರಾಣಾದಿಗಳೇ ಈ ಶ್ರುತಿಗಳಿಂದ ಪ್ರತಿಪಾದ್ಯರಾಗುತ್ತಾರೆ ಹೊರತು, ಬ್ರಹ್ಮನಾಗುವುದಿಲ್ಲ.

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯ ಸಮನ್ವಯಕ್ಕಾಗಿ ಈ ಅಧಿಕರಣವು ಪ್ರಾರಂಭವಾಗಬೇಕಾಗಿಲ್ಲ. ಏಕೆಂದರೆ ಹಿಂದಿನ ತದಧೀನತ್ವಾಧಿಕರಣದಿಂದಲೇ ಇಲ್ಲಿರುವ ಶಬ್ದಗಳ ಸಮನ್ವಯವೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗುತ್ತದೆ. ಬಹುತ್ವವೆಂಬ ಪ್ರವೃತ್ತಿನಿಮಿತ್ತವು ಪರಮಾತ್ಮನ ಅಧೀನವಾದ್ದರಿಂದ ತದ್ವಾಚಕವಾದ 'ಪಂಚ' ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯ-ಗೊಳ್ಳುತ್ತವೆಂದು ಹೇಳಬಹುದೆಂಬ ಪ್ರಶ್ನೆಯು ಬರುತ್ತದೆ. ಆದರೆ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ, ಈ ಅಧಿಕರಣದ ಪೂರ್ವಪಕ್ಷ ಹೊರಟಿದೆ. ಎಲ್ಲೆಡೆಯೂ ತದಧೀನತ್ವನ್ಯಾಯವನ್ನು ವಿವಕ್ಷಿಸುವುದಾದಲ್ಲಿ ಆಯಾ ಶಬ್ದಗಳಿಂದ ಪ್ರತಿಪಾದ್ಯವಾದ ಗುಣಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಲು ಸಾಧ್ಯವೇ ಆಗುವುದಿಲ್ಲ. ಇಂದ್ರಾದಿಶಬ್ದಗಳ ಸಮನ್ವಯದ ವಿಷಯದಲ್ಲಿಯೂ ತದಧೀನತ್ವನ್ಯಾಯವನ್ನೇ ವಿವಕ್ಷಿಸುವುದಾದಲ್ಲಿ ಪರಮೈಶ್ವರ್ಯಾದಿ ಗುಣಗಳೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗದಿರುವ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರತಿಯೊಂದು ಅಧಿಕರಣಗಳಲ್ಲಿಯೂ ತದಧೀನತ್ವನ್ಯಾಯವನ್ನು ಮುಚ್ಚಿಟ್ಟು ಪೂರ್ವಪಕ್ಷ ಮಾಡಬೇಕು. 'ದುಃಖೀ', 'ಅವರ' ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುವಾಗ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಅನಿವಾರ್ಯವಾಗಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಬೇಕಾಗುತ್ತದೆ. ಆದರೆ ಉಳಿದ ಅಧಿಕರಣಗಳಲ್ಲಿ ಅಂತಹ ಅನಿವಾರ್ಯತೆ ಇರುವುದಿಲ್ಲವೆಂಬುದನ್ನು ಗಮನಿಸಬೇಕು. ಅಥವಾ ಸ್ವಾತಂತ್ರ್ಯವೆಂಬುದನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಅನೇಕ ಜನರನ್ನು ವಶಮಾಡಿಕೊಂಡ ರಾಜನಲ್ಲಿಯೂ

ಬಹುತ್ವವ್ಯವಹಾರವು ಬರಬೇಕಾಗುತ್ತದೆ. ಒಬ್ಬನೇ ರಾಜನನ್ನು ಬಹುರಾಜನೆಂದು ಎಲ್ಲರೂ ಕರೆಯಬೇಕಾಗುತ್ತದೆ. ಯಾರೂ ಸಹ ಲೋಕದಲ್ಲಿ ಒಬ್ಬ ರಾಜನನ್ನು ಬಹುರಾಜನೆಂದು ಕರೆಯುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಸ್ವಾತಂತ್ರ್ಯವನ್ನೇ ಆಕ್ಷೇಪ ಮಾಡಿ ಪೂರ್ವಪಕ್ಷವನ್ನೂ ಕೂಡ ಮಾಡಬಹುದು. ಆದ್ದರಿಂದ ಈ ಅಧಿಕರಣವು ತದಧೀನತ್ವನ್ಯಾಯದಿಂದ ಗತಾರ್ಥವಾಗುವುದಿಲ್ಲ.

ತದಧೀನತ್ವನ್ಯಾಯದಿಂದ ಈ ಅಧಿಕರಣದ ಪ್ರಮೇಯವು ಗತಾರ್ಥವಾಗದಿದ್ದರೂ ಗುಹಾಧಿಕರಣದಿಂದ ಗತಾರ್ಥವಾಗಿದೆಯಲ್ಲವೇ? ಎಂಬುದಾಗಿ ಮತ್ತೊಂದು ಗೊಂದಲ ಹುಟ್ಟುತ್ತದೆ. ಏಕೆಂದರೆ ಗುಹಾಧಿಕರಣದಲ್ಲಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಸೂತ್ರದಿಂದ 'ದ್ವಿತ್ವ' ಮೊದಲಾದ ಧರ್ಮಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಏಕತ್ವಕ್ಕೆ ವಿರೋಧಿಯಾದ ದ್ವಿತ್ವವು ಬ್ರಹ್ಮನಲ್ಲಿ ಇದೆ ಎಂದು ಸಿದ್ಧವಾದ ಮೇಲೆ ಏಕತ್ವಕ್ಕೆ ವಿರೋಧಿಯಾದ ಬಹುತ್ವವೂ ಕೂಡ ಇರಲೇಬೇಕು. ಹೀಗೆ ಅನೇಕತ್ವ ಸಂಖ್ಯೆಯ ಸಮನ್ವಯವನ್ನು ಗುಹಾಧಿಕರಣದಲ್ಲಿ ಸಾಧಿಸಿದ ಮೇಲೆ ಪುನಃ ಈ ಅಧಿಕರಣದಲ್ಲಿಯೂ ಅದರ ಸಮನ್ವಯವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಅನೇಕತ್ವ ಸಂಖ್ಯೆಯು ಭಿನ್ನವೃತ್ತಿಯಾಗಿದೆ ಎಂಬ ನಿಯಮವು ಔತ್ಸರ್ಗಿಕವಾದದ್ದು. ಹೀಗೊಪ್ಪದಿದ್ದರೆ 'ದ್ವಾಸುಪರ್ಣಾ' ಎಂಬ ಶ್ರುತಿಯೂ ಕೂಡ ಭೇದವನ್ನು ಸಮರ್ಥನೆ ಮಾಡುವುದಿಲ್ಲ ಎಂದಾಗಬೇಕಾದೀತು. ಆದ್ದರಿಂದ ಯಾವ ಶ್ರುತಿಯು ಅನೇಕತ್ವ ಸಂಖ್ಯೆಯನ್ನು ಹೇಳುತ್ತಿದೆಯೋ, ಅದು ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕಾಗುತ್ತದೆ. ಆದರೆ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವೇ ಮೊದಲಾದ ಬಾಧಕಪ್ರಮಾಣಗಳಿರುವುದರಿಂದ ಈ ನಿಯಮವನ್ನು ಕೈಬಿಡಲಾಗಿತ್ತು. ಆದರೆ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಪ್ರಕೃತ ವಿಷಯವಾಕ್ಯದಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ. ಆದ್ದರಿಂದ ಅನೇಕತ್ವ ಸಂಖ್ಯೆಯನ್ನು ಈ ಶ್ರುತಿಯು ಪ್ರತಿಪಾದನೆ ಮಾಡುವುದರಿಂದ ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕು. ವಾಕ್ಯಶೇಷದಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಶ್ರುತವಾಗಿದೆ. ಅಲ್ಲಿರುವ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಪ್ರಕೃತ 'ಯಸ್ಮಿನ್' ಎಂಬ ಸಪ್ತಮ್ಯಂತವಾದ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದಗಳಿಂದ ನಿರ್ದಿಷ್ಟರಾದ ಪ್ರಾಣಾದಿಗಳು ಈ ವಿಷಯವಾಕ್ಯದಲ್ಲಿ 'ಪಂಚ ಜನಾ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆಂದು ಒಪ್ಪಬೇಕು. ಕಾರಣವೇನೆಂದರೆ ಬಹುತ್ವಸಂಖ್ಯೆಯು ಬ್ರಹ್ಮನಲ್ಲಿ ಅಯುಕ್ತವಾಗಿದೆ. ಸ್ವಾಶ್ರಿತತ್ವವೂ ಕೂಡ ಬ್ರಹ್ಮನಲ್ಲಿ ಅಯುಕ್ತವಾಗಿದೆ. ಈ ಎರಡು ಕಾರಣಗಳಿಂದ ಪ್ರಾಣಾದಿಗಳಿಗೆ ಆಶ್ರಿತನಾದ ಬ್ರಹ್ಮನು 'ಪಂಚ ಜನಾ' ಮೊದಲಾದ ಬಹುತ್ವಸಂಖ್ಯಾವಾಚಕ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲವೆಂಬ ಪೂರ್ವಪಕ್ಷವು ಉದಯವಾಗುತ್ತದೆ.

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

ಒಬ್ಬನೇ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರೋ, ಅದರಂತೆ ಅನಂತ ಪ್ರಾಣರಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲ ಎಂಬ ಪ್ರತಿಬಂದಿಯು ನಿಮಗೂ ಇರುತ್ತದೆ.

ಭೇದವಿಲ್ಲದಿದ್ದರೂ ಕೂಡ ಬ್ರಹ್ಮನ ವಿಷಯದಲ್ಲಿ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. 'ಕಾಲಃ ಸದಾಽಸ್ತಿ, ದೇಶಃ ಸರ್ವತ್ರ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ. ದೇಶವು ಎಲ್ಲೆಡೆಯೂ ಇದೆ. ಇತ್ಯಾದಿ ಪ್ರಯೋಗಗಳೇ ಈ ವಿಷಯದಲ್ಲಿ ಉದಾಹರಣೆ.

ಆದ್ದರಿಂದ ಜಗತ್ತಿನಲ್ಲಿ ಒಟ್ಟು ಎಷ್ಟು ನಿಯಮ್ಯ ಪದಾರ್ಥಗಳಿವೆಯೋ, ಅಷ್ಟೇ ನಿಯಾಮಕವಾದ ಭಗವದ್ರೂಪಗಳೂ ಕೂಡ ಇರುತ್ತವೆ. ಆದ್ದರಿಂದ ಶರೀರದಲ್ಲಿ ಪಂಚಪ್ರಾಣಗಳು ಇವೆ. ಪಂಚಪ್ರಾಣಗಳೆಂಬ ನಿಯಮ್ಯಪದಾರ್ಥಗಳು ಐದುಸಂಖ್ಯೆಯಲ್ಲಿರುವುದರಿಂದ ತನ್ನಿಯಾಮಕವಾದ ಭಗವದ್ರೂಪಗಳೂ ಕೂಡ ಐದುಸಂಖ್ಯೆಯಲ್ಲಿಯೇ ಇರುತ್ತವೆ.

ಶರೀರದಲ್ಲಿರುವ 'ಆಕಾಶ' ಎಂಬ ನಿಯಾಮಕ ರೂಪವು ಆರನೆಯದಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು ಸಾಧುವಾಗುತ್ತದೆ.

ಶರೀರವು ಪಂಚಪ್ರಾಣಗಳಿಗೆ ಆಧಾರವಾಗಿದೆ. ಪಂಚಪ್ರಾಣಗಳು ಆಧೇಯವಾಗಿವೆ. ಶರೀರದಲ್ಲಿರುವ ನಿಯಾಮಕ ಭಗವದ್ರೂಪವು ಆಧಾರವೆಂದು, ಆಧೇಯವಾದ ಪಂಚಪ್ರಾಣಗಳಲ್ಲಿರುವ ರೂಪಗಳು ಆಧೇಯವೆಂದು ಕರೆಸಿಕೊಳ್ಳುತ್ತವೆ. ಹೀಗೆ ಒಬ್ಬನೇ ಭಗವಂತನ ರೂಪಗಳಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆ.

ಇದನ್ನೇ ನ್ಯಾಯವಿವರಣದಲ್ಲಿ 'ಬಹುರೂಪತ್ವಾತ್ ಅಧಿಕರಣಾಧೇಯತ್ವಾದಿ ತಸ್ಯೈವ ಯುಜ್ಯತೇ' ಭಗವಂತನಿಗೆ ಬಹುರೂಪಗಳಿರುವುದರಿಂದ ಅಧಿಕರಣಭಾವ ಹಾಗೂ ಆಧೇಯಭಾವವು ಒಬ್ಬನಲ್ಲಿಯೇ ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

ಮಾಡಿ, ಜಡತ್ವಹೇತುವಿನಿಂದ ವಕ್ತೃತ್ವಾಭಾವವನ್ನು ಸಾಧನೆ ಮಾಡಿದರೆ ಅಸಿದ್ಧಾದಿದೋಷಗಳು ಬರುತ್ತವೆ. ಏಕೆಂದರೆ ದೇವತೆಗಳಲ್ಲಿ ಜಡತ್ವವಾಗಲೀ, ಮೃತ್ತ್ವವಾಗಲೀ ಇರುವುದಿಲ್ಲ.

ಪ್ರಮಾಣಸಿದ್ಧವಾದ ವೇದಕ್ಕೆ ಪ್ರಾಮಾಣ್ಯದ ಸಂರಕ್ಷಣೆಗೋಸ್ಕರ ಅನೇಕ ವಿಷಯಗಳನ್ನು ಕಲ್ಪನೆ ಮಾಡುವುದೇ ಯುಕ್ತ. ಅದನ್ನು ಬಿಟ್ಟು, ವೇದಪ್ರಾಮಾಣ್ಯದ ಭಯದಿಂದ ಪ್ರಮಿತವಾದದ್ದನ್ನು ತಿರಸ್ಕರಿಸುವುದು ಅಯುಕ್ತವಾಗುತ್ತದೆ.

'ಮೃದಬ್ರವೀತ್' ಎಂಬ ವಾಕ್ಯವು ಜಡವಾದ ಮಣ್ಣಿನಲ್ಲಿ ವಕ್ತೃತ್ವವನ್ನು ಹೇಳುತ್ತಿದೆ ಎಂಬ ಉದ್ದೇಶದಿಂದ 'ಮೃತ್ ನ ವಕ್ತ್ರೀ ಜಡತ್ವಾತ್' ಎಂಬ ಯುಕ್ತಿಯು ಶ್ರುತ್ಯರ್ಥವನ್ನು ಬಾಧಿಸಲು ಹೊರಟಿದೆ. ವಿಚಾರ ಮಾಡಿದರೆ ಶ್ರುತಿಯು ಜಡವಾದ ಮಣ್ಣಿಗೆ ವಕ್ತೃತ್ವವನ್ನು ಹೇಳಲು ಹೊರಟಿಲ್ಲ. ತದಭಿಮಾನಿಚೇತನರಲ್ಲಿ ವಕ್ತೃತ್ವವನ್ನು ಸಾರಲು ಹೊರಟಿದೆ. ತಾನು ಕಾಣುತ್ತಿರುವ ವಿಷಯದಲ್ಲಿ ಯುಕ್ತಿಗೆ ಪ್ರವೇಶವೇ ಇಲ್ಲವೆಂಬ ದೃಷ್ಟಿಯಿಂದ ಶ್ರುತಿಯು ಅದನ್ನು ವಿರೋಧ ಮಾಡಲು ಕೂಡ ಹೋಗುವುದಿಲ್ಲ.

ಪ್ರಬಲವಾದ ಪ್ರಮಾಣದಿಂದ ಪ್ರಮಾಣಾಭಾಸವು ಬಾಧಿತವಾಗಬೇಕೆಂದರೆ ದುರ್ಬಲತ್ವವಷ್ಟೇ ಕಾರಣವಲ್ಲ. ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವೇ ಕಾರಣವಾಗಿದೆ. ಯುಕ್ತಿಯಲ್ಲಿ ದುರ್ಬಲತ್ವವಿದ್ದರೂ ಪ್ರತಿಕೂಲತ್ವವಿಶಿಷ್ಟವಾದ ದುರ್ಬಲತ್ವವು ಇರುವುದಿಲ್ಲ.

ಅಭಿಪ್ರಾಯವಿಷ್ಟು - ಯುಕ್ತಿಯು ಜಡವಾದ ಪದಾರ್ಥಗಳಿಗೆ ವಕ್ತೃತ್ವವನ್ನು ನಿಷೇಧ ಮಾಡುತ್ತಿದೆ. ಶ್ರುತಿಯು ಚೇತನರಾದ ಅಭಿಮಾನಿದೇವತೆಗಳಲ್ಲಿ ವಕ್ತೃತ್ವವನ್ನು ವಿಧಿಸುತ್ತಿದೆ. ಭಿನ್ನಭಿನ್ನ ವಿಷಯಕವಾದ್ದರಿಂದ ಪರಸ್ಪರ ವಿರೋಧವೇ ಇರುವುದಿಲ್ಲ. 'ಮೃದಬ್ರವೀತ್'ಎಂಬ ವಾಕ್ಯದಲ್ಲಿರುವ 'ಮೃತ್' ಎಂಬ ಶಬ್ದದಿಂದ ಲೋಕಪ್ರಸಿದ್ಧಿಯಂತೆ ಜಡಪದಾರ್ಥವನ್ನು ವಿವಕ್ಷಿಸಬೇಕೋ? ಅಥವಾ ತದಧೀನತ್ವನ್ಯಾಯದಂತೆ ಅಭಿಮಾನಿಚೇತನರನ್ನು ವಿವಕ್ಷಿಸಬೇಕೋ ? ಎಂಬ ಗೊಂದಲವುಂಟಾದರೆ ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ ಅಭಿಮಾನಿಚೇತನರೆಂಬ ಅರ್ಥವನ್ನೇ ವಿವಕ್ಷಿಸಬೇಕು. ಯಾವಾಗ ಶ್ರುತಿಗಳಿಂದ ಮುಖ್ಯವಾದ ಅಭಿಮಾನಿಚೇತನರೆಂಬ ಅರ್ಥವನ್ನು ಸ್ವೀಕರಿಸುತ್ತೇವೋ ಆವಾಗ ಯುಕ್ತಿಯು ದುರ್ಬಲವಾಗಿದ್ದರೂ ಕೂಡ ಶ್ರುತಿಯನ್ನು ವಿರೋಧ ಮಾಡಿದಂತಾಗುವುದಿಲ್ಲ. ರಾಜಕುಮಾರನು ತನ್ನ ಸ್ವಚ್ಛಂದಪ್ರವೃತ್ತಿಗೆ ಪ್ರತಿಬಂಧಕರಾದ ದುರ್ಬಲರನ್ನು ನಿಗ್ರಹಿಸುತ್ತಾನೆ ಹೊರತು, ಪ್ರತಿಬಂಧಕವಾಗದ ದುರ್ಬಲನಾದ ಭಿಕ್ಷುಕನನ್ನು ನಿಗ್ರಹಿಸುವುದಿಲ್ಲ.

* * * * *

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಜ್ಯೋತಿರುಪಕ್ರಮಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಜ್ಯೋತಿರುಪಕ್ರಮಾಧಿಕರಣ

## ಬ್ರಹ್ಮಸೂತ್ರ

'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – ।। ज्योतिरुपक्रमात्तु तथा ह्यधीयत एके ।।१।।**

ಸೂತ್ರಾರ್ಥ - 'ಕರ್ಮಪರವಾದ ಜ್ಯೋತಿರಾದಿ ಶಬ್ದಗಳಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ ಹೊರತು, ಯಾಗಾದಿ ಕರ್ಮಗಳಲ್ಲ. ಏಕೆಂದರೆ ಚತುರ್ಮುಖ ಮೊದಲಾದವರ ಶರೀರವನ್ನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದನು ಇತ್ಯಾದಿಯಾಗಿ ಋಷಿಪ್ರತಿಪಾದಕವಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡಿ, 'ತಾ ವಾ ಏತಾಃ' ಎಂಬಲ್ಲಿ ಸಕಲ ವೈದಿಕಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಕೆಲವು ಶಾಖೆಯವರು ಅಧ್ಯಯನ ಮಾಡುತ್ತಾರೆ.

ಅರ್ಥ -- ತು ಶಬ್ದವು ಏವಾರ್ಥದಲ್ಲಿದೆ. ಜ್ಯೋತಿಃ = 'ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿರಾದಿ ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ ಹೊರತು, ಜ್ಯೋತಿಷ್ಟೋಮಾದಿ ಯಾಗಗಳಲ್ಲ. ಹಿ = ಯಾವ ಕಾರಣದಿಂದ, ಏಕೇ = ಕೆಲವು ಶಾಖೆಯವರು, ಉಪಕ್ರಮಾತ್ = ಏಷ ಇಮಂ ಎಂದು ಪ್ರಾರಂಭ ಮಾಡಿ, ತಥಾ = ಸರ್ವಶಬ್ದಾಭಿಧೇಯನನ್ನಾಗಿ ಶ್ರೀಹರಿಯನ್ನೇ, ತಾ ವಾ ಏತಾಃ = ಇತ್ಯಾದಿಯಾಗಿ, ಅಧೀಯತೇ = ಅಧ್ಯಯನ ಮಾಡುತ್ತಾರೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಬ್ರಹ್ಮನಲ್ಲಿ ಶಬ್ದಸಮನ್ವಯಕ್ಕೆ ಕರ್ಮಕಾಂಡದ ವಿರೋಧ

**ब्रह्मसूत्रभाष्यम् — 'वसन्ते वसन्ते ज्योतिषा यजेत' इत्यादि कर्माभिधायकस्य कर्मक्रमादिविरोधान्न युज्यत इति**

ಅನುವಾದ - 'ವಸಂತೇ ವಸಂತೇ ಜ್ಯೋತಿಷಾ ಯಜೇತ' 'ಪ್ರತಿಯೊಂದು ವಸಂತ ಋತುಗಳಲ್ಲಿ ಜ್ಯೋತಿಷ್ಟೋಮ ಯಾಗಗಳನ್ನು ಮಾಡಬೇಕು' ಇವೇ ಮೊದಲಾದ ವಾಕ್ಯಗಳು ಕರ್ಮವಿಧಾಯಕವಾಗಿವೆ. ಕರ್ಮ ತದಂಗವಾದ ಕಾಲ, ಕ್ರಮ, ಅಧಿಕಾರಿ, ಫಲ, ಋತ್ವಿಕ್, ವ್ಯತ್ಯಾಸ, ಪ್ರಾಯಶ್ಚಿತ್ತ ಇವೇ ಮೊದಲಾದವುಗಳನ್ನು ಹೇಳುವ ವಸಂತಾದಿ ಶಬ್ದರಾಶಿಗಳಿಗೆ ಒಂದು ವೇಳೆ ಭಗವತ್ಪರತ್ವವನ್ನು ಹೇಳಿದರೆ, ಕರ್ಮಕ್ರಮಾದಿಗಳೇ ಲೋಪವಾಗುವ ಪ್ರಸಂಗ ಬರುತ್ತದೆ. ಹಾಗಾಗಿ ಬ್ರಹ್ಮವಾಚಕತ್ವವನ್ನು ಸರ್ವಥಾ ಹೇಳಬಾರದು. ಇಷ್ಟು ಆಕ್ಷೇಪ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಕರ್ಮ ಮತ್ತು ತದಂಗಗಳಲ್ಲಷ್ಟೇ ಪ್ರಸಿದ್ಧವಾದ ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಭಗವಂತನಲ್ಲಿ ಸಮನ್ವಯವನ್ನು ಪ್ರತಿಪಾದನೆ ಮಾಡುತ್ತಿದ್ದಾರೆ. ಶ್ರುತ್ಯಾದಿಸಂಗತಿ, ವಿಷಯಾದಿಗಳನ್ನೂ ಕೂಡ ಸೂಚನೆ ಮಾಡುತ್ತಿದ್ದಾರೆ.–

ವಸಂತೇ ವಸಂತೇ = ಪ್ರತಿಯೊಂದು ವಸಂತ ಋತುಗಳಲ್ಲಿ, ಜ್ಯೋತಿಷಾ = ಜ್ಯೋತಿಷ್ಟೋಮಾದಿ ಯಾಗಗಳಿಂದ, ಯಜೇತ = ಪೂಜಿಸಬೇಕು. ಇತ್ಯಾದಿ = ಇವೇ ಮೊದಲಾದ, ಕರ್ಮಾಭಿಧಾಯಕಸ್ಯ = ಕ್ರಿಯಾವಿಶೇಷವನ್ನು ಹೇಳುವ, ಕರ್ಮಕ್ರಿಯಾದಿ = ಕರ್ಮ, ತದಂಗವಾದ ಕಾಲ, ಕ್ರಮ, ಅಧಿಕಾರಿ, ಫಲ, ಋತ್ವಿಕ್ ಇವುಗಳ ವ್ಯತ್ಯಾಸ ಪ್ರಾಯಶ್ಚಿತ್ತ ಇವೇ ಮೊದಲಾದವುಗಳನ್ನು ಹೇಳುವ ವಸಂತಾದಿ ಶಬ್ದರಾಶಿಗಳಿಗೆ ಭಗವತ್ಪರತ್ವವನ್ನು ಹೇಳಿದರೆ, ವಿರೋಧಾತ್ = ಕರ್ಮಕ್ರಮ ಕ್ರಮಾಭಾವ ಎಂಬ ವಿರೋಧ ಬರುವುದರಿಂದ, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ = ಇಷ್ಟು ಆಕ್ಷೇಪ.

ಕರ್ಮಪ್ರತಿಪಾದಕ ವಾಕ್ಯಗಳಿಂದ ಮಹಾವಿಷ್ಣುವೇ ಮುಖ್ಯಪ್ರತಿಪಾದ್ಯ

**ब्रह्मसूत्रभाष्यम् – आह –**

**।। ज्योतिरुपक्रमात्तु तथा ह्यधीयत एके ।।**

**ज्योतिरादिकर्मवाचकत्वेन प्रसिद्धाभिधेयोऽपि स एव । 'एष इमं लोकमभ्यार्चत्' इत्युपक्रम्य 'ता वा एताः सर्वा ऋचः सर्वे वेदास्सर्वे घोषाः एकैव व्याहृतिः प्राण एव प्राण ऋच इत्येव विद्यात्' इति (ऐ.आ.२-२-२) ह्यधीयत एके ।।१।।**

ಅನುವಾದ - ಮೇಲಿನ ಆಕ್ಷೇಪಕ್ಕೆ ಸೂತ್ರಕಾರರೇ ಉತ್ತರಿಸುತ್ತಿದ್ದಾರೆ. 'ಜ್ಯೋತಿ' ಮೊದಲಾದ ಶಬ್ದಗಳು, ಕರ್ಮವಾಚಕಗಳಾಗಿ ಪ್ರಸಿದ್ಧವಾಗಿದ್ದರೂ, ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ವಿಷಯದಲ್ಲಿ ಪ್ರಮಾಣವೇನೆಂದರೆ ಐತರೇಯ ಶಾಖೆಯವರು ಸಕಲಶಬ್ದವಾಚ್ಯತ್ವವನ್ನು ತಿಳಿಯುತ್ತಾ, ಅಧ್ಯಯನ ಮಾಡುತ್ತಾರೆಂದು ಐತರೇಯ ಆರಣ್ಯಕದಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮನು ಚತುರ್ಮುಖಾದಿಗಳ ಶರೀರವನ್ನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದನು. ಹೀಗೆ ವಿಷ್ಣುವಾಚಕವಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡುತ್ತಾ ಪ್ರಾರಂಭ ಮಾಡಿ, ಅನಂತರ 'ತಾ ವಾ ಏತಾಃ' ಇತ್ಯಾದಿಯಾಗಿ ಸಕಲ ವಿಧವಾದ ಶಬ್ದಗಳಿಂದ ವಿಷ್ಣುವನ್ನೇ ಪ್ರತಿಪಾದ್ಯನನ್ನಾಗಿ ತಿಳಿಯುತ್ತಾ ಐತರೇಯ ಶಾಖೆಯವರು ಅಧ್ಯಯನ ಮಾಡುತ್ತಾರೆ. ಪ್ರಸಿದ್ಧವಾದ ಎಲ್ಲಾ ಮಂತ್ರಗಳು ಸಕಲವೇದಗಳೂ, ಸಕಲ ಧ್ವನಿಗಳೂ ಒಂದೇ ವಿಧವಾದ ವ್ಯಾಹೃತಿಯು ಪ್ರಾಣ, ಇಂದ್ರ, ಅಗ್ನಿ ಮೊದಲಾದ ದೇವತೆಗಳ ಹೆಸರುಳ್ಳ ಮಂತ್ರಗಳು ನಾರಾಯಣನ ಬಗ್ಗೆಯೇ ಹೊರಟಿವೆ. ಹೀಗೆ ತಿಳಿಯಬೇಕು.

ಪ್ರತಿಪದಾರ್ಥ --ಸಿದ್ಧಾಂತ ಸ್ಥಾಪನೆಗಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಅತಃ ಆಹ = ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ - 'ಜ್ಯೋತಿರುಮಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ.

ಜ್ಯೋತಿರಾದಿ = ಜ್ಯೋತಿಷ್ಟೋಮಾದಿ, ಕರ್ಮವಾಚಕತ್ವೇನ = ಕಾಲ, ಕರ್ಮ, ದೇಶ, ಅಧಿಕಾರಿ, ಫಲ, ಕ್ರಮಾದಿ ವಾಚಕಗಳೆಂದು,

ಪ್ರಸಿದ್ಧಾಭಿಧೇಯೋಽಪಿ = ಪ್ರಸಿದ್ಧವಾದ ವಚನವಿದ್ದರೂ, ಸ ಏವ = ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ, ಏಷ = ಈ ಪರಮಾತ್ಮನೇ, ಇಮಂ ಲೋಕಂ = ಬ್ರಹ್ಮಾಂಡವೆಂಬ ಲೋಕಾಧಾರಕವಾದ ಚತುರ್ಮುಖನನ್ನು, ಅಭ್ಯಾರ್ಚತ್ = ಪ್ರವೇಶಿಸಿದನು. ಹೀಗೆ ಐತರೇಯ ಶಾಖೆಯಲ್ಲಿ, ಉಪಕ್ರಮ್ಯ = ಪ್ರಾರಂಭಿಸಿ, ತಾ ವಾ ಏತಾಃ ಸರ್ವಾ ಋಚಃ = ಸಕಲವಿಧವಾದ ಋಜ್ ಮಂತ್ರಗಳು, ಸರ್ವೇ ವೇದಾಃ = ಸಮಸ್ತ ವೇದಗಳು, ಸರ್ವೇ ಘೋಷಾಃ = ಸಕಲ ಶಬ್ದಗಳೂ, ಏಕೈವ ವ್ಯಾಹೃತಿಃ = ಒಂದೇ ವ್ಯಾಹೃತಿಯು, ಪ್ರಾಣ ಏವ = ಮಹಾವಿಷ್ಣುವಿನಲ್ಲಿಯೇ, ಪ್ರಾಣ ಋಚ = ಪ್ರಾಣನಾಮಕ ಋಜ್‌ಮಂತ್ರವು ಮಹಾವಿಷ್ಣುವಿನಲ್ಲಿ, ಇತ್ಯೇವ ವಿದ್ಯಾತ್ = ಹೀಗೆ ತಿಳಿಯಬೇಕು. ಹಿ = ಈ ರೀತಿಯಾಗಿಯೇ, ಏಕೇ = ಕೆಲವರು, ಅಧೀಯತೇ = ಹೇಳುತ್ತಾರೆ. ಆದ್ದರಿಂದ ಪರಮಾತ್ಮನಲ್ಲಿ ಶಕ್ತಿವೃತ್ತಿಯಿಲ್ಲವೆಂದು ತಿಳಿಯಬಾರದು. ಹೀಗೆ ಪರಬ್ರಹ್ಮನಲ್ಲಿ ವಿದ್ವದ್ರೂಢಿಸಹಿತವಾದ ಮಹಾಯೋಗ ಇರುವುದರಿಂದ ಹಿಂದಿನ ಯಾವ ದೋಷಗಳಿಗೂ ಅವಕಾಶವಿಲ್ಲ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

'ವಸಂತೇ ವಸಂತೇ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**सत्तर्कदीपावळिः – तथापि तस्य प्रतिपादकत्वं भगवद्वाचकत्वे न युज्यते। कर्मक्रमकालाद्युक्त्या भगवद्वाचकत्वस्य विशेषेण विरोधात् । न च जातमोतमित्यादिव्युत्पत्त्या भगवद्वाचकत्वम् । तया कर्मक्रमादिवाचकत्वस्य विशेषेण विरोधापत्तेः । जातादिशब्दानामपि भगवद्वाचकत्वेन व्युत्पत्तेरप्य-शक्यत्वादितिभावेन पूर्वपक्षमाह – वसन्त इत्यादिना ।**

ಕರ್ಮಕಾಂಡದಿಂದ ಭಗವಂತನೇ ಪ್ರತಿಪಾದ್ಯನಾಗುವುದಾದರೆ ಕರ್ಮಕಾಂಡದಿಂದ ಸಿದ್ಧವಾಗುವ ವಿಷಯಗಳೆಲ್ಲವೂ ಕೂಡ ಅಯುಕ್ತವಾಗುತ್ತವೆ. ಕರ್ಮದ ಕ್ರಮ, ಕರ್ಮಾಚರಣೆಯ ಕಾಲ ಇವುಗಳನ್ನೆಲ್ಲಾ ಕರ್ಮಕಾಂಡದಲ್ಲಿ ಹೇಳಿದ್ದಾರೆ. ಭಗವದ್ವಾಚಕತ್ವಕ್ಕೆ ಕರ್ಮಕ್ರಮಾದಿಗಳನ್ನು ಹೇಳುವ ವಿಶೇಷಣಗಳ ವಿರೋಧವು ಪ್ರಾಪ್ತವಾಗುತ್ತದೆ.

'ಜಾತಮೋತಂ' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಜ್ಯೋತಿ ಮೊದಲಾದ ಶಬ್ದಗಳಿಗೆ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಹಾಗಾಗಿ ಭಗವದ್ವಾಚಕತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಆ ವಿಷಯದಲ್ಲಿ ಕರ್ಮಕ್ರಮಾದಿಗಳನ್ನು ಪ್ರತಿಪಾದನೆ ಮಾಡುವ ವಿಶೇಷಣಗಳ ವಿರೋಧವು ಪ್ರಾಪ್ತವಾಗುತ್ತದೆ. ಅಷ್ಟೇ ಅಲ್ಲದೇ ಜ್ಯೋತಿಯೆಂಬ ಶಬ್ದವನ್ನು ನಿಷ್ಪತ್ತಿ ಮಾಡಲು ಮತ್ತು ಓತಿ ಎಂಬ ಯಾವ ಅವಯವಗಳನ್ನು ಆಶ್ರಯಿಸಲಾಗುತ್ತದೋ, ಅವುಗಳಿಗೂ ಕೂಡ ಭಗವದ್ವಾಚಕತ್ವವನ್ನು ಒಪ್ಪಿದರೆ ವ್ಯುತ್ಪತ್ತಿಯೇ ಅಸಂಭಾವಿತವಾಗುತ್ತದೆ. ಆದ್ದರಿಂದ ಜ್ಯೋತಿರಾದಿಶಬ್ದಗಳಿಗೆ ಭಗವದ್ವಾಚಕತ್ವವನ್ನು ಸಮರ್ಥನೆ ಮಾಡಲೂ ಕೂಡ ಸಾಧ್ಯವಾಗುವುದಿಲ್ಲ. ಈ ಪೂರ್ವಪಕ್ಷವನ್ನು ಭಾಷ್ಯದಲ್ಲಿ 'ವಸಂತೇ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಐತರೇಯೋಪನಿಷತ್ತಿನಲ್ಲಿ ಸಕಲಶಬ್ದ ಪ್ರತಿಪಾದ್ಯತ್ವದ ಬಗ್ಗೆ

**सत्तर्कदीपावलिः – ज्योतिष्टोमादिकर्मवाचकत्वेन प्रसिद्धशब्दार्थोपि भगवानेव यथा तदिज्येन्द्रवाय्वादिशब्दार्थोऽसौ । न च तद्वाचकत्वं कर्मक्रमाद्युक्तिं विरुणद्धिज्ञातमोतमित्यादिव्युत्पत्तिसम्भवात् । व्युत्पत्त्यैव स्वध्यायोपक्रमादारभ्य सूक्त ऋगर्धर्चगदाक्षरा तद्वृक्षमुनिवाचकत्वेन प्रसिद्धशब्दानां भगवद्वाचकत्वं विद्वद्रूढिं च तद्विषयां प्रदर्श्य तथैव सर्ववेदानां भगवदर्थत्वमभिधीयते । श्रीमन्महैतरेय इत्यर्थः ।**

ಜ್ಯೋತಿಷ್ಟೋಮಾದಿ ಕರ್ಮವಾಚಕತ್ವೇನ ಪ್ರಸಿದ್ಧವಾದ ಶಬ್ದಗಳೆಲ್ಲವೂ ಭಗವಂತನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಹೇಗೆ ಇಂದ್ರ, ವಾಯು ಮೊದಲಾದ ಶಬ್ದಗಳು ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದನೆ ಮಾಡುತ್ತವೆಂದು ಈ ಹಿಂದೆ ಪ್ರತಿಪಾದನೆ

ಮಾಡಲಾಗಿದೆಯೋ, ಅದರಂತೆ ಈ ಕರ್ಮಕಾಂಡವೂ ಕೂಡ ಭಗವತ್ಪರವೆಂದು ತಿಳಿಯಬೇಕು. ಭಗವದ್ವಾಚಕತ್ವವು ಕರ್ಮಕ್ರಮಾದಿಗಳ ವಚನವನ್ನು ವಿರೋಧ ಮಾಡುವುದಿಲ್ಲ. ಏಕೆಂದರೆ 'ಜಾತಮೋತಮ್' ಇತ್ಯಾದಿಯಾದ ವ್ಯುತ್ಪತ್ತಿಯನ್ನು ಶ್ರೀಮದಾಚಾರ್ಯರು ತೋರಿಸಿರುತ್ತಾರೆ. ಐತರೇಯೋಪನಿಷತ್ತಿನ ಎರಡನೆಯ ಅಧ್ಯಾಯದ ಪ್ರಾರಂಭದಿಂದ ಇದೇ ವ್ಯುತ್ಪತ್ತಿಯನ್ನು ಶ್ರೀಮದಾಚಾರ್ಯರು ತೋರಿಸಿದ್ದಾರೆ. ಸೂಕ್ತ, ಋಕ್, ಅರ್ಧ - ಋಕ್, ಪಾದ, ಅಕ್ಷರ ಇವುಗಳೆಲ್ಲವು ಭಗವದ್ವಾಚಕವೇ ಆಗಿವೆ. ಅದರಂತೆ ವೃಕ್ಷ, ಮುನಿ ಇವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೂ ಕೂಡ ಭಗವದ್ವಾಚಕಗಳೇ ಆಗಿವೆ. ಈ ವಿಷಯದಲ್ಲಿ ವಿದ್ವದ್‌ರೂಢಿಯೇ ಪ್ರಮಾಣವಾಗಿದೆ. ಎಂಬುದಾಗಿ ಉದಾಹರಣೆಯ ಮೂಲಕ ವ್ಯುತ್ಪತ್ತಿಗಳನ್ನು ತೋರಿಸುತ್ತಾ ಸಕಲವೇದಕ್ಕೆ ಭಗವದರ್ಥತ್ವವನ್ನು ಐತರೇಯೋಪನಿಷದ್ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

ವಿವರಣೆ - ಐತರೇಯೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿ ಶಬ್ದಗಳ ನಿಷ್ಪತ್ತಿಯ ಬಗ್ಗೆ ಶ್ರೀಮದಾಚಾರ್ಯರು ವ್ಯಾಖ್ಯಾನ ಮಾಡಿದ್ದನ್ನು ಯಥಾವತ್ತಾಗಿ ಇಲ್ಲಿ ನೀಡಲಾಗಿದೆ. (ಸಂಗ್ರಹ)

ಸೋಽಬ್ರವೀದ್ 'ಅಹಮಿದಂ ಸರ್ವಮಸಾನಿ, ಯಚ್ಚ ಕ್ಷುದ್ರಂ ಯಚ್ಚ ಮಹದ್' ಇತಿ । ತೇ ಕ್ಷುದ್ರಸೂಕ್ತಾಶ್ಚಾಭವನ್ ಮಹಾಸೂಕ್ತಾಶ್ಚ । ತಸ್ಮಾತ್ ಕ್ಷುದ್ರಸೂಕ್ತಾಃ । ತಸ್ಮಾತ್ ಕ್ಷುದ್ರಸೂಕ್ತಾ ಇತ್ಯಾಚಕ್ಷತ ಏತಮೇವ ಸಂತಂ ।

ಸೂಕ್ತಂ ಬತಾವೋಚತೇತಿ, ತತ್ ಸೂಕ್ತಮಭವತ್ । ತಸ್ಮಾತ್ ಸೂಕ್ತಂ ತಸ್ಮಾತ್ ಸೂಕ್ತಮಿತ್ಯಾಚಕ್ಷತ ಏತಮೇವ ಸಂತಂ ।

ಆ ಹರಿಯು ಹೇಳಿದನು. 'ನಾನು ಸರ್ವವೇದಪ್ರಸಿದ್ಧ ಪರಿಪೂರ್ಣವಸ್ತುವಾಗಿದ್ದು ಸಣ್ಣ ದೊಡ್ಡ ರೂಪಗಳಿಂದ ಸಣ್ಣ ದೊಡ್ಡ ಎಲ್ಲ ವಸ್ತುಗಳಲ್ಲಿಯೂ ಇರುವೆನು' ಎಂದು ಸಣ್ಣವಸ್ತುಗಳಲ್ಲಿ ಸಣ್ಣರೂಪದಿಂದ ಇರುವೆನೆಂದು ಹೇಳಿದ್ದರಿಂದ ಆ ರೂಪಗಳು ಕ್ಷುದ್ರಸೂಕ್ತಗಳೆನಿಸಿದವು. ದೊಡ್ಡ ವಸ್ತುಗಳಲ್ಲಿ ದೊಡ್ಡ ರೂಪಗಳಿಂಂದಿರುವೆನೆಂದುದರಿಂದ ಆ ರೂಪಗಳು ಮಹಾಸೂಕ್ತಗಳೆನಿಸಿದವು. ಆದ್ದರಿಂದ ಸಣ್ಣ ರೂಪಗಳೇ ಕ್ಷುದ್ರಸೂಕ್ತಗಳು. ಆದ್ದರಿಂದ ಸಣ್ಣ ರೂಪಗಳನ್ನೇ ಮುಖ್ಯವಾಗಿ ಕ್ಷುದ್ರಸೂಕ್ತಗಳೆನ್ನುತ್ತಾರೆ.

ಹರಿಯು ವೇದವನ್ನು ಬ್ರಹ್ಮಾದಿಗಳಿಗೆ ಉಪದೇಶಿಸಿದುದು ಅತ್ಯಂತ ಆಶ್ಚರ್ಯಕರ. ಆದ್ದರಿಂದ ಅವನು ಸೂಕ್ತನೆನಿಸಿದನು. ಆದ್ದರಿಂದಲೇ ಅವನು ಸೂಕ್ತ. ಅವನನ್ನೇ ಮುಖ್ಯವಾಗಿ ಸೂಕ್ತನೆನ್ನುತ್ತಾರೆ.

'ತದ್' ವಿಷ್ಣ್ವಾಖ್ಯಂ ಬ್ರಹ್ಮ ಸೂಕ್ತಾನ್ಯವೋಚತೇತಿ ಸೂಕ್ತನಾಮಕಮಭವತ್ । ಬತೇತ್ಯಾಸ್ವಾದನೇ । ಸ್ವಾತ್ಮನೈವ ಸ್ವಯಂ ಸುಷ್ಠೂಕ್ತಮಿತಿ ವಾ । ಇದಂ 'ಸರ್ವಂ' ಪರಿಪೂರ್ಣಂ ಸನ್ನಹಂ ಅಲ್ಪ ಪ್ರಾಣಿಷು ಪ್ರವಿಶ್ಯ ಸೂಕ್ಷ್ಮರೂಪೋ, ಮಹಾಪ್ರಾಣಿಷು ಮಹಾರೂಪಶ್ಚ ಭವಾನೀತಿ 'ಸ' ಭಗವಾನ್ ಅಬ್ರವೀತ್ । 'ತಸ್ಮಾತ್' ಕ್ಷುದ್ರೋಽಸಾನೀತ್ಯುಕ್ತತ್ವಾತ್ ಕ್ಷುದ್ರಸೂಕ್ತಾಃ 'ತೇ ಕ್ಷುದ್ರಪ್ರಾಣಿಷು ಸ್ಥಿತಾಃ ಭಗವದ್ರೂಪಸಂಘಾಃ। ಮಹಾನಸಾನೀತ್ಯುಕ್ತತ್ವಾನ್ಮಹಾಸೂಕ್ತಾ ಮಹಾಪ್ರಾಣಿಷು ಸ್ಥಿತಾಃ। ಸೂಕ್ಷ್ಮರೂಪತ್ವಾದೇವ ಕ್ಷುದ್ರನಾಮ ಭಗವತಃ। ನ ತು ಸಾಮರ್ಥ್ಯಾಲ್ಪತ್ವಾತ್ । ನ ಹಿ ಸಾಮರ್ಥ್ಯಾದಿಗುಣೇಷು ಕಶ್ಚಿದ್ವಿಶೇಷೋ ಭಗವದ್ರೂಪೇಷು॥

'ತದ್' ಎಂದರೆ ಮಹಾವಿಷ್ಣುವೆಂಬ ಪರಬ್ರಹ್ಮ ಆದಿಭಾಗವತಾದಿ ಸೂಕ್ತಿಗಳನ್ನು ರಚಿಸಿ ಅಪೌರುಷೇಯವಾದ ಸೂಕ್ತಗಳನ್ನು ಅಭಿವ್ಯಕ್ತಗೊಳಿಸಿ ಉಪದೇಶಿಸಿದುದರಿಂದ ಸೂಕ್ತನಾಮಕವಾಯಿತು. 'ಬತ' ಎಂಬುದು ವಿಷಯದ್ಯೋತಕ ಶಬ್ದವಲ್ಲ. 'ಎಂಥ ಅದ್ಭುತ ಕಾರ್ಯವಿದು!' ಎಂದು ಆಶ್ಚರ್ಯರಸವನ್ನು ಆಸ್ವಾದಿಸುವಾಗ ಹೇಳುವ ಶಬ್ದ - ಅನಂತವಾದ ಅಪೌರುಷೇಯ ವೇದಗಳೂ ಪೌರುಷೇಯ ಗ್ರಂಥಗಳೂ ಪ್ರತಿಕ್ಷಣ ಹರಿಯ ಮುಖದಿಂದ ಹೊರಹೊಮ್ಮುವುದು ಅತ್ಯಾಶ್ಚರ್ಯ ಎಂದು. 'ಸೂಕ್ತಂ ಬತಾವೋಚತ' ಎಂಬುದಕ್ಕೆ ವಿಷ್ಣುರೂಪ ಪರಬ್ರಹ್ಮ ತನ್ನಿಂದಲೆ ತಾನು ಚೆನ್ನಾಗಿ ವರ್ಣಿಸಲ್ಪಟ್ಟದ್ದರಿಂದ ಸೂಕ್ತನಾಮಕವಾಯಿತು ಎಂದು ಇನ್ನೊಂದು ಅರ್ಥ. ಅಪ್ರಮೇಯನಾದ ತನ್ನನ್ನು ಸರಿಯಾಗಿ ವರ್ಣಿಸಲು ಇನ್ನೊಬ್ಬರಿಗೆ ಸಾಮರ್ಥ್ಯವಿಲ್ಲವೆಂದು ತಾನೆ ತನ್ನನ್ನು ವರ್ಣಿಸಿದುದು ಅತ್ಯಾಶ್ಚರ್ಯ ಎಂದೆನ್ನಲು ಬತ ಶಬ್ದ. 'ಸರ್ವಂ' ಎಂದರೆ ಈ ಪರಿಪೂರ್ಣ ವಸ್ತು ತಾನಾಗಿಯೇ ಸಣ್ಣ ಜೀವಿಗಳಲ್ಲಿ ಪ್ರವೇಶಿಸಿ ಸೂಕ್ಷ್ಮ ರೂಪನಾಗುತ್ತೇನೆ. ಮತ್ತು ದೊಡ್ಡ ಜೀವಿಗಳಲ್ಲಿ ಪ್ರವೇಶಿಸಿ ಮಹಾರೂಪನಾಗುತ್ತೇನೆ ಎಂದು 'ಸಃ' ಅಂದರೆ ಭಗವಂತನು ಹೇಳಿದನು 'ತಸ್ಮಾತ್' ಅಂದರೆ ಸೂಕ್ಷ್ಮರೂಪನಾಗುತ್ತೇನೆ ಎಂದು ಹೇಳಿದ್ದರಿಂದ, 'ತೇ' ಅಂದರೆ ಸೂಕ್ಷ್ಮಜೀವಿಗಳಲ್ಲಿರುವ ಭಗವಂತನ ರೂಪ ಸಮೂಹಗಳು ಕ್ಷುದ್ರಸೂಕ್ತಗಳೆನಿಸಿವೆ. ಮಹಾರೂಪನಾಗುತ್ತೇನೆ ಎಂದು ಹೇಳಿದ್ದರಿಂದ ಮಹಾ ಜೀವಿಗಳಲ್ಲಿರುವ ಭಗವಂತನ ರೂಪಸಮೂಹಗಳು ಮಹಾಸೂಕ್ತಗಳೆನಿಸಿವೆ. ಸೂಕ್ಷ್ಮರೂಪನಾದ ಪ್ರಯುಕ್ತವೆ ಕ್ಷುದ್ರಸೂಕ್ತ ಎಂಬ ಹೆಸರು ಭಗವಂತನಿಗೆ. ಸಾಮರ್ಥ್ಯ ಕಡಿಮೆಯಾದುದರಿಂದಲ್ಲ. ಏಕೆಂದರೆ ಭಗವಂತನ ರೂಪಗಳಲ್ಲಿ ಸಾಮರ್ಥ್ಯಾದಿ ಗುಣಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ.

ಏಷ ವಾ ಋಕ್ । ಏಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ । ಸ ಯದ್ ಏಭ್ಯಃ ಸರ್ವೇಭ್ಯೋ ಭೂತೇಭ್ಯೋಽರ್ಚತ, ತಸ್ಮಾದ್ ಋಕ್ । ತಸ್ಮಾದ್ ಋಗಿತ್ಯಾಚಕ್ಷತ ಏತಮೇವ ಸಂತಮ್ ।

ಏಷ ವಾ ಅರ್ಧರ್ಚಃ। ಏಷ ಹ್ಯೇಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ। ಸ ಯದ್ ಏಭ್ಯಃ ಸರ್ವೇಭ್ಯೋಽರ್ಧೇಭ್ಯೋಽರ್ಚತ, ತಸ್ಮಾದ್ ಅರ್ಧರ್ಚಃ । ತಸ್ಮಾದ್ ಅರ್ಧರ್ಚ ಇತ್ಯಾಚಕ್ಷತ ಏತಮೇವ ಸಂತಮ್ ।

ಏಷ ವೈ ಪದಂ। ಏಷ ಹೀಮಾನಿ ಸರ್ವಾಣಿ ಭೂತಾನಿ ಪಾದಿ। ಸ ಯದ್ ಇಮಾನಿ ಸರ್ವಾಣಿ ಭೂತಾನಿ ಪಾದಿ, ತಸ್ಮಾತ್ ಪದಮ್ । ತಸ್ಮಾತ್ ಪದಮಿತ್ಯಾಚಕ್ಷತ ಏತಮೇವ ಸಂತಮ್ ।

ಏಷ ವಾ ಅಕ್ಷರಮ್ । ಏಷ ಹ್ಯೇಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ । ನ ಚೈನಂ ಅತಿಕ್ಷರಂತಿ । ಸ ಯದ್ ಏಭ್ಯಃ ಸರ್ವೇಭ್ಯೋ ಭೂತೇಭ್ಯಃ ಕ್ಷರತಿ, ನ ಚೈನಂ ಅತಿಕ್ಷರಂತಿ, ತಸ್ಮಾದ್ ಅಕ್ಷರಮ್ । ತಸ್ಮಾದ್ ಅಕ್ಷರಮಿತ್ಯಾಚಕ್ಷತ ಏತಮೇವ ಸಂತಮ್ ।

ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ। ಪ್ರಾಣ ಋಚ ಇತ್ಯೇವ ವಿದ್ಯಾತ್ ॥

ಈ ಹರಿಯೆ ಋಕ್. ಏಕೆಂದರೆ ಇವನು ಎಲ್ಲ ಜೀವಿಗಳನ್ನೂ ಮರಣ ಕಾಲದಲ್ಲಿ ಒಂದು ಅಂಶದಿಂದ ಬಿಟ್ಟು ದೂರ ಹೋಗುತ್ತಾನೆ. ಅವನು ಎಲ್ಲ ಜೀವಿಗಳನ್ನೂ ಬಿಟ್ಟು ಹೋಗುವುದರಿಂದ ಋಕ್. ಆದ್ದರಿಂದ ಅವನನ್ನೇ ಮುಖ್ಯವಾಗಿ ಋಕ್ ಎನ್ನುತ್ತಾರೆ.

ಈ ಹರಿಯೆ ಅರ್ಧರ್ಚ. ಏಕೆಂದರೆ ಇವನು ಜೀವರ ವಾಸಸ್ಥಾನವಾದ ಈ ಎಲ್ಲ ಶರೀರದಿಂದ ಮರಣ ಕಾಲದಲ್ಲಿ ದೂರ ಹೋಗುತ್ತಾನೆ. ಅವನು ಜೀವರ ವಾಸಸ್ಥಾನವಾದ ಈ ಎಲ್ಲ ಶರೀರದಿಂದ ದೂರ ಹೋಗುವುದರಿಂದ ಅರ್ಧರ್ಚ. ಆದ್ದರಿಂದ ಅವನನ್ನೇ ಮುಖ್ಯವಾಗಿ ಅರ್ಧರ್ಚನೆನ್ನುತ್ತಾರೆ.

ಈ ಹರಿಯೆ ಪದ. ಏಕೆಂದರೆ ಇವನು ಎಲ್ಲ ಜೀವಿಗಳನ್ನೂ ಜನನ ಕಾಲದಲ್ಲಿ ಪ್ರವೇಶಿಸುವನು. ಅವನು ಎಲ್ಲ ಜೀವಿಗಳನ್ನೂ ಜನನ ಕಾಲದಲ್ಲಿ ಪ್ರವೇಶಿಸುವುದರಿಂದ ಪದ ಎನಿಸಿದ್ದಾನೆ. ಆದ್ದರಿಂದ ಅವನನ್ನೇ ಮುಖ್ಯವಾಗಿ ಪದ ಎಂದು ಕರೆಯುತ್ತಾರೆ.

ಈ ಹರಿಯೆ ಅಕ್ಷರ. ಏಕೆಂದರೆ ಇವನು ಎಲ್ಲ ಜೀವಿಗಳಿಗೂ ಬಹಳ ಅಭೀಷ್ಟಗಳನ್ನು ನೀಡುತ್ತಾನೆ. ಇವನನ್ನೂ ಮೀರಿಸಿ ಅಧಿಕವಾಗಿ ಯಾರೂ ಅಭೀಷ್ಟ ಪ್ರದರಾಗಲಾರರು. ಅವನು ಎಲ್ಲ ಜೀವಿಗಳಿಗೂ ಬಹಳ ಅಭೀಷ್ಟ ನೀಡುವುದರಿಂದ ಮತ್ತು ಅವನನ್ನು ಮೀರಿ ಅಧಿಕವಾಗಿ ಅಭೀಷ್ಟಗಳನ್ನು ಯಾರೂ ನೀಡದಿರುವುದರಿಂದ ಅವನು ಅಕ್ಷರ. ಆದ್ದರಿಂದ ಅವನನ್ನೇ ಮುಖ್ಯವಾಗಿ ಅಕ್ಷರನೆಂದು ಕರೆಯುತ್ತಾರೆ.

ದೇವತಾಪರವೆಂದು ಪ್ರಸಿದ್ಧವಾದ ಎಲ್ಲ ಋಕ್ಕುಗಳೂ, ಎಲ್ಲ ವೇದಗಳೂ, ಎಲ್ಲ ಧ್ವನಿಗಳೂ ಏಕಪ್ರಕಾರವಾಗಿ ನಿರ್ದೋಷಗುಣಪೂರ್ಣನೆಂದು ನಾರಾಯಣನನ್ನೇ ಹೇಳುವ ನಾಮಗಳು. ಋಕ್ಕುಗಳನ್ನು ವಿಶೇಷವಾಗಿ ನಾರಾಯಣಪರವೆಂದು ತಿಳಿಯಬೇಕು.

ಏಭ್ಯಃ ಪ್ರಾಣಿಭ್ಯೋ ಗತವಾನ್ ಇತಿ ಋಕ್ । ಗಚ್ಛತಿ ಹಿ ಮರಣಕಾಲೇ । 'ಬ್ರಹ್ಮಣಾ ಸಂಪರಿತ್ಯಕ್ತೋ ಮೃತ ಇತ್ಯುಚ್ಯತೇ ಬುಧೈಃ' ಇತಿ ಹಿ ಭಾರತೇ ।

ಮ್ರಿಯಮಾಣಮಿಮಂ ಜೀವಂ ವಾಸುದೇವಾದಿದೇವತಾಃ ।
ತ್ಯಕ್ತ್ವಾ ಭಾಗೇನ ಗಚ್ಛಂತಿ ಭಾಗತೋಽನುವ್ರಜಂತಿ ತಂ ।
ಗತ್ವೈರ್ಭಾಗೈರಪಿ ಪುನರ್ವಿಶೇಯುರ್ಭೋಗಸಿದ್ಧಯೇ ।
ಭೋಗ್ಯಲೋಕಮನುಪ್ರಾಪ್ತಂ ತಸ್ಮಾತ್ ಸ್ವಪ್ನವದಂತರಾ ।

ಇತಿ ಚ । 'ಅರ್ಚ ಗತಿ ಪೂಜನಯೋಃ' 'ಋ ಗತೌ' ಇತಿ ಧಾತೋಃ । ಸರ್ವೇಭ್ಯೋಽರ್ಥೇಭ್ಯಃ ಸ್ಥಾನೇಭ್ಯಃ ಶರೀರೇಭ್ಯೋ ಗತವಾನ್ ಇತ್ಯರ್ಥರ್ಚಃ । ಸರ್ವಾಣಿ ಭೂತಾನಿ ಅಪಾದಿ । ಪದ ಗತೌ । ತಸ್ಮಾತ್ ಪದಂ ನಾಮ । ಅಧಿಕಂ ಕ್ಷರತೀತಿ ಅಕ್ಷರಂ । ಕ್ಷರಣಂ ನಾಮ ಸಂತತದಾನಂ । ಕ್ಷರ ವಿನಾಶಸಂತತದಾನಯೋಃ ಇತಿ ಧಾತೋಃ ।

ಭಗವಂತನು ಈ ಜೀವಿಗಳಿಂದ ಹೊರಟು ಹೋದುದರಿಂದ 'ಋಕ್' ಎನಿಸಿದ್ದಾನೆ. ಅವನು ಜೀವಿಗಳನ್ನು ಮರಣ ಕಾಲದಲ್ಲಿ ತೊರೆದು ಹೋಗುವುದು ಪ್ರಸಿದ್ಧ. 'ಭಗವಂತನಿಂದ ಪರಿತ್ಯಕ್ತನಾದ ಜೀವಿಯನ್ನು ಮೃತ ಎನ್ನುತ್ತಾರೆ ಬಲ್ಲವರು' ಎಂದು ಮಹಾಭಾರತದಲ್ಲಿ ಹೇಳಿದೆ. 'ಜೀವನು ಮರಣ ಹೊಂದುವಾಗ ವಾಸುದೇವಾದಿ ದೇವತೆಗಳು ಒಂದು ಅಂಶದಿಂದ ಅವನನ್ನು ತೊರೆದು ಹೋಗುತ್ತಾರೆ. ಒಂದು ಅಂಶದಿಂದ ಆ ಜೀವನ ಜೊತೆಗೇ ಹೋಗುತ್ತಾರೆ. ಆ ಜೀವನು ಸುಖದುಃಖ ಭೋಗಕ್ಕೆ ಯೋಗ್ಯವಾದ ಮಾನವ ಶರೀರವನ್ನೋ ದಿವ್ಯ ಶರೀರವನ್ನೋ ಕರ್ಮಾನುಸಾರ ಯಥಾಯೋಗ್ಯವಾಗಿ ಹೊಂದಿದಾಗ ಅವನಿಗೆ ಆ ಶರೀರದಲ್ಲಿ ಭೋಗ ಉಂಟಾಗುವುದಕ್ಕಾಗಿ ಹಿಂದೆ ತೊರೆದು ಹೋದ ಅಂಶಗಳಿಂದಲೆ ಪುನಃ ಅವನನ್ನು ಪ್ರವೇಶಿಸುತ್ತಾರೆ. ಆದ್ದರಿಂದ ಮರಣ ಪುನರ್ಜನ್ಮಗಳ ನಡುವಿನ ಸುಖದುಃಖ ಭೋಗವು ಸ್ವಪ್ನದಂತೆ ಅಸ್ಪಷ್ಟವಾಗಿರುತ್ತದೆ' ಎಂದೂ ಪ್ರಮಾಣ ವಚನವಿದೆ. 'ಋಕ್' ಶಬ್ದದ ನಿರ್ವಚನ ಮಾಡುವ ಉಪನಿಷದ್ವಾಕ್ಯದಲ್ಲಿ 'ಅರ್ಚತ' ಎಂಬ ಶಬ್ದದ ಪ್ರಕೃತಿಯಾದ ಅರ್ಚ ಧಾತು ಗಮನ ಮತ್ತು ಪೂಜೆ ಎಂಬ ಅರ್ಥದಲ್ಲಿ ಇದೆ ಎಂದೂ' ಋಕ್ ಶಬ್ದದ ಮೂಲವಾದ ಋ ಧಾತು ಗಮನ ಎಂಬ ಅರ್ಥದಲ್ಲಿ ಇದೆ ಎಂದೂ ಧಾತುವ್ಯಾಖ್ಯಾನವಿರುವುದರಿಂದ 'ಅರ್ಚತ' ಎಂಬ ಶಬ್ದದಿಂದ 'ಋಕ್' ಶಬ್ದ ನಿರ್ವಚನ ಮಾಡಿರುವುದು ಯುಕ್ತವೆ.

ಎಲ್ಲ ಅರ್ಥಗಳಿಂದ ಸ್ಥಾನಗಳಿಂದ ಅಂದರೆ ಜೀವರಿಗೆ ವಾಸಸ್ಥಾನವಾದ ಶರೀರಗಳಿಂದ ಹೊರಟು ಹೋದನು; ಆದ್ದರಿಂದ ಅರ್ಥರ್ವನೆನಿಸಿದನು.

'ಸರ್ವಾಣಿ ಭೂತಾನಿ ಪಾದಿ' ಎಂಬಲ್ಲಿ 'ಪಾದಿ' ಎಂಬುದು 'ಅಪಾದಿ'ಯ ಛಾಂದಸ ಪ್ರಯೋಗ. ಪದ ಧಾತು ಗಮನಾರ್ಥಕ. ಹೊಂದುವುದು, ಮರಣ ಕಾಲದಲ್ಲಿ ಬಿಟ್ಟು ಹೋಗಿದ್ದ ಒಂದು ಭಗವದ್ರೂಪ ಜನನಕಾಲದಲ್ಲಿ ತಿರುಗಿ ಜೀವನನ್ನು ಹೊಂದುವುದು ಎಂದರ್ಥ. ಹಾಗೆ ಹೊಂದುವುದರಿಂದ ಪದ ಎಂದು ಪ್ರಸಿದ್ಧನಾಗಿದ್ದಾನೆ.

'ಅಧಿಕಂ ಕ್ಷರತಿ' ಎಂದು ಅಕ್ಷರ ಶಬ್ದದ ನಿರ್ವಚನ, ಕ್ಷರಣವೆಂದರೆ ಸತತವಾಗಿ ದಾನಮಾಡುವುದು. ಅಧಿಕವಾಗಿ, ನಿರಂತರವಾಗಿ ಭಕ್ತರಿಗೆ ಅಭೀಷ್ಟಗಳನ್ನು ನೀಡುವುದು. ಕ್ಷರ ಧಾತುವು ವಿನಾಶ ಮತ್ತು ಸತತ ದಾನ ಎಂಬ ಅರ್ಥಗಳನ್ನು ಹೇಳುತ್ತದೆ ಎಂದು ಧಾತು ವ್ಯಾಖ್ಯಾನ.

ಏವಂ ಋಷಿಷು ಶಬ್ದೇಷು ಚ ವ್ಯವಹ್ರಿಯಮಾಣಾನಿ ಸರ್ವಾಣಿ ನಾಮಾನಿ ವಿಷ್ಣೋರೇವ ಮುಖ್ಯತಃ । ಕಿಮು ದೇವತಾನಾಮಾನಿ ?

ಯೋ ದೇವಾನಾಂ ನಾಮಧಾ ಏಕ ಏವ
ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥

ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ
ರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ॥

ಯಮಿಂದ್ರಮಾಹುರ್ವರುಣಂ ಯಮಾಹು-
ರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ ॥

ನಾಮಾನಿ ಸರ್ವಾಣಿ ಯಮಾವಿಶಂತಿ
ತಂ ವೈ ವಿಷ್ಣುಂ ಪರಮಮುದಾಹರಂತಿ ॥

ಇತ್ಯಾದಿ ಶ್ರುತಿಭ್ಯಃ । ನ ಕೇವಲಂ ಋಷ್ಯಾದೀನಾಂ ನಾಮ ಭಗವತಃ । ಸರ್ವೇ ವೇದಾ ಅಪಿ ತಸ್ಯೈವ ನಾಮ । ಕಿಮು ವೇದಾಃ? ಸಮುದ್ರ ಮೇಘ ವೃಕ್ಷಪತನ ಭೇರಿತಾಡನಾದಿ ಸರ್ವಘೋಷಾ ಅಪಿ ತಸ್ಯೈವ ನಾಮಾನಿ, ಯಥಾಯೋಗ್ಯಂ ಯೋಜನೀಯಾನಿ । ಏಕಮೇವ ವ್ಯಾಹರಣಂ, ಏಕಪ್ರಕಾರಮೇವ ನಾಮ । ನಿರ್ದೋಷ ಗುಣಪೂರ್ತಿವಾಚಕತ್ವಾದ್ ಏಕಪ್ರಕಾರತಾ । ಪ್ರಾಣೇ ನಾರಾಯಣ ಏವ, ನಾರಾಯಣ ವಿಷಯ ಏವ ವ್ಯವಹಾರಃ ಋಚಸ್ತು ವಿಶೇಷತ ಇಂದ್ರಾದಿನಾಮವತೋ ವಿಷ್ಣೋರ್ಗುಣಾನ್ ಅಲ್ಪಜ್ಞಾನಾಮಪಿ ಪ್ರಕಾಶಯಂತೀತಿ ಪ್ರಾಣೇ ನಾರಾಯಣ ಏವೇತಿ ವಿದ್ಯಾತ್ ॥

ಹೀಗೆ ಋಷಿಪರವಾಗಿಯೂ ಸೂಕ್ತಪರವಾಗಿಯೂ ವ್ಯವಹಾರದಲ್ಲಿರುವ ಎಲ್ಲ ಹೆಸರುಗಳೂ ಮುಖ್ಯವಾಗಿ ವಿಷ್ಣುನಾಮಗಳೇ ಆಗಿವೆ ಎಂದಮೇಲೆ -

'ಎಲ್ಲ ದೇವತೆಗಳ ಹೆಸರುಗಳಿಗೂ ಮುಖ್ಯ ವಿಷಯನಾಗಿದ್ದು ಎಲ್ಲ ಒಳ್ಳೆಯ ವಿಚಾರಗಳಿಗೂ ಯೋಗ್ಯ ವಿಷಯನಾದ ಆ ಹರಿಯನ್ನೇ ಎಲ್ಲ ಲೋಕಗಳೂ ಆಶ್ರಯಿಸಿವೆ. ಇವನನ್ನೇ ಇಂದ್ರ, ಮಿತ್ರ, ವರುಣ, ಅಗ್ನಿ ಎಂದೆಲ್ಲ ಕರೆಯುತ್ತಾರೆ. ಮತ್ತು ಇವನೇ ದಿವ್ಯ ಸುಪರ್ಣನೂ ಗರುತ್ಮಂತನೂ ಎನಿಸಿದ್ದಾನೆ. ಯಾರನ್ನು ಇಂದ್ರನೆನ್ನುವರೋ, ಯಾರನ್ನು ವರುಣನೆನ್ನುವರೋ, ಯಾರನ್ನು ಮಿತ್ರನೆನ್ನುವರೋ, ಯಾರನ್ನು ಸತ್ಯನೆನ್ನುವರೋ, ಎಲ್ಲ ನಾಮಗಳೂ ಯಾರನ್ನು ಆಶ್ರಯಿಸಿವೆಯೋ, ಸರ್ವೋತ್ತಮನಾದ ಅವನನ್ನೇ ವಿಷ್ಣು ಎಂದೆನ್ನುತ್ತಾರೆ'' -

ಇದೇ ಮೊದಲಾದ ಶ್ರುತಿವಾಕ್ಯಗಳಿರುವುದರಿಂದ ವಿಷ್ಣುವಿನ ಹೆಸರುಗಳೆಂದು ಮೊದಲೆ ಪ್ರಸಿದ್ಧವಾದ ದೇವತೆಗಳ ಹೆಸರುಗಳು ಮುಖ್ಯವಾಗಿ ವಿಷ್ಣುವಿನ ಹೆಸರುಗಳೆಂದು ಬೇರೆ ಏನು ಹೇಳಬೇಕು ?

ಋಷಿನಾಮಗಳು ಸೂಕ್ತನಾಮಗಳು ಮಾತ್ರವೆ ಭಗವಂತನ ನಾಮಗಳೆಂದಲ್ಲ. ಎಲ್ಲ ವೇದ ಶಬ್ದಗಳೂ ಅವನ ಹೆಸರುಗಳೆ. ವೇದಶಬ್ದಗಳೆ ಎಂದೇನು ? ಸಮುದ್ರಘೋಷ, ಮೇಘಗರ್ಜನೆ, ಮರಗಳು ಬೀಳುವ ಶಬ್ದ, ನಗಾರಿಯ ಶಬ್ದ ಮುಂತಾದ ಎಲ್ಲ ಧ್ವನಿಗಳೂ ಭಗವಂತನ ನಾಮಗಳೆ, ಅವನ ಅಯಾ ಗುಣಗಳಿಗುಣವಾಗಿ ಆಯಾ ಧ್ವನಿಗಳನ್ನು ಅರ್ಥೈಸಬೇಕು.

'ಏಕೈವ ವ್ಯಾಹೃತಿಃ' ಅಂದರೆ, ಒಂದೇ ವ್ಯವಹಾರ, ಒಂದೇ ರೀತಿಯ ಹೆಸರು. ಎಲ್ಲ ಶಬ್ದಗಳೂ ಭಗವಂತನ ನಿರ್ದೋಷಗುಣಪೂರ್ಣತ್ವವನ್ನೇ ಹೇಳುವುದರಿಂದ ಒಂದೇ ರೀತಿ.

'ಪ್ರಾಣ ಏವ' ಎಂದರೆ ಪ್ರಾಣನೆನಿಸಿದ ನಾರಾಯಣನಲ್ಲಿಯೇ, ನಾರಾಯಣನ ವಿಷಯದಲ್ಲಿಯೇ ವ್ಯವಹಾರ, ಹೆಸರು.

'ಪ್ರಾಣ ಋಚ ಇತ್ಯೇವ ವಿದ್ಯಾತ್' ಅಂದರೆ, ಋಕ್ಕುಗಳು, ವಿಶೇಷವಾಗಿ ಇಂದ್ರಾದಿನಾಮಗಳಿಂದ ಕರೆಸಿಕೊಳ್ಳುವ ವಿಷ್ಣುವಿನ ಗುಣಗಳನ್ನು ಅಲ್ಪಜ್ಞರಿಗೂ ಕೂಡ ತಿಳಿಸಿಕೊಡುವುದರಿಂದ ವಿಶೇಷವಾಗಿ ಪ್ರಾಣಪರ, ಅಂದರೆ ನಾರಾಯಣಪರ ಎಂದೇ ತಿಳಿಯಬೇಕು.

ಉಕ್ತಂ ಚ ಬೃಹತ್ಸಂಹಿತಾಯಾಂ -

ಹುಂಕಾರೇಣ ಸಹ್ಯೆವಾಬ್ಧಿಃ ಸರ್ವಾಭಿಭವಶಕ್ತಿತಾಂ ।
ವಿಷ್ಣೋರ್ವಕ್ತಿ, ಯತೋ ಹುಂ ಚ ಪರಾಭಿಭವವಾಚಕಃ ।
ಓಮಿತಿ ಸ್ವರತೇ ನಿತ್ಯಂ ವಾಯುರ್ಮೇಘೇಷು ಸಂಸ್ಥಿತಃ ।
ಬಲವನ್ನಾದ ಸಂಯುಕ್ತೋ, ಹ್ಯಧಿಕೋಚ್ಚತ್ವಮಸ್ಯ ತು ।
ಓಂಕಾರಸ್ಯಾರ್ಥ ಉದ್ದಿಷ್ಟ, ಉಕ್ತಾರ್ಥಾಧಿಕ್ಯಮೇವ ಚ ।
ನಾದೋ ಬಲೀ ಪ್ರವದತಿ, ತಥಾ ಭೇರೀಧ್ವನಿಃ ಪ್ರಭೋಃ ।
ಅನುದಾತ್ತಸ್ವರೂಪತ್ವಾದ್ ಔದಾರ್ಯಂ ವದತೀಶಿತುಃ ।
ತಪೇದಕ್ಷಯಾನ್ಯನೀಚತ್ವಂ ಘಂಟಾದ್ಯಾಃ ಸ್ವರಿತಾತ್ಮಕಾಃ ।
ಉಚ್ಚಸ್ಥಿತಿಮುದಾತ್ತಸ್ತು ಸ್ವರ್ಣಚಂಚ್ವಾದಿಕಃ ಸ್ವರಃ ।
ವಿಷ್ಣೋರ್ವಕ್ತಿ, ತಥಾ ಮಂದ್ರಃ ಶ್ವಾಸಾದಿಪ್ರಚಯಾತ್ಮಕಃ ।
ಏಕಪ್ರಕಾರತಾಂ ವಿಷ್ಣೋಃ ಸದಾಚಾಲ್ಯಾಂ ವದತ್ಯಪಿ -
ಇತ್ಯಾದಯಃ ಸರ್ವಘೋಷಾ ವಿಷ್ಣೋರೇವ ಗುಣೋನ್ನತಿಂ ।
ವದಂತಿ, ಕಿಮು ವೇದಾದ್ಯ, ಮಾರ್ಜಾರಾದ್ಯಭಿಧಾಸ್ತಥಾ ?
ಮಾರಯಿತ್ವಾ ಪ್ರಭಕ್ಷ್ಯೈವ ಜರಯತ್ಯಖಿಲಂ ಜಗತ್ ।
ತೇನ ಮಾರ್ಜಾರ ಉದ್ದಿಷ್ಟೋ, ಮೋಷಣಾನ್ಮೂಷಕೋ ಹರಿಃ ।
ವರ್ಷಣಾದ್ ವೃಷ ಉದ್ದಿಷ್ಟೋ, ವಲನಾದ್ ವಲ್ಲಿನಾಮಕಃ ।
ತಾರಣಾತ್ ತೃಣನಾಮಾಸೌ ಇತ್ಯಾದ್ಯೈಕೋಽಭಿಧೀಯತೇ ।

ಬೃಹತ್ ಸಂಹಿತೆಯಲ್ಲಿ ಹೀಗೆ ಹೇಳಿದೆ - 'ಸಮುದ್ರವು ಹುಂಕಾರ ಮಾಡುತ್ತಲೆ ವಿಷ್ಣುವಿನಲ್ಲಿ ಎಲ್ಲ ಜಗತ್ತನ್ನೂ ಗೆಲ್ಲುವ ಶಕ್ತಿ ಇದೆ ಎನ್ನುತ್ತಿದೆ. ಏಕೆಂದರೆ 'ಹುಂ'ಕಾರವು ಇದಿರಾಳಿಯನ್ನು ಗೆಲ್ಲುವ ಶಕ್ತಿಯನ್ನು ಹೇಳುವ ಶಬ್ದ. ಮೋಡಗಳಲ್ಲಿರುವ ವಾಯುವು ಗುಡುಗಿನಿಂದ ವ್ಯಕ್ತವಾಗುವ ಓಂಕಾರವನ್ನು ಸದಾ ಉಚ್ಚರಿಸುತ್ತದೆ ಮತ್ತು ಪ್ರಬಲವಾದ ನಾದ ವ್ಯಂಜಕ ಧ್ವನಿಯನ್ನು ಉಂಟುಮಾಡುತ್ತದೆ. ಓಂಕಾರಕ್ಕೆ ಹರಿಯ ಸರ್ವಾಧಿಕ ಶ್ರೇಷ್ಠತ್ವವೆಂಬ ಅರ್ಥ ವಿವಕ್ಷಿತ. ಪ್ರಬಲವಾದ ನಾದವ್ಯಂಜಕ ಧ್ವನಿ ಉಕ್ತಾರ್ಥದಲ್ಲಿ ಆಧಿಕ್ಯವಿದೆ ಎನ್ನುತ್ತದೆ. ನಗಾರಿಯ ಶಬ್ದವು ಅನುದಾತ್ತಸ್ವರವ್ಯಂಜಕವಾದ್ದರಿಂದ ಸರ್ವಾಭೀಷ್ಟಕೊಡಲು ಸಮರ್ಥನಾದ ಹರಿಯ ಔದಾರ್ಯಗುಣವನ್ನು ಹೇಳುತ್ತದೆ. ಘಂಟೆ ಮುಂತಾದವು ಸ್ವರಿತಸ್ವರವ್ಯಂಜಕವಾಗಿದ್ದು ಬೇರೆ ಎಲ್ಲ ವಿಷ್ಣುವಿಗಿಂತ ಕಡಿಮೆ ಎನ್ನುತ್ತವೆ. ನಾಗಸ್ವರ ಮುಂತಾದವುಗಳ ಧ್ವನಿಗಳು ಉದಾತ್ತ ಸ್ವರವ್ಯಂಜಕವಾಗಿದ್ದು ವಿಷ್ಣುವಿನ ಉನ್ನತ ಸ್ಥಿತಿಯನ್ನು ಹೇಳುತ್ತವೆ. ಶ್ವಾಸ ಮುಂತಾದವುಗಳ

ಸಮುಸ್ಥಿತಿಯಿಂದ ವ್ಯಂಗ್ಯವಾದ ಮಂದ್ರ ಸ್ವರವು ವಿಷ್ಣುವಿನ ಏಕಪ್ರಕಾರವಾದ ಸ್ಥಿತಿ ಎಂದೂ ವ್ಯತ್ಯಾಸಗೊಳಿಸಲಾಗದುದು ಎನ್ನುತ್ತದೆ. ಇವೇ ಮೊದಲಾದ ಎಲ್ಲ ಧ್ವನಿಗಳೂ ವಿಷ್ಣುವಿನ ಉನ್ನತ ಗುಣಗಳನ್ನೇ ಹೇಳುತ್ತವೆ. ಇನ್ನು ವೇದಾದಿಗಳ ಮತ್ತು ಮಾರ್ಜಾರ ಮುಂತಾದ ಶಬ್ದಗಳ ಪಾಡೇನು ? ಪ್ರಳಯಕಾಲದಲ್ಲಿ ಎಲ್ಲರನ್ನೂ ಕೊಂದು ತಿಂದು ಅರಗಿಸಿಕೊಳ್ಳುವುದರಿಂದ ಹರಿಯು ಮಾರ್ಜಾರನೆನಿಸಿದ್ದಾನೆ. ಭಕ್ತರ ಪಾಪಗಳನ್ನು ಪರಿಹರಿಸುವುದರಿಂದ ಮೂಷಕ, ಭಕ್ತರಿಗೆ ಅಭೀಷ್ಟಗಳ ಮಳೆಗರೆಯುವುದರಿಂದ ವೃಷನೆನಿಸುತ್ತಾನೆ. ಎಲ್ಲ ವಸ್ತುಗಳನ್ನೂ ಸುತ್ತಲೂ ಬಳ್ಳಿಯಂತೆ ಆವರಿಸುವುದರಿಂದ ವಲಿನಾಮಕನಾಗಿದ್ದಾನೆ. ಸಂಸಾರದಿಂದ ಭಕ್ತರನ್ನು ದಾಟಿಸುವುದರಿಂದ ತೃಣನಾಮಕನೀತ. ಇದೇ ರೀತಿಯಿಂದ ಎಲ್ಲ ಶಬ್ದಗಳಿಂದಲೂ ಮುಖ್ಯವಾಗಿ ಹರಿಯೊಬ್ಬನೆ ಕರೆಸಿಕೊಳ್ಳುತ್ತಾನೆ''.

ಸರ್ವನಾಮಾಪಿ ಭಗವಾನ್ ಸರ್ವಶಕ್ತಿಶ್ಚ ಸರ್ವವಿತ್ ।
ಬ್ರಹ್ಮರುದ್ರಾದಿಜೀವೇಭ್ಯೋ ಜಡೇಭ್ಯಃ ಶ್ರಿಯ ಏವ ತು ।
ವ್ಯತಿರಿಕ್ತಃ ಸದಾನಂತ ಸಾಂದ್ರಾನಂದೈಕರೂಪಕಃ ।
ತಸ್ಯೈವ ಮುಖ್ಯನಾಮಾನಿ ಸಮಾಕೃಷ್ಯೇತರೇಷ್ವಪಿ ।
ಉಪಚಾರಾತ್ ಪ್ರವರ್ತಂತೇ ವ್ಯವಹಾರಪ್ರಸಿದ್ಧಯೇ ।
ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।
ನ ತಾವನ್ಮುಖ್ಯವೃತ್ತ್ಯೈವ, ಮುಖ್ಯತೋಽನ್ಯವ್ಯಪೇಕ್ಷಯಾ ।
ಮುಖ್ಯತಃ ಸರ್ವನಾಮಾ ತು ವಿಷ್ಣುರೇಕೋ ನ ಚಾಪರಃ ।
ತಸ್ಮಾತ್ ಪ್ರಾಣಾದಿಶಬ್ದಾಶ್ಚ ವಿಷ್ಣಾವೇವ ಹಿ ಮುಖ್ಯತಃ ।
ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
ವಾಯುಶ್ಚ ಸೂರ್ಯಸಂಸ್ಥಃ ಸನ್ ತಪತ್ಯೇತಜ್ಜಗತ್ತ್ರಯಂ ।
ಆಜ್ಞಯೈವ ಹರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಂ' । ಇತ್ಯಾದಿ

'ಎಲ್ಲ ಶಬ್ದಗಳಿಂದ ಕರೆಸಿಕೊಂಡರೂ ಅವನು ಸರ್ವಜ್ಞನಾದ್ದರಿಂದ ಜಡಗಳಿಗಿಂತ ಭಿನ್ನ, ವಿಲಕ್ಷಣ. ಸದಾ ಅಭಿವ್ಯಕ್ತಸಾಂದ್ರಾನಂದರೂಪನಾಗಿರುವುದರಿಂದ ಬ್ರಹ್ಮರುದ್ರಾದಿಜೀವರಿಗಿಂತ ಭಿನ್ನ, ವಿಲಕ್ಷಣ. ಅನಂತಾನಂದರೂಪನಾದ್ದರಿಂದ ಲಕ್ಷ್ಮೀದೇವಿಗಿಂತಲೂ ಭಿನ್ನ, ವಿಲಕ್ಷಣ. ಸರ್ವಶಕ್ತನಾದ್ದರಿಂದ ಈ ಎಲ್ಲ ಮಹಿಮೆ ಅವನಲ್ಲಿ ಇದೆ. ಎಲ್ಲ ಶಬ್ದಗಳೂ ಮುಖ್ಯವಾಗಿ ಅವನ ನಾಮಗಳೇ ಆದರೂ ಬೇರೆ ವಸ್ತುಗಳಲ್ಲಿ ಆ ಶಬ್ದಗಳ ವ್ಯವಹಾರ ಉಂಟಾಗುವುದಕ್ಕಾಗಿ ಆ ನಾಮಗಳನ್ನೇ ಸೆಳೆದು ತಂದು ಅಮುಖ್ಯವಾಗಿ ಪ್ರಯೋಗಿಸಲಾಗುತ್ತದೆ. ಹಾಗೆಯೇ ಎಲ್ಲ ಶಬ್ದಗಳೂ ಮುಖ್ಯ ಪ್ರಾಣನಲ್ಲಿಯೂ ವ್ಯವಹರಿಸಲ್ಪಡುತ್ತವೆ. ಹರಿಯಂತೆ

ಪರಮಮುಖ್ಯವೃತ್ತಿಯಿಂದಲ್ಲ. ಬೇರೆ ವಸ್ತುಗಳಿಗೆ ಹೋಲಿಸಿದಾಗ ಹೆಚ್ಚು ಮುಖ್ಯವೆನಿಸಿದ ವೃತ್ತಿಯಿಂದ, ಪರಮಮುಖ್ಯವೃತ್ತಿಯಿಂದ ಸರ್ವಶಬ್ದವಾಚ್ಯ ವಿಷ್ಣು ಒಬ್ಬನೆ, ಬೇರಾರು ಅಲ್ಲ. ಆದ್ದರಿಂದ ಯದ್ಯಪಿ ಪ್ರಾಣಾದಿ ಶಬ್ದಗಳು ವಿಷ್ಣುವಿನಲ್ಲಿಯೇ ಮುಖ್ಯವೆಂದು ಪ್ರಸಿದ್ಧಿ. ಆದರೂ ವಾಯುವಿನಲ್ಲಿ ಬೇರೆ ವಸ್ತುಗಳಿಗೆ ಹೋಲಿಸಿ ಮುಖ್ಯವೃತ್ತಿ ಇದೆ ಎನ್ನಲಾಗುತ್ತದೆ. ವಾಯುವೂ ಸೂರ್ಯನಲ್ಲಿದ್ದು ಹರಿಯಾಜ್ಞೆಯಿಂದ ಮೂರ್ಲೋಕಕ್ಕೂ ಶಾಖ ನೀಡುತ್ತಾನೆ. ವಾಯು ಶಾಖ ನೀಡುವುದು ಅಸಂಭವವೇನಲ್ಲ. ಏಕೆಂದರೆ ಈ ಸೂರ್ಯನೂ ಕೂಡ ವಾಯುವಿನ ಶಕ್ತಿಯಿಂದ ಶಾಖ ನೀಡುತ್ತಾನೆ' ಎಂದು ಮುಂತಾಗಿ.

'ಏಷ ನಾರಾಯಣೋ ದೇವೋ ವಾಯುನಾ ಸಹೈವೇಮಂ ಲೋಕಮಭ್ಯಾರ್ಚತ್' ಎಂದು ಭಾಷ್ಯದಲ್ಲಿ ಹಿಂದೆ ಶತರ್ಚಿ ಮುಂತಾದ ಎಲ್ಲ ಶಬ್ದಗಳನ್ನೂ ನಾರಾಯಣಪರವಾಗಿಯೂ ವಾಯುಪರವಾಗಿಯೂ ತಿಳಿದುಕೊಳ್ಳಬೇಕೆನ್ನುವ ಅಭಿಪ್ರಾಯ ವ್ಯಕ್ತವಾಗಿದೆ. ಆದರೆ ಉಪನಿಷತ್ತಿನಲ್ಲಿ 'ಪ್ರಾಣ ಏವ ಪ್ರಾಣ ಋಚ ಇತ್ಯೇವ' ಪ್ರಾಣ ಪರವಾಗಿಯೆ ವೇದಾದಿಗಳನ್ನು ತಿಳಿಯಬೇಕೆಂದಿದೆ. ಪ್ರಾಣ ಎಂದರೆ ಬ್ರಹ್ಮಸೂತ್ರ ಸಿದ್ಧಾಂತದಂತೆ ನಾರಾಯಣನೆಂದಿಟ್ಟುಕೊಂಡರೆ ಸರ್ವಶಬ್ದವಾಚ್ಯ ನಾರಾಯಣನೆ, ವಾಯು ಅಲ್ಲ ಎಂದಂತಾಯಿತು. ಮುಖ್ಯಪ್ರಾಣನೆಂದಿಟ್ಟುಕೊಂಡರೆ ಮುಖ್ಯಪ್ರಾಣನೆ ಸರ್ವಶಬ್ದವಾಚ್ಯ, ನಾರಾಯಣನಲ್ಲ ಎಂದಂತಾಯಿತು. ಈ ಸಮಸ್ಯೆಗೆ ಪರಿಹಾರ ಭಾಷ್ಯದಲ್ಲಿ ಉಕ್ತವಾಗಿದೆ. ಪರಮಮುಖ್ಯವೃತ್ತಿ ವಿವಕ್ಷೆಯಿಂದ ನಾರಾಯಣನೆ ಸರ್ವಶಬ್ದವಾಚ್ಯ. ಅವನನ್ನು ಬಿಟ್ಟು ಇತರರಿಗೆ ಹೋಲಿಸಿದಾಗ ಅವರೆಲ್ಲರಿಗಿಂತ ಹೆಚ್ಚು ಮುಖ್ಯವಾದ ವೃತ್ತಿಯಿಂದ ವಾಯುವೆ ಸರ್ವಶಬ್ದವಾಚ್ಯ. ಇಲ್ಲಿ ಭಾಷ್ಯದಲ್ಲಿ ಪುನರುಕ್ತಿ ಇಲ್ಲ. 'ಪ್ರಾಣಾದಿ ಸರ್ವ ಶಬ್ದಗಳಿಗೂ ವಾಯುವಿನಲ್ಲಿ ಇತರರಿಗಿಂತ ಹೆಚ್ಚು ಮುಖ್ಯವಾದ ವೃತ್ತಿ ಇದ್ದರೂ ತಾತ್ಪರ್ಯ ಇರಲಾರದು. ಬ್ರಹ್ಮಸೂತ್ರದಲ್ಲಿ, ವಿಷ್ಣುವಿನಲ್ಲಿಯೇ ತಾತ್ಪರ್ಯವೆಂದು ಸಿದ್ಧಾಂತ ಮಾಡಲಾಗಿದೆ. ಆದ್ದರಿಂದ 'ಪ್ರಾಣ ಏವ' ಎಂಬಲ್ಲಿ ಮುಖ್ಯಪ್ರಾಣಪರತ್ವ ಹೇಗೆ ? ಎಂಬ ಶಂಕೆಗೆ ಭಾಷ್ಯದಲ್ಲಿ ಸಮಾಧಾನ ನೀಡಲಾಗಿದೆ. ಬ್ರಹ್ಮಸೂತ್ರದಲ್ಲಿ ವಿಷ್ಣುಪರತ್ವ ಹೇಳಿದುದು ಪರಮಮುಖ್ಯತಾತ್ಪರ್ಯದಿಂದ, ಇತರರಿಗಿಂತ ಹೆಚ್ಚು ಮುಖ್ಯವಾದ ತಾತ್ಪರ್ಯದಿಂದ ವಾಯುಪರತ್ವ ಹೇಳಿದರೆ ವಿರೋಧವಿಲ್ಲವೆಂದು. ಇದನ್ನು ಬೃಹತ್‌ಸಂಹಿತಾವಚನದಿಂದ ಹೇಳಿ, ಆಚಾರ್ಯರು ಸ್ವವಚನದಿಂದಲೂ ಮುಂದೆ ಹೇಳುತ್ತಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ಸಕಲಶಬ್ದ ಸಮನ್ವಯ ಮಾಡಿದರೆ ಕರ್ಮಾನುಷ್ಠಾನ ಹೇಗೆ ಸಾಧ್ಯ?

**तत्वप्रदीपः – वसन्ते वसन्ते ज्योतिषा यजेतेत्यादिकर्माद्यभिधायकस्य पदकदम्बकस्य प्रत्येकं ब्रह्मवाचकत्वं न युज्यते । कर्तृकरणकर्मक्रमादि वचनविरोधात् । मुख्यत एकस्योभयार्थत्वसम्भवेन तद्वचनाभावे कृत्यनुष्ठानलोपप्रसङ्गादित्यत आह – ज्योतिरुपक्रमात्तु तथा ह्यधीयते एके ।।**

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇವೇ ಮೊದಲಾದವು ಯಜ್ಞಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುತ್ತಿವೆ. ಈ ವಾಕ್ಯದಲ್ಲಿರುವ ಪದಸಮೂಹಗಳು ಪ್ರತ್ಯೇಕವಾಗಿ ಬ್ರಹ್ಮವಾಚಕವಾಗಲು ಸಾಧ್ಯವಿಲ್ಲ. ಏಕೆಂದರೆ ಕರ್ತೃ, ಕರಣ, ಕರ್ಮ ಇವುಗಳನ್ನು ಪ್ರತಿಪಾದನೆ ಮಾಡುವ ಕ್ರಮದಲ್ಲಿ ಈ ವಾಕ್ಯವಿರುತ್ತದೆ. ತದ್ವಿರೋಧವು ಪ್ರಾಪ್ತವಾಗುತ್ತದೆ. ಒಂದೇ ಪದಕ್ಕೆ ಬ್ರಹ್ಮ ಹಾಗೂ ಕರ್ಮ ಎಂಬೆರಡೂ ಅರ್ಥವನ್ನು ಅಂಗೀಕಾರ ಮಾಡಬಾರದು. ಸಕಲಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದರೆ 'ವಸಂತೇ ವಸಂತೇ' ಇತ್ಯಾದಿ ವಾಕ್ಯದಿಂದಲೂ ಪ್ರತಿಪಾದ್ಯನಾಗುತ್ತಾನೆ. ಆಗ ಜ್ಯೋತಿಷ್ಟೋಮಾದಿ ಕರ್ಮಗಳ ಅನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದೆ ? ಈ ಆಕ್ಷೇಪಕ್ಕೆ ಉತ್ತರ ನೀಡಲು 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ' ಎಂಬ ಸೂತ್ರವು ಹೊರಟಿದೆ.

ವಿವರಣೆ - ಹಿಂದಿನ ಮೂರು ಪಾದಗಳಲ್ಲಿ ಸಮನ್ವಯಾಧಿಕರಣದಲ್ಲಿ ಪ್ರತಿಜ್ಞೆ ಮಾಡಲ್ಪಟ್ಟ ಸಕಲ ವೈದಿಕಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡಲಾಯಿತು. ಇದರ ಮೇಲೆ ಹೀಗೆ ಆಕ್ಷೇಪವು ಪ್ರಾಪ್ತವಾಗುತ್ತದೆ - ವೇದದ ಕೆಲವು ಭಾಗವು ಜ್ಯೋತಿಷ್ಟೋಮಾದಿ ಕರ್ಮವನ್ನು ವಿಧಾನ ಮಾಡುತ್ತಿದೆ. ಆ ವಾಕ್ಯಗಳಲ್ಲಿ ಕೆಲವು ಪದಗಳು ಕರ್ತೃವನ್ನು ಇನ್ನೂ ಕೆಲವು ಯಜ್ಞಸಾಮಗ್ರಿಗಳನ್ನು ಹಾಗೂ ಕರ್ಮಗಳ ಕ್ರಮವನ್ನು ಪ್ರತಿಪಾದನೆ ಮಾಡುತ್ತಿವೆ. ಈಗ ಪ್ರತಿಯೊಂದು ಪದಗಳಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಹೇಳಿದರೆ ಈ ಕರ್ಮಕ್ರಮಾದಿಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲದಾಗುತ್ತವೆ. ಆಗ ವೈದಿಕವಾದ ಕರ್ಮಾನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದೆ ಎಂದು.

ಐತರೇಯಶಾಖೆಯಲ್ಲಿ ಇದಕ್ಕೆ ಉತ್ತರವಿದೆ

**तत्वप्रदीपः – ज्योतिष्टोमादिकर्मकर्तृकरणादीनामशेषाणां पदार्थानां वाचकत्वेन प्रसिद्धशब्दानामभिधेयोऽपि स एव । यथा चायं सर्वशब्दवाच्यो भवति तथा ह्यधीयत एके शाखिनः प्रघट्टकोपक्रमादेवाऽरभ्य ।**

ಭಾಷ್ಯದಲ್ಲಿ 'ಜ್ಯೋತಿರಾದಿಕರ್ಮವಾಚಕತ್ವೇನ ಪ್ರಸಿದ್ಧಶಬ್ದಾನಾಮಭಿಧೇಯೋಽಪಿ ಸ ಏವ' ಎಂಬುದರಿಂದ ಸೂತ್ರಾರ್ಥವನ್ನು ಹೇಳಿದ್ದಾರೆ. ಭಾಷ್ಯದ ಈ ಮಾತಿಗೆ ಹೀಗೆ ಅರ್ಥ - ಜ್ಯೋತಿಷ್ಟೋಮ ಮೊದಲಾದ ಕರ್ಮ, ಕರ್ತೃ, ಕರಣ ಎಂಬ ಸಕಲ ಪದಾರ್ಥಗಳ ವಾಚಕವೆಂದು ಪ್ರಸಿದ್ಧವಾದ ಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ಮಹಾವಿಷ್ಣುವು ಸರ್ವಶಬ್ದವಾಚ್ಯನಾಗಿದ್ದಾನೆಂದೇ ಕೆಲವು ಶಾಖೆಯವರು ಅಧ್ಯಯನ ಮಾಡುತ್ತಾರೆ. ಆ ಉಪನಿಷತ್ತಿನ ಪ್ರಾರಂಭ ಹೀಗೆಯೇ ಆಗಿದೆ.

> **ವಿವರಣೆ** - ಐತರೇಯ ಶಾಖೆಯವರು ಸಕಲ ಕರ್ಮವಾಚಕಪದಗಳನ್ನು ವಿಷ್ಣುವಿನಲ್ಲಿಯೇ ಸಮನ್ವಯ ಮಾಡುತ್ತಾರೆ. ಆದ್ದರಿಂದ ಕರ್ಮಪ್ರತಿಪಾದಕವಾದ ವಾಕ್ಯಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದು ಈ ಅಧಿಕರಣದ ಸಿದ್ಧಾಂತ.
>
> 'ಉಪಕ್ರಮಾತ್' ಎಂಬ ಸೂತ್ರದಲ್ಲಿರುವ ಪಂಚಮೀ ವಿಭಕ್ತಿಯು ಲ್ಯಬ್ ಲೋಪನಿಮಿತ್ತಕವಾಗಿದೆ. 'ತು' ಎಂಬ ಶಬ್ದವು ಏವಾರ್ಥದಲ್ಲಿದೆ. 'ಹಿ' ಎಂಬ ಶಬ್ದವು ಹೇತ್ವರ್ಥದಲ್ಲಿದೆ. ಆದ್ದರಿಂದ ತೈತ್ತಿರೀಯೋಪನಿಷತ್ತು ಸಕಲಶಬ್ದಗಳು ಬ್ರಹ್ಮನಲ್ಲಿ ಸಮನ್ವಯಗೊಳ್ಳುತ್ತವೆ ಎಂದು ಹೇಳುವ ಮೊದಲು ಕೆಲವು ಋಷಿವಾಚಕಪದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿ ತೋರಿಸಿದೆ. ಹೀಗೆ ಸಕಲಗುಣಪರಿಪೂರ್ಣತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಸರ್ವಶಬ್ದಸಮನ್ವಯವನ್ನು ಈ ಉಪನಿಷತ್ತು ಮಾಡುತ್ತಿದೆ.

'ಏಷ ಇಮಂ ಲೋಕಂ' ಎಂಬ ಶ್ರುತ್ಯರ್ಥ

**तत्वप्रदीपः – अयं श्रुत्यर्थः - एष परमात्मा इमे देहं लोकं जीवान्तर्यामि रूपेणाभ्यार्चत् । य एष आदित्यस्थस्तपति, ''यश्चासावदित्ये'' ''अथ य एषोऽन्तर आदित्ये हिरण्यश्मश्रुः'' ''येनाऽदित्यस्तपति तेजसा भ्राजसा च''**

**''यदादित्यगतं तेजः'' इत्यादि श्रुतिस्मृतिभ्यो विष्णुरेव हि तत्रस्थस्तपति । सर्वप्रणेता ह्येष यस्तपति । शतं वर्षाणि तं लोकमभ्यार्चदिति यत्तस्माच्छतर्चिन इत्याचक्षते विद्वांसः । एतमेव शतर्चिनः सन्तं शतर्चिन इत्याचक्षते न त्वन्यानिति । एवमन्यानामान्यपि परमात्मनि पृथक्पृथङ्निरुच्य पुनः सर्ववेदप्रभृतयः समद्रघोषान्ताः शब्दाः एकविषयैव व्याहृतिः । सा च सर्वप्रणेतृपरमात्मविषयैवेति विद्यादिति सतात्पर्यमधीयते।**

'ಏಷ ಇಮಂ ಲೋಕಂ' ಇತ್ಯಾದಿ ಶ್ರುತ್ಯರ್ಥ ಹೀಗಿದೆ - ಏಷಃ = ಪರಮಾತ್ಮನು, ಇಮಂ= ದೇಹಂ, ಈ ಬ್ರಹ್ಮಾದಿ ದೇವತೆಗಳ ಶರೀರವನ್ನು, ಅಭ್ಯಾರ್ಚತ್ = ಅಂತರ್ಯಾಮಿರೂಪದಿಂದ ಪ್ರವೇಶ ಮಾಡಿದನು. 'ಯ ಏಷ ಆದಿತ್ಯಸ್ತಪತಿ' 'ಯಶ್ಚಾಸಾವಾದಿತ್ಯೇ' = ಯಾವ ಈ ಆದಿತ್ಯನು ಜ್ವಲಿಸುತ್ತಿದ್ದಾನೋ, ಅವನಲ್ಲಿ ಈ ನಾರಾಯಣನೇ ನೆಲೆಸಿದ್ದಾನೆ. 'ಅಥ ಯ ಏಷೋಽಂತರ ಆದಿತ್ಯೇ ಹಿರಣ್ಮಯಶ್ಮಶ್ರುಃ' ಯಾವ ಹಿರಣ್ಯಶ್ಮಶ್ರು ಎನಿಸಿದ ಭಗವಂತನು ಈ ಆದಿತ್ಯನಲ್ಲಿ ನೆಲೆಸಿದ್ದಾನೋ, 'ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ' ಯಾರಿಂದ ಈ ಸೂರ್ಯನು ತೇಜಸ್ಸಿನಿಂದ ಎಲ್ಲವನ್ನೂ ಸುಡುವನೋ, 'ಯದಾದಿತ್ಯಗತಂ ತೇಜಃ' ಯಾರ ಅಧೀನವಾದ ತೇಜಸ್ಸು ಸೂರ್ಯನಲ್ಲಿದೆಯೋ, ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ವಿಷ್ಣುವೇ ಆದಿತ್ಯನಲ್ಲಿದ್ದು ಎಲ್ಲವನ್ನೂ ಬೆಳಗುತ್ತಾನೆ. ಸಕಲ ಪ್ರಣೇತೃವಾದವನೇ ಇಲ್ಲಿ ನೆಲೆಸಿದ್ದಾನೆ. ಮತ್ತು ನೂರು ವರ್ಷಗಳ ಕಾಲ ಚತುರ್ಮುಖಬ್ರಹ್ಮನ ಶರೀರದಲ್ಲಿಯೇ ವಿಷ್ಣುವು ನೆಲಿಸಿದ್ದನು. ಆದ್ದರಿಂದ ಇವನಿಗೆ 'ಶತರ್ಚಿ' ಎಂಬ ಹೆಸರು ಬಂದಿತು ಎಂಬುದಾಗಿ ವಿದ್ವಾಂಸರು ಹೇಳುತ್ತಾರೆ. ಬೇರೆಯವರನ್ನು ಶತರ್ಚಿ ಎಂದು ವಿದ್ವಾಂಸರು ಕರೆಯುವುದಿಲ್ಲ ಎಂಬುದಾಗಿ ಐತರೇಯೋಪನಿಷತ್ತಿನ ಪ್ರಾರಂಭದಲ್ಲಿ 'ಶತರ್ಚಿ' ಎಂಬ ಪದವನ್ನು ಸಮನ್ವಯ ಮಾಡುವ ಮೂಲಕ ಸಕಲಶಬ್ದವಾಚ್ಯತ್ವವನ್ನು ಸಮರ್ಥನೆ ಮಾಡಲಾಗಿದೆ. ಪರಮಾತ್ಮನಲ್ಲಿ ಒಂದೊಂದೇ ಪದಗಳನ್ನು ಮೊದಲು ಉದಾಹರಣೆಯ ಮೂಲಕ ಸಕಲವೇದಸಮನ್ವಯದಿಂದ ಪ್ರಾರಂಭಮಾಡಿ, ಸಮುದ್ರ ಧ್ವನಿಯ ತನಕ ಸಕಲಶಬ್ದಗಳನ್ನು ಪರಮಾತ್ಮನಲ್ಲಿಯೇ ಸಮನ್ವಯ ಮಾಡಲಾಗಿದೆ. ಎಲ್ಲವನ್ನೂ ಪ್ರೇರಣೆ ಮಾಡುವ ಪರಮಾತ್ಮನೇ ಈ ಎಲ್ಲ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ತಾತ್ಪರ್ಯಸಹಿತವಾಗಿ ಆರಣ್ಯಕರು ಅಧ್ಯಯನ ಮಾಡುತ್ತಾರೆ.

ವಿವರಣೆ - ಓದುಗರ ಅನುಕೂಲಕ್ಕಾಗಿ ಐತರೇಯೋಪನಿಷತ್ತಿನ ಎರಡನೇ ಪ್ರಘಟ್ಟಕದ ಎರಡನೆಯ ಅಧ್ಯಾಯದಲ್ಲಿ ಪ್ರಾಪ್ತವಾಗುವ ಉಪನಿಷದ್ಭಾಗವನ್ನು ಭಾಷ್ಯಸಹಿತವಾಗಿ ನೀಡಲಾಗಿದೆ. ಮತ್ತು ಪ್ರಸಿದ್ಧವಾದ ಸಂಧ್ಯಾವಂದನೆಯ 'ಧ್ಯೇಯಃ ಸದಾಃ' ಎಂಬ ಮಂತ್ರವು ಇದೇ ಸಂದರ್ಭದಲ್ಲಿ ಆಚಾರ್ಯರು ಉಲ್ಲೇಖಿಸಿದ್ದಾರೆ ಎಂಬುದನ್ನು ಗಮನಿಸಬೇಕು.

ಏಷ ಇಮಂ ಲೋಕಮಭ್ಯಾರ್ಚತ್ ಪುರುಷರೂಪೇಣ, ಯ ಏಷ ತಪತಿ । ಪ್ರಾಣೋ ವಾವ ತದಭ್ಯಾರ್ಚತ್ । ಪ್ರಾಣೋ ಹ್ಯೇಷ ಯ ಏಷ ತಪತಿ ।

ಸೂರ್ಯಮಂಡಲದಲ್ಲಿದ್ದು ಯಾರು ಜ್ವಲಿಸುತ್ತಿರುವನೋ ಅವನೇ ಲಕ್ಷ್ಮೀ ಮುಖ್ಯಪ್ರಾಣಸಮೇತನಾಗಿ ಅಂತರ್ಯಾಮಿರೂಪದಿಂದ ಬ್ರಹ್ಮಾದಿಜೀವರ ಶರೀರಗಳನ್ನು ಪ್ರವೇಶಿಸಿದನು. ಅಂದರೆ ನಾರಾಣನೆ ಬ್ರಹ್ಮಾದಿ ಜೀವರಶರೀರವನ್ನು ಪ್ರವೇಶಿಸಿದನು. ಸೂರ್ಯಮಂಡಲದಲ್ಲಿ ಜ್ವಲಿಸುತ್ತಿರುವವನು ನಾರಾಯಣನೆ.

'ಏಷ' ನಾರಾಯಣೋ ದೇವೋ ವಾಯುನಾ ಸಹೈವೇಮಂ ಲೋಕಮಭ್ಯಾರ್ಚತ್ ಬ್ರಹ್ಮಾದಿ ಶರೀರೇಷು ಪ್ರವಿವೇಶ । ಪುರುಷ ಇತಿ ಅಂತರ್ಯಾಮಿರೂಪಸ್ಯಾಖ್ಯಾ, ಪುರಿ ಶೇತೇ ಇತಿ । ಪ್ರಸಿದ್ಧತ್ವಾಚ್ಚ ಪಂಚರಾತ್ರೇಷು। ಯ ಏಷ ಸೂರ್ಯಮಂಡಲೇ ಸ್ಥಿತ್ವಾ ತಪತಿ ಭಗವಾನ್, ಸ ನಾರಾಯಣಃ । 'ಯ ಆದಿತ್ಯೇ ತಿಷ್ಠನ್ ಆದಿತ್ಯಾದಂತರೋ ಯಮಾದಿತ್ಯೋ ನ ವೇದ' ಇತ್ಯಾದಿ ಶ್ರುತಿಭ್ಯಃ। 'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ' ಇತ್ಯುಕ್ತ್ವಾ 'ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ' ಇತ್ಯುಕ್ತತ್ವಾನ್ನ ಶಿವಾದಯಃ । ಶಿವೋ ಹಿ ವಿರೂಪಾಕ್ಷಃ । ಪ್ರಸಿದ್ಧಶ್ಚ ಪುಂಡರೀಕಾಕ್ಷ ಇತಿ ಭಗವಾನ್ ನಾರಾಯಣಃ ।

'ಏಷಃ' ಅಂದರೆ ಮುಖ್ಯಪ್ರಾಣ ಸಮೇತನಾದ ಈ ನಾರಾಯಣದೇವನು 'ಇಮಂ ಲೋಕಮಭ್ಯಾರ್ಚತ್' ಎಂದರೆ ಬ್ರಹ್ಮಾದಿಜೀವರ ಶರೀರಗಳಲ್ಲಿ ಪ್ರವೇಶಿಸಿದನು. 'ಪುರಿ ಶೇತೇ' ಶರೀರದಲ್ಲಿ ಇರುವವನೆಂಬ ಅರ್ಥದಲ್ಲಿ ಪುರುಷ ಎಂಬ ಶಬ್ದ ಅಂತರ್ಯಾಮಿ ರೂಪಕ್ಕೆ ಹೆಸರು. ಪಂಚರಾತ್ರಗ್ರಂಥಗಳಲ್ಲಿ ಈ ಅರ್ಥದಲ್ಲಿ ಪುರುಷ ಶಬ್ದವು ಪ್ರಸಿದ್ಧವೂ ಆಗಿದೆ. ಸೂರ್ಯಮಂಡಲದಲ್ಲಿದ್ದು ಜ್ವಲಿಸುತ್ತಿರುವವನು ಭಗವಾನ್ ನಾರಾಯಣನೆ. ಏಕೆಂದರೆ 'ಯಾರು ಆದಿತ್ಯನೊಳಗಿದ್ದು ಆದಿತ್ಯನಿಗಿಂತ ಬೇರೆಯಾಗಿದ್ದು ಯಾರನ್ನು ಆ ಆದಿತ್ಯನೆ ತಿಳಿದಿಲ್ಲವೋ' ಎಂದು ಶ್ರುತಿಗಳಲ್ಲಿ ಇವನೆ ಸೂರ್ಯಮಂಡಲದೊಳಗಿರುವವನೆಂದು ಪ್ರಸಿದ್ಧನಾಗಿದ್ದಾನೆ. 'ಲೋಕವಿಲಕ್ಷಣಸುಖಪೂರ್ಣನಾದ ಯಾವ ಪುರುಷನು ಆದಿತ್ಯನೊಳಗೆ ಕಾಣುತ್ತಿರುವನೋ' ಎಂದು ಹೇಳಿ 'ಅವನ ಕಣ್ಣುಗಳು ನೀರ ಮೇಲೆ ಅರಳಿ ನಿಂತ ಕಮಲದಂತೆ' ಎಂದು ಹೇಳಿದ್ದರಿಂದ ಸೂರ್ಯಮಂಡಲಾಂತರ್ಗತನೆಂದು ವರ್ಣಿತನಾಗುವವನು ಶಿವ

ಮುಂತಾದವರು ಯಾರೂ ಅಲ್ಲ. ಶಿವ ವಿರೂಪಾಕ್ಷನೆಂದು ಪ್ರಸಿದ್ಧನಾಗಿದ್ದಾನೆ. ಭಗವಾನ್ ನಾರಾಯಣ ಪುಂಡರೀಕಾಕ್ಷನೆಂದು ಪ್ರಸಿದ್ಧ.

'ಯಾದಿತ್ಯೋ ನ ವೇದ' ಇಲ್ಯುಕ್ತತ್ವಾನ್ನಾದಿತ್ಯಃ । 'ಭೇದವ್ಯಪದೇಶಾಚ್ಚಾನ್ಯಃ' ಇತಿ ಚ ಭಗವದ್ವನಮ್ ।

ವೃತ್ರಂ ಯದಿಂದ್ರ ಶವಸಾಽವಧೀರಹಿಂ
ಆದಿತ್ ಸೂರ್ಯಂ ದಿವ್ಯಾರೋಹಯೀ ದೃಶೇ ।
ಯತ್ ಸೂರ್ಯಸ್ಯ ಹರಿತಃ ಪತಂತೀಃ
ಪುರಃ ಸತೀರುಪರಾ ಏತಸೇ ಕಃ ।
ಸೀದನ್ನಿಂದ್ರಸ್ಯ ಜಠರೇ ಕನಿಕ್ರದನ್ -
ನೃಭಿಯರತಃ ಸೂರ್ಯಮಾರೋಹಯೋ ದಿವಿ ।
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।
ಯಃ ಸೂರ್ಯಂ ಯ ಉಷಸಂ ಜಜಾನ
ಯೋ ಅಪಾಂ ನೇತಾ ಸ ಜನಾಸ ಇಂದ್ರಃ ।
ಉದ್ವೇತಿ ಪ್ರಸವೀತಾ ಜನಾನಾಂ
ಮಹಾನ್ ಕೇತುರರ್ಣವಃ ಸೂರ್ಯಸ್ಯ ।
ಯೇನಾವೃತಂ ಖಂ ಚ ದಿವಂ ಮಹೀಂ ಚ
ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ ।
ಯಮಂತಃ ಸಮುದ್ರೇ ಕವಯೋಽವಯಂತಿ
ಯದಕ್ಷರೇ ಪರಮೇ ಪ್ರಜಾಃ ।
ತಮೇತಾಃ ಪಂಚ ದೇವತಾಃ ಪರಿಮ್ರಿಯಂತೇ
ವಿದ್ಯುದ್ ವೃಷ್ಟಿಶ್ಚಂದ್ರಮಾ ಆದಿತ್ಯೋಽಗ್ನಿಃ ।
ಇತ್ಯಾದೌ ಸೂರ್ಯಸ್ಯ ಸರ್ವತ್ರ ಪರಾಧೀನತ್ವಾವಗತೇಶ್ಚ ॥

ಹೇ ಪರಮೈಶ್ವರ್ಯಶಾಲಿಯಾದ ನಾರಾಯಣನೆ, ನೀನು ವೃತ್ರನನ್ನೂ ಅಹಿಯನ್ನೂ ಅನಾಯಾಸದಿಂದ ಕೊಂದು ಜೀವಿಗಳಿಗೆ ಜ್ಞಾನ ಲಾಭಕ್ಕಾಗಿ ಸೂರ್ಯನನ್ನು ಅಂತರಿಕ್ಷದಲ್ಲಿ ಮೇಲೇರಿಸಿರುವಿ.

ಎಲ್ಲ ದಿಕ್ಕುಗಳಲ್ಲಿಯೂ ಮುಂಭಾಗದಲ್ಲಿಯೂ ಮೇಲ್ಭಾಗದಲ್ಲಿಯೂ ಪಸರಿಸುವ ಸೂರ್ಯನ ಕಿರಣಗಳನ್ನು ಜೀವಿಗಳಿಗೆ ಜ್ಞಾನಕಾರಣವನ್ನಾಗಿ ಮಾಡಿರುವಿ.

ಇಂದ್ರನ ಒಳಗಿರುವ ನೀನು ಸೂರ್ಯನನ್ನು ಅಂತರಿಕ್ಷದಲ್ಲಿ ಮೇಲೇರಿಸುವ ಮೂಲಕ ಜೀವಿಗಳಿಂದ ಕರ್ಮ ಮಾಡಿಸಿರುವಿ. ಆದರಿಂದಲೇ ಅವರಿಗೆ ಜ್ಞಾನಲಾಭ.

ಪರಮ ಪುರುಷನ ಮನಸ್ಸಿನಿಂದ ಚಂದ್ರನೂ ಕಣ್ಣಿನಿಂದ ಸೂರ್ಯನೂ ಹುಟ್ಟಿದನು.

ಜನರೆ, ಯಾರು ಸೂರ್ಯನನ್ನೂ ಉಷೆಯನ್ನೂ ಹುಟ್ಟಿಸಿರುವನೋ ನೀರು ಹರಿಯಲು ಯಾರು ಕಾರಣನೋ ಅವನೆ ಪರಮೈಶ್ವರ್ಯಶಾಲಿ ನಾರಾಯಣ.

ಜನರ ಉತ್ಪತ್ತಿಗೆ ಕಾರಣನೂ ನಿತ್ಯ ನೂತನನೂ ಜ್ಞಾನಾನಂದಸ್ವರೂಪಿಯೂ ಆದ ನಾರಾಯಣನು ಸೂರ್ಯನಿಗೆ ಆಧಾರನಾಗಿ ಮತ್ತು ಜ್ಞಾನದಾಯಕನಾಗಿ ಉದಯಿಸುತ್ತಾನೆ.

ಯಾರಿಂದ ಆವರಿಸಲ್ಪಟ್ಟಿರುವ ಆಕಾಶ ಸ್ವರ್ಗಭೂಮಿಗಳನ್ನು ಯಾರ ಪ್ರೇರಣೆಯಿಂದ ಸೂರ್ಯನು ತೇಜಸ್ಸಿನಿಂದ ಉಷ್ಣಗೊಳಿಸುವನೋ, ಮತ್ತು ಪ್ರಕಾಶದಿಂದ ಬೆಳಗುವನೋ, ಜ್ಞಾನಿಗಳೂ ಕೂಡ ಸಮುದ್ರ ಶಾಯಿಯಾದ ಯಾರನ್ನು ಸ್ವಲ್ಪವೇ ತಿಳಿಯಬಲ್ಲರೋ, ನಾಶರಹಿತನಾದ ಯಾರಲ್ಲಿ ಎಲ್ಲ ಜೀವಿಗಳೂ ಆಸರೆ ಪಡೆದಿವೆಯೋ ಅವನೆ ಪರಬ್ರಹ್ಮ ನಾರಾಯಣ. ವಿದ್ಯುತ್ ವೃಷ್ಟಿ ಚಂದ್ರ ಸೂರ್ಯ ಅಗ್ನಿ ಈ ಐವರು ದೇವತೆಗಳೂ ಆ ಪರಮಾತ್ಮನ ಸಂಕಲ್ಪಾನುಸಾರ ಕೊನೆಯಲ್ಲಿ ಮರಣ ಹೊಂದುತ್ತಾರೆ.

**ಇಂಥ ಅನೇಕ ಶ್ರುತಿಗಳಲ್ಲಿ ಸೂರ್ಯ ಆಕಾಶದಲ್ಲಿ ಸಂಚರಿಸುವುದೂ, ತನ್ನ ಪ್ರಕಾಶದಿಂದ ಜೀವಿಗಳಿಗೆ ಜ್ಞಾನ ಮತ್ತು ಕರ್ಮಾಚರಣಸಾಮರ್ಥ್ಯ ಲಭಿಸುವಂತೆ ಮಾಡುವುದೂ, ತಾನು ಹುಟ್ಟುವುದೂ, ಜಗತ್ತಿಗೆ ಬೆಳಕು ಶಾಖಗಳನ್ನು ನೀಡುವುದೂ ಕೊನೆಯಲ್ಲಿ ಮರಣ ಹೊಂದುವುದೂ ಹರಿಯ ಅಧೀನ ಎಂದು ಎಲ್ಲ ವಿಷಯಗಳಲ್ಲಿಯೂ ಸೂರ್ಯನಿಗೆ ಪರಾಧೀನತ್ವವ ಕಂಡುಬರುವುದರಿಂದ ವಿಷ್ಣು ಸೂರ್ಯರು ಬೇರೆ ಬೇರೆಯೆ.**

**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।**
**ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ**
**ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥ - ಇತಿ ನಾರಸಿಂಹ ಪುರಾಣೇ ।**

**ತಾಪನೀ ಪಾಚಿಕಾ ಚೈವ ಶೋಷಣೀ ಚ ಪ್ರಕಾಶನೀ ।**
**ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥**
**- ಇತಿ ಚ ಪಾದ್ಮೇ ॥**

**ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ಇತಿ ಚ ।**

ಕೇಯೂರ ಮಕರಕುಂಡಲ ಕಿರೀಟ ಹಾರಗಳಿಂದೊಪ್ಪುತ್ತ, ಶಂಖಚಕ್ರಧಾರಿಯಾಗಿ, ಪದ್ಮಾಸದಲ್ಲಿ ಕುಳಿತು ಸೂರ್ಯಮಂಡಲದ ನಡುವೆ ವಿರಾಜಿಸುವ ಪೂರ್ಣಾನಂದ ಶರೀರಿಯಾದ ನಾರಾಯಣ ಸರ್ವದಾ ಧ್ಯಾನಯೋಗ್ಯನೆಂದು ನರಸಿಂಹ ಪುರಾಣದಲ್ಲಿ ಹೇಳಿದೆ.

ರಾಜನೆ, ಉಷ್ಣಗೊಳಿಸುವುದು, ಪಕ್ವಗೊಳಿಸುವುದು, ಒಣಗಿಸುವುದು, ಬೆಳಗಿಸುವುದು ಇವು ಸೂರ್ಯನ ಶಕ್ತಿಯಲ್ಲ; ನಾರಾಯಣನ ಶಕ್ತಿ ಎಂದು ಪದ್ಮ ಪುರಾಣದಲ್ಲಿ ಹೇಳಿದೆ.

ಸೂರ್ಯನಲ್ಲಿ ಚಂದ್ರನಲ್ಲಿ ಮತ್ತು ಅಗ್ನಿಯಲ್ಲಿ ಇರುವ ಯಾವ ತೇಜಸ್ಸು ಸಮಸ್ತ ಜಗತ್ತನ್ನು ಬೆಳಗಿಸುವುದೋ ಅದನ್ನು ನನ್ನ ತೇಜಸ್ಸೆಂದು ತಿಳಿ ಎಂದೂ ಹೇಳಿದೆ.

> ''ನ ಚ ವಿಷ್ಣೋರನ್ಯಾಧೀನತ್ವಂ ಶ್ರುತಿಷೂಕ್ತಂ ಕುತ್ರಚಿತ್ । ಉತ್ಪತ್ತಿಸ್ತು ಪ್ರಾದುರ್ಭಾವಾಪೇಕ್ಷಯಾ । 'ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ' ಇತಿ ಮಹಾಪ್ರಲಯೇ ತಸ್ಯೈವಾವಸ್ಥಾನಶ್ರುತೇಃ । 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ' ಇತಿ ಬ್ರಹ್ಮಶಿವಾದೀನಾಂ ದೇವ್ಯಧೀನಪದಪ್ರಾಪ್ತಿಮುಕ್ತ್ವಾ ತಸ್ಯಾ ಅಪಿ ಭಗವದಧೀನತ್ವಂ, 'ಮಮ ಯೋನಿರಪ್ಸ್ವಂತಃ ಸಮುದ್ರೇ । ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ । ಪರೋದಿವಾ ಪರ ಏನಾ ಪೃಥಿವ್ಯಾ' ಇತ್ಯಾಹ । 'ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಸುಮೇ ಪಿತರ ಮಸ್ಯ ಮೂರ್ಧನ್' ಇತಿ ಬ್ರಹ್ಮರುದ್ರಯೋರ್ದೇವ್ಯಾಃ ಸಕಾಶಾತ್ ಸೃಷ್ಟಿಸಂಹಾರೌ ಚೋಕ್ತೌ । 'ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ। ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್' ಇತ್ಯಾದಿನಾ ವಿಷ್ಣೋಃ ಪ್ರಸಾದಾದೇವ ಶಿವಾದೀನಾಂ ಪದಪ್ರಾಪ್ತಿ ಕಥನಾಚ್ಚ ।''

ವಿಷ್ಣುವಿಗೆ ಪರಾಧೀನತೆ ಎಲ್ಲಿಯೂ ಹೇಳಿಲ್ಲ. ರಾಮ ಕೃಷ್ಣಾದ್ಯವತಾರಗಳಲ್ಲಿ ಉತ್ಪತ್ತಿಯನ್ನು ಹೇಳಿದ್ದರೂ ಅದು ಸ್ವೇಚ್ಛೆಯಿಂದ ಭಕ್ತರ ಕಣ್ಣಿಗೆ ಗೋಚರಿಸುವುದೆಂಬ ಅರ್ಥವಿವಕ್ಷೆಯಿಂದಲೆ ಹೇಳಿದ್ದು. ಮೂಲರೂಪದಲ್ಲಿ ಉತ್ಪತ್ತಿಯನ್ನು ಹೇಳುವುದು ಶಕ್ಯವಿಲ್ಲ. ಏಕೆಂದರೆ 'ನಾರಾಯಣನೊಬ್ಬನೆ ಇದ್ದನು, ಬ್ರಹ್ಮನಿರಲಿಲ್ಲ ರುದ್ರನೂ ಇರಲಿಲ್ಲ' ಎಂದು ಶ್ರುತಿಯು ಮಹಾಪ್ರಳಯದಲ್ಲಿ ನಾರಾಯಣನೊಬ್ಬನಿಗೇ ಅಸ್ತಿತ್ವವನ್ನು ಹೇಳುತ್ತಿದೆ.

'ನಾನು ಯಾರು ಯಾರನ್ನು ರುದ್ರಪದವಿಗೇರಿಸಬಯಸುವೆನೋ ಅವನನ್ನು ಆ ಪದವಿಗೇರಿಸುವೆನು. ಯಾರನ್ನು ಬ್ರಹ್ಮಪದವಿಗೇರಿಸಬಯಸುವೆನೋ ಅವನನ್ನು ಆ ಪದವಿಗೆ ಏರಿಸುವೆನು. ಅವನನ್ನು ಹಾಗೆಯೇ ಮಾಡುವೆನು' ಎಂದು ಮುಂತಾಗಿ ಬ್ರಹ್ಮ ಶಿವಾದಿಗಳಿಗೆ

ಅವರವರ ಪದವಿ ಲಭಿಸುವುದು ಮಹಾಲಕ್ಷ್ಮಿಯ ಅಧೀನವೆಂದು ಹೇಳಿ 'ನನಗೂ ಕಾರಣನಾದವನೊಬ್ಬನಿದ್ದಾನೆ. ಸಮುದ್ರದ ಮಧ್ಯದಲ್ಲಿ. ಅವನ ಅನುಗ್ರಹದಿಂದ ನಾನು ಎಲ್ಲ ಲೋಕಗಳಿಗೆ ಅಧಿಷ್ಠಾತ್ರಿಯಾಗಿದ್ದೇನೆ. ಭೂಮ್ಯಂತರಿಕ್ಷಗಳನ್ನೆಲ್ಲ ವ್ಯಾಪಿಸಿದ್ದೇನೆ. ಆ ನಾರಾಯಣ ನನ್ನ ಶ್ರೀರೂಪಕ್ಕಿಂತಲೂ ಶ್ರೇಷ್ಠ. ನನ್ನ ಭೂರೂಪಕ್ಕಿಂತಲೂ ಶ್ರೇಷ್ಠ' ಎಂದು ಆ ಮಹಾಲಕ್ಷ್ಮಿಗೂ ಭಗವದಧೀನತ್ವವನ್ನು ಹೇಳುತ್ತಿವೆ.

'ಬ್ರಹ್ಮದ್ವೇಷಿಯೂ ಲಯಕಾರಕನೂ ಆದ ರುದ್ರನ ಸಂಹಾರಕ್ಕಾಗಿ ನಾನು ಧನುಸ್ಸನ್ನು ಹೆದೆ ಏರಿಸುವೆನು. ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನನ್ನು ಮೊತ್ತಮೊದಲಿಗೆ ಪ್ರಸವಿಸುವೆನು' ಎಂದು ಬ್ರಹ್ಮರುದ್ರರಿಗೆ ಮಹಾಲಕ್ಷ್ಮಿಯಿಂದ ಸೃಷ್ಟಿಲಯಗಳಾಗುವುದು ಎಂದಿದೆ. 'ಭಕ್ತಾಭೀಷ್ಟಪ್ರದನೂ ಸತ್ಯಕಾಮನೂ ಕ್ರೀಡಾದಿಗುಣ ವಿಶಿಷ್ಟನೂ ಆದ ಈ ವಿಷ್ಣುವನ್ನು ಹವಿಸ್ಸುಗಳಿಂದ ಆರಾಧಿ-ಸಿದುದರಿಂದಲೇ ಅಹಂಕಾರಾಭಿಮಾನಿ ರುದ್ರನು ರುದ್ರಪದವಿಯನ್ನು ಪಡೆದನು. ಅಶ್ವಿನೀ ದೇವತೆಗಳೆ, ನೀವೂ ಕೂಡ ಸಕಲ ಭೋಗಯುಕ್ತವಾದ ನಿಮ್ಮ ಸ್ಥಾನವನ್ನು ವಿಷ್ಣುವಿನ ಆರಾಧನೆಯಿಂದಲೇ ಪಡೆದಿರುವಿರಿ' ಎಂದು ಮುಂತಾಗಿ ರುದ್ರಾದಿಗಳಿಗೆ ಅವರವರ ಪದವಿ ಸಿಕ್ಕಿದುದು ವಿಷ್ಣುವಿನ ಅನುಗ್ರಹದಿಂದಲೇ ಎನ್ನಲಾಗಿದೆ.

> 'ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ । ತದ್ ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಃ ತಾಭಿರೇನಂ ರುದ್ರೋಽನ್ವಾಯತ್ತ:' ಇತ್ಯಾದಿನಾ ಶಿವಾದಿಸರ್ವದೇವೋಪಾಸ್ಯಸ್ಯ ವಾಯೋಃ 'ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ' ಇತಿ ಮಧ್ಯಮಪ್ರಾಣ ಶಬ್ದೋಕ್ತಸ್ಯ 'ಪ್ರಾಣಃ ಸ್ಥೂಣಾ' ಇತಿ ಪ್ರಾಣಶಬ್ದಿತೋ ನಾರಾಯಣ ಏವಾಶ್ರಯ ಉಕ್ತ:।
>
> ತಸ್ಮಾತ್ ಸರ್ವೋತ್ತಮೋ ಭಗವಾನ್ ನಾರಾಯಣಃ ಪ್ರಾಣ ಶಬ್ದೋದಿತಃ ಆದಿತ್ಯಮಂಡಲಸ್ಥಸ್ತಪತೀತ್ಯಾದಿ ಸಿದ್ಧಂ ॥

'ಗೋವತ್ಸರೂಪದ ವಾಯುವನ್ನು ರುದ್ರ, ಪರ್ಜನ್ಯ, ಆದಿತ್ಯ ಮುಂತಾದ ಏಳುಮಂದಿ ದೇವತೆಗಳು ಉಪಾಸನೆ ಮಾಡುತ್ತಾರೆ. ಕಣ್ಣಿನಲ್ಲಿ ತೋರುವ ಕೆಂಬಣ್ಣದ ರೇಖೆಗಳಿದ್ದು ರುದ್ರನೂ ಉಪಾಸನೆ ಮಾಡುತ್ತಾನೆ' ಎಂದು ಮುಂತಾಗಿ ಹೇಳಿದ ಶಿವಾದಿ ಸರ್ವದೇವೋಪಾಸ್ಯನಾದ ವಾಯುವನ್ನು 'ಯಾರು ಮಧ್ಯಮ ಪ್ರಾಣನೋ ಅವನೆ ಶಿಶು' ಎಂಬ ವಾಕ್ಯದಿಂದ ಮಧ್ಯಮ ಪ್ರಾಣನೆಂದು ಕರೆದು ಅವನಿಗೆ 'ಪ್ರಾಣನು ಆಶ್ರಯ' ಎಂದು ಪ್ರಾಣಶಬ್ದವಾಚ್ಯನಾದ ನಾರಾಯಣನೆ ಆಶ್ರಯ ಎನ್ನಲಾಗಿದೆ.

ಆದ್ದರಿಂದ ಪ್ರಾಣನಾಮಕನಾದ ಸರ್ವೋತ್ತಮ ಭಗವಾನ್ ನಾರಾಯಣನೇ ಸೂರ್ಯಮಂಡಲದಲ್ಲಿದ್ದು ಜ್ವಲಿಸುತ್ತಾನೆ ಎಂದು ಮುಂತಾಗಿ ಹೇಳಿದುದು ಸರಿ ಎಂದೇ ಸಿದ್ಧವಾಗುವುದು.

ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ।
ಆಜಾನಜಾಃ ಕರ್ಮದೇವಾಸ್ತಾತ್ತ್ವಿಕಾ ದಕ್ಷ ಏವ ಚ।
ಶಕ್ರಶ್ಶ್ರೋಮಾ ಚ ರುದ್ರಶ್ಚ ಭಾರತೀ ವಾಯುರೇವ ಚ।
ಮುಕ್ತಾ ಉಕ್ತಾಃ ಶತಗುಣಾ ಬಲಜ್ಞಾನಸುಖಾದಿಭಿಃ।
ವಿಷ್ಣುಭಕ್ತ್ಯಾದಿಭಿಶ್ಚೈವ ಗುಣೈಃ ಸರ್ವೈಃ ಕ್ರಮಾಧಿಕಾಃ।
ತಸ್ಮಾದ್ ರಮಾ, ತತೋ ವಿಷ್ಣುರನಂತಗುಣತೋಽಧಿಕಃ।
ನಿತ್ಯಮುಕ್ತಃ ಸ್ವತಂತ್ರಶ್ಚ ನ ಚಾನ್ಯಸ್ತಾದೃಶಃ ಕ್ವಚಿತ್ ।
ಕುತ ಏವಾಧಿಕೋಽನ್ಯಃ ಸ್ಯಾದ್ ಯನ್ಮುಕ್ತಾ ಅಪಿ ತದ್ವಶಾಃ।
ರಮಾಪಿ ತದ್ವಶಾ ನಿತ್ಯಂ, ಸ ನಾನ್ಯಸ್ಯ ವಶೇ ಪ್ರಭುಃ।
ನ ಭೇದಃ ಶೇಷಶಿವಯೋಃ, ಸುಪರ್ಣಃ ಶೇಷಸಮ್ಮಿತಃ।
ಕಾಮಃ ಶಕ್ರಸಮೋ ನಿತ್ಯಂ, ಪ್ರತಿಬಿಂಬಾಶ್ಚ ತೇ ಕ್ರಮಾತ್ ॥
ಇತಿ ಚ ಮಹಾಸಂಹಿತಾಯಾಂ ॥

ಚಕ್ರವರ್ತಿಗಳು, ಮನುಷ್ಯ ಗಂಧರ್ವರು, ದೇವಗಂಧರ್ವರು, ಚಿರಪಿತೃದೇವತೆಗಳು, ಆಜಾನಜ ದೇವತೆಗಳು. ಕರ್ಮದೇವತೆಗಳು, ತತ್ತ್ವಾಭಿಮಾನಿ ದೇವತೆಗಳು, ದಕ್ಷಪ್ರಜಾಪತಿ, ಇಂದ್ರ, ಪಾರ್ವತಿ, ರುದ್ರ, ಭಾರತೀ ಮತ್ತು ವಾಯು ಈ ಕ್ರಮದಿಂದ ಮುಕ್ತರೆಲ್ಲರೂ ಬಲಜ್ಞಾನ ಸುಖಾದಿಗುಣಗಳಲ್ಲಿಯೂ ವಿಷ್ಣುಭಕ್ತ್ಯಾದಿಗುಣಗಳಲ್ಲಿಯೂ ನೂರು ಪಾಲು ಉತ್ತಮರೆನಿಸಿದ್ದಾರೆ. ವಾಯುವಿಗಿಂತ ರಮಾದೇವಿ ಕೋಟಿಪಾಲು ಉತ್ತಮಳು. ಆಕೆಗಿಂತ ವಿಷ್ಣು ಅನಂತಪಾಲು ಶ್ರೇಷ್ಠ, ನಿತ್ಯಮುಕ್ತ, ಸ್ವತಂತ್ರ. ಅವನಿಗೆ ಸಮನಾದವನಿನ್ನೊಬ್ಬನಿಲ್ಲ. ಹೀಗಿರಲು ಅವನಗಿಂತ ಉತ್ತಮನಿನ್ನೊಬ್ಬನೆಲ್ಲಿ ? ಏಕೆಂದರೆ ಮುಕ್ತರೂ ಅವನಿಗೆ ಅಧೀನರು. ರಮೆಯೂ ಅವನಿಗೆ ಅಧೀನಳು. ಅವನು ಯಾರಿಗೂ ಅಧೀನನಲ್ಲ. ಶೇಷ ರುದ್ರರೊಳಗೆ ತಾರತಮ್ಯವಿಲ್ಲ. ಗರುಡನೂ ಶೇಷನಿಗೆ ಸಮಾನ, ಕಾಮನೂ ಇಂದ್ರನಿಗೆ ಸಮಾನ. ಇವರೆಲ್ಲರೂ ಹಿಂದೆ ಹೇಳಿದ ಕ್ರಮದಿಂದ ಹಿಂದಿನವರು ಮುಂದಿನವರಿಗೆ ನಿತ್ಯ ಪ್ರತಿಬಿಂಬರಾಗಿರುವರು' ಎಂದು ಮಹಾಸಂಹಿತೆಯಲ್ಲಿ ಹೇಳಿದೆ.

ತಂ ಶತಂ ವರ್ಷಾಣ್ಯಭ್ಯಾರ್ಚತ್ । ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ। ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್, ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತ ಏತಮೇವ ಸಂತಮ್ ।

ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ। ಸ ಯದಿದಂ ಸರ್ವಂ ಮಧ್ಯತೋ ವಧೇ ಯದಿದಂ ಕಿಂಚ, ತಸ್ಮಾನ್ಮಧ್ಯಮಾಸ್ತಸ್ಮಾನ್ಮಧ್ಯಮಾ ಇತ್ಯಾಚಕ್ಷತ ಏತಮೇವ ಸಂತಂ।

ಆ ಭಗವಂತನು ಬ್ರಹ್ಮಾದಿಜೀವಶರೀರದಲ್ಲಿ ಪ್ರವೇಶಿಸಿ ನೂರು ವರ್ಷಗಳ ಕಾಲ ಇದ್ದನು. ಆದ್ದರಿಂದ ಪುರುಷನ ಆಯುಷ್ಯ ನೂರು ವರ್ಷವಿರುತ್ತದೆ. ಅವನು ನೂರು ವರ್ಷಗಳ ಕಾಲ ಬ್ರಹ್ಮಾದಿಜೀವಶರೀರವನ್ನು ಪ್ರವೇಶಿಸಿ ಇದ್ದುದರಿಂದ ಅವನ ರೂಪಗಳು 'ಶತರ್ಚಿನಃ' ಎನಿಸಿದುವು. ಆದ್ದರಿಂದ ಅವನ ರೂಪಗಳನ್ನು ಮುಖ್ಯವಾಗಿ 'ಶತರ್ಚಿನಃ' ಎಂದು ಕರೆಯುತ್ತಾರೆ.

ಅವನು ಎಲ್ಲವನ್ನೂ ತನ್ನ ಶರೀರದ ಮಧ್ಯದಲ್ಲಿ ಧರಿಸಿದ್ದಾನೆ. ಎಲ್ಲದರಲ್ಲಿಯೂ ಮಧ್ಯದಲ್ಲಿ ತಾನಿದ್ದು ಎಲ್ಲವನ್ನೂ ಧರಿಸಿದ್ದಾನೆ. ಹೀಗೆ ಎಲ್ಲವನ್ನೂ ಮಧ್ಯದಲ್ಲಿ ಧರಿಸಿದ್ದರಿಂದ ಅವನ ರೂಪಗಳು 'ಮಧ್ಯಮಾಃ' ಎನಿಸಿದುವು. ಆದ್ದರಿಂದ ಅವನ ರೂಪಗಳನ್ನು ಮುಖ್ಯವಾಗಿ 'ಮಧ್ಯಮಾಃ' ಎನಿಸಿದುವು. ಆದ್ದರಿಂದ ಅವನ ರೂಪಗಳನ್ನು ಮುಖ್ಯವಾಗಿ 'ಮಧ್ಯಮಾಃ' ಎಂದು ಕರೆಯುತ್ತಾರೆ.

'ಏಷ ಇಮಂ ಲೋಕಮಭ್ಯಾರ್ಚತ್' ಎಂದು ಹೇಳಿದ ಭಗವಂತನ ಸರ್ವಾಂತರ್ಯಾಮಿತ್ವ ಅವನು ಗುಣಪೂರ್ಣನಾಗದೆ ಯುಕ್ತವಾಗಲಾರದು. ಗುಣಪೂರ್ಣನೆಂದು ಹೇಗೆ ತಿಳಿಯಬೇಕೆಂದರೆ ಅವನು ಸರ್ವಶಬ್ದವಾಚ್ಯನಾದ್ದರಿಂದ ಎನ್ನಬೇಕು. ಆದಕ್ಕಾಗಿ ದೃಷ್ಟಾಂತರೂಪದಿಂದ ಶತರ್ಚಿ, ಮಧ್ಯಮ, ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ ಮುಂತಾದ ಋಷಿನಾಮಗಳೂ ಸೂಕ್ತ ಋಕ್ ಮುಂತಾದ ಶಬ್ದಗಳೂ ಮುಖ್ಯವಾಗಿ ಭಗವಂತನ ನಾಮಗಳು ಎಂದು ಉಪನಿಷತ್ತು ವರ್ಣಿಸುತ್ತಿದೆ.

> ಸ ಪುರುಷೇಷು ಶತವರ್ಷಂ ಗತ ಇತಿ ಶತರ್ಚಿನಾಮಾ । ಬಹುರೂಪತ್ವಾತ್ ಬಹುವಚನಂ। ಏತಮೇವ ತಥಾ ಸಂತಂ ಮುಖ್ಯತ ಆಚಕ್ಷತೇ। ಋಷೀಂಸ್ತೂಪಚಾರತಃ॥ ಆತ್ಮನ ಉದರೇ ಧೃತವಾನ್ । ಮಧ್ಯೇ ಸ್ಥಿತ್ವಾ ಧೃತವಾಂಶ್ಚ॥

ಭಗವಂತನು ಪುರುಷರಲ್ಲಿ ನೂರುವರ್ಷ ಪರ್ಯಂತ ಇದುದರಿಂದ ಶತರ್ಚಿ ಎನಿಸಿದನು. ಆ ಅಂತರ್ಯಾಮಿ ಬಹುರೂಪನಾದ್ದರಿಂದ 'ಶತರ್ಚಿನಃ' ಎಂದು ಬಹುವಚನ ಪ್ರಯೋಗ ಕೂಡುತ್ತದೆ. ಸ್ವತಂತ್ರವಾಗಿ ಪೂರ್ಣವಾಗಿ ಶಬ್ದಪ್ರವೃತ್ತಿನಿಮಿತ್ತವುಳ್ಳ ಈ ಭಗವಂತನನ್ನೇ ವಚನವೃತ್ತಿಯಲ್ಲಿಯೂ ಮುಖ್ಯವಾಗಿ ಕರೆಯುತ್ತಾರೆ. ಋಷಿಗಳನ್ನು ವಚನವೃತ್ತಿಯಲ್ಲಿಯೇ ಅಮುಖ್ಯವಾಗಿ ಋಷಿನಾಮಗಳಿಂದ ಕರೆಯುತ್ತಾರೆ. 'ಮಧ್ಯತೋ ದಧೇ' ಎಂದರೆ ತನ್ನ ಉದರದಲ್ಲಿ ಧರಿಸಿದ್ದಾನೆ ಮತ್ತು ಮಧ್ಯದಲ್ಲಿ ತಾನಿದ್ದು ಧರಿಸಿದ್ದಾನೆ.

ಅನುವ್ಯಾಖ್ಯಾನದಲ್ಲಿ 'ಜ್ಯೋತಿಃ' ಮೊದಲಾದ ಶಬ್ದಗಳ ನಿಷ್ಪತ್ತಿ

**तत्वप्रदीपः – निखिलपदानां तद्वाचकत्वपदवी तु गुरुभिरेवोपसन्दर्शयितुं सुशकेति नास्माभिरत्र प्रयत्यते । दर्शिता च सा भङ्गी भगवतैवानुव्याख्याने-**

**''जातमोतं हरौ यस्माज्ज्योतिः षः प्राणरूपतः ।**
**आयजेतश्चायजेतो वसन्तिश्च वसंस्ततः'' इत्यादिका ।।**

ಪ್ರತಿಯೊಂದು ಪದಗಳು ವಿಷ್ಣುವಿನಲ್ಲಿ ಹೇಗೆ ಸಮನ್ವಯಗೊಳ್ಳುತ್ತವೆ ಎಂಬುದರ ನಿಷ್ಪತ್ತಿಯನ್ನು ತೋರಿಸಲು ಗುರುಗಳೇ (ಶ್ರೀಮದಾಚಾರ್ಯರೇ) ಸಮರ್ಥರು. ಆದ್ದರಿಂದ ನಾವಿಲ್ಲಿ ಅದರ ಸಮನ್ವಯಕ್ಕಾಗಿ ಪ್ರಯತ್ನ ಪಟ್ಟಿಲ್ಲ. ಆ ಸಮನ್ವಯದ ಭಂಗಿಯನ್ನು ಭಗವತ್ಪಾದರೇ ಅನುವ್ಯಾಖ್ಯಾನದಲ್ಲಿ ಹೀಗೆ ತೋರಿಸಿದ್ದಾರೆ -

'ಜಾತವೋತಂ ಹರೌ ಯಸ್ಮಾಜ್ಜ್ಯೋತಿಃ ಷಃ ಪ್ರಾಣರೂಪತಃ।
ಆಯಜೇತಶ್ಚಾಯಜೇತೋ ವಸಂತಿಶ್ಚ ವಸಂಸ್ತತಃ॥'

ಯಾವ ಜಗತ್ತು ಶ್ರೀಹರಿಯಲ್ಲಿ ಆಶ್ರಯವನ್ನು ಹೊಂದಿದೆಯೋ, ಆದ್ದರಿಂದ ಶ್ರೀಹರಿಯು ಜ್ಯೋತಿಯೆನಿಸಿದ್ದಾನೆ. 'ಷ' ಎಂದರೆ ಜಗತ್ತಿಗೆ ಚೇಷ್ಟಕನಾಗಿದ್ದಾನೆ ಮತ್ತು ಸಕಲ ಯಜ್ಞಗಳಿಂದ ಪ್ರಾಪ್ಯನಾಗಿದ್ದಾನೆ. ಅಥವಾ ಯಾಜ್ಞಿಕನಿಂದ ಪ್ರಾಪ್ಯನಾಗಿರುವುದರಿಂದ 'ಆಯಜೇತ' ಎನಿಸುತ್ತಾನೆ. ಎಲ್ಲೆಡೆ ವ್ಯಾಪ್ತನಾಗಿರುವುದರಿಂದ 'ವಸಂತಿ' ಎನಿಸುತ್ತಾನೆ ಇತ್ಯಾದಿಯಾಗಿ ಹೇಳಿರುತ್ತಾರೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಎಲ್ಲವೂ ಬ್ರಹ್ಮಪರವಾದರೆ ಕರ್ಮಾಚರಣೆ ಎಂತು ?

**अत्र कर्मक्रमादिलोपप्रसङ्गेन कर्मतदङ्गेष्वेव प्रसिद्धानां ज्योतिष्टोमादिसर्वशब्दानां भगवति समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति – वसन्त इति ॥**

ಈ ಜ್ಯೋತಿರುಪಕ್ರಮಾಧಿಕರಣದಲ್ಲಿ ಕರ್ಮಪ್ರತಿಪಾದಕವಾದ ಅನೇಕ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲಾಗುತ್ತಿದೆ.

'ಜ್ಯೋತಿಷ್ಟೋಮ' ಮೊದಲಾದ ವೈದಿಕಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಅಂಗಗಳಲ್ಲಿಯೇ ಪ್ರಸಿದ್ಧವಾಗಿವೆ. ಹೀಗೆ ಒಪ್ಪದಿದ್ದರೆ ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಕ್ರಮ ಇವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲದಂತಾಗಿ ಕರ್ಮ, ಕ್ರಮಗಳ ಲೋಪವು ಆಗಬೇಕಾದೀತು. ಆದ್ದರಿಂದ ಕರ್ಮ ಹಾಗೂ ಕ್ರಮಗಳನ್ನೇ ಜ್ಯೋತಿಷ್ಟೋಮಾದಿ ಶಬ್ದಗಳು ಪ್ರತಿಪಾದನೆ ಮಾಡುತ್ತವೆ. ಇಂತಹ ಜ್ಯೋತಿಷ್ಟೋಮಾದಿ ಸಕಲಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಪಾದಸಂಗತಿಗಳನ್ನು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣಸಂಗತಿ ವಿಷಯಾದಿಗಳನ್ನು ಭಾಷ್ಯಕಾರರು 'ವಸಂತೇ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ಕರ್ಮಕಾಂಡವು ಕರ್ಮಪರವಾದರೆ ಸರ್ವಶಬ್ದವಾಚ್ಯತ್ವ ಎಂತು ?

**तत्वप्रकाशिका – 'तत्तु समन्वयात्' इति सर्वशब्दानां परमात्मवाचकत्वमुक्तम्। सर्वमध्यपतिता ज्योतिरादिशब्दाः श्रुतिषु पठ्यन्ते । तेषां चान्यपरत्वे न विष्णोः सर्वशब्दवाच्यता सिध्येत्, इत्यवश्यं निर्णेयता ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ' ಎಂದು ಪ್ರತಿಜ್ಞೆ ಮಾಡಲಾಗಿದೆ. ಆ ಶಬ್ದಗಳ ಮಧ್ಯದಲ್ಲಿ 'ಜ್ಯೋತಿಃ' ಮೊದಲಾದ ಕರ್ಮಪ್ರತಿಪಾದಕವಾದ ಶಬ್ದಗಳು ಶ್ರುತಿಯಲ್ಲಿ ಪಠಿತವಾಗಿವೆ. ಇಂತಹ 'ಜ್ಯೋತಿಃ' ಮೊದಲಾದ ಶಬ್ದಗಳು ವಿಷ್ಣುವನ್ನು ಬಿಟ್ಟು ಜ್ಯೋತಿಷ್ಟೋಮಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುವುದಾದಲ್ಲಿ, ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವು ಸಿದ್ಧವಾಗುವುದಿಲ್ಲ. ಇಂತಹ 'ಜ್ಯೋತಿಃ' ಮೊದಲಾದ ಶಬ್ದಗಳ ಸಮನ್ವಯವನ್ನು ಅವಶ್ಯವಾಗಿ ಮಾಡಲೇಬೇಕು.

### ಅಧಿಕರಣದ ವಿಷಯಾದಿಗಳು

**तत्वप्रकाशिका – तज्योतिरादिशब्दवाच्यं विषयः । किं विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् । तत्र ज्योतिरादिशब्दवाच्यो न विष्णुरिति पूर्वः पक्षः ॥**

'ಜ್ಯೋತಿಃ' ಮೊದಲಾದ ಶಬ್ದವಾಚ್ಯತ್ವವೇ ಈ ಅಧಿಕರಣದ ವಿಷಯವಾಗಿದೆ. ಈ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಯೋ, ಅಥವಾ ಬೇರೆ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಯೋ ? ಎಂಬುದೇ ಸಂದೇಹ. ಸಮನ್ವಯ ಸೂತ್ರ ಹಾಗೂ ಅನ್ಯತ್ರೈವಪ್ರಸಿದ್ಧಿ ಇವೆರಡೂ ಸಂದೇಹಬೀಜಗಳು. 'ಜ್ಯೋತಿಃ' ಮೊದಲಾದ ಶಬ್ದಗಳಿಂದ ವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ ಎಂಬುದು ಪೂರ್ವಪಕ್ಷ.

### ಕರ್ಮಾಚರಣೆಗಳೇ ನಿಂತು ಹೋಗುತ್ತದೆ

**तत्वप्रकाशिका – तस्य ज्योतिष्टोमादिकर्मतदङ्गाभिधायकत्वेन प्रसिद्धत्वात्। तत्प्रसिद्धिं चापहाय परमात्मवाचित्वाङ्गीकारे काल-कर्म-क्रमधिकारि-नियोज्य-यजमान-फलऋत्विगाद्यभिधायकाभावेन तदभावाख्य-विरोधापातात् ।**

ಏಕೆಂದರೆ 'ಜ್ಯೋತಿಃ' ಮೊದಲಾದ ಶಬ್ದಗಳು 'ಜ್ಯೋತಿಷ್ಟೋಮ' ಮೊದಲಾದ ಕರ್ಮಗಳನ್ನು ಅವುಗಳ ಅಂಗಗಳನ್ನು ಪ್ರತಿಪಾದನೆ ಮಾಡುವುದರಲ್ಲಿಯೇ ಪ್ರಸಿದ್ಧವಾಗಿವೆ.

ಇಂತಹ ಪ್ರಸಿದ್ಧಿಯನ್ನು ಬಿಟ್ಟು, ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಒಪ್ಪಿದರೆ ವಸಂತಾದಿಕಾಲ, ಯಜ್ಞಾದಿಕರ್ಮ, ಅವುಗಳ ಕ್ರಮ, ಅಧಿಕಾರಿ, ನಿಯೋಜ್ಯ, ಯಜಮಾನ, ಸ್ವರ್ಗಾದಿಫಲ, ಹೋತೃ ಋತ್ವಿಕ್ ಇವೇ ಮೊದಲಾದ ಪದಾರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲವೆಂದಾಗುವುದರಿಂದ ಈ ಎಲ್ಲಾ ಪದಾರ್ಥಗಳು ಅಸಿದ್ಧವಾಗುತ್ತವೆ. ಆದ್ದರಿಂದ ಪದಾರ್ಥಗಳ ಅಭಾವರೂಪವಾದ ವಿರೋಧವು ಬರುತ್ತದೆ.

#### ಕರ್ಮಾಚರಣೆಗೆ ಬೇರೆ ಪ್ರಮಾಣವಿಲ್ಲ

**ತತ್ವಪ್ರकाशिका – नहि तत् प्रमाणान्तरेण सिध्यति । तथा च विहितानुष्ठानलोपप्रसङ्गः ।**

ಇಂತಹ ಪದಾರ್ಥಗಳು ವೇದದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳನ್ನು ಬಿಟ್ಟು ಬೇರೆ ಪ್ರಮಾಣಗಳಿಂದ ಸರ್ವಥಾ ಸಿದ್ಧವಾಗುವುದಿಲ್ಲ. ಆದ್ದರಿಂದ ವಿಶಿಷ್ಟವಾದ ಕರ್ಮಾನುಷ್ಠಾನಗಳೆಲ್ಲವೂ ಸಿದ್ಧವಾಗದಿರಬೇಕಾದೀತು.

#### ಹಾಗೆಂದು ಕರ್ಮಪರತ್ವ ಒಪ್ಪಿದರೆ ಗುಣಪೂರ್ಣತ್ವವು ಅಸಿದ್ಧವಾಗುತ್ತದೆ

**तत्वप्रकाशिका – किञ्च ज्योतिरादिसर्वशब्दवाच्यत्वं परमात्मनो योगेनैव वाच्यम्, रूढेरभावात् । ततो गुणपूर्त्यसिद्धेश्च ।**

ಮತ್ತು 'ಜ್ಯೋತಿಃ' ಮೊದಲಾದ ಸಕಲವಿಧವಾದ ಶಬ್ದಗಳಿಂದ ಪರಮಾತ್ಮನು ಯೋಗವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದೇ ಹೇಳಬೇಕು. ಏಕೆಂದರೆ ಲೋಕರೂಢಿಯಂತೂ ಸರ್ವಥಾ ಪರಮಾತ್ಮನಲ್ಲಿ ಇರುವುದಿಲ್ಲ. ಹಾಗೇನಾದರೂ ರೂಢಿಯನ್ನು ಒಪ್ಪಿದರೆ ಆಯಾ ಶಬ್ದಗಳಿಂದ ಗುಣಗಳ ಸಮನ್ವಯವು ಸಿದ್ಧವಾಗದೆ ಗುಣಪೂರ್ಣತ್ವ ಎಂಬ ಧರ್ಮವು ಪರಮಾತ್ಮನಲ್ಲಿ ಸಿದ್ಧವಾಗದಿರಬೇಕಾದೀತು.

#### ರೂಢಿಯಂತೇ ಯೋಗವೂ ಕೂಡ ಪರಮಾತ್ಮನಲ್ಲಿಲ್ಲ

**तत्वप्रकाशिका – नच योगमात्रेण रूढार्थापहारो युज्यते । अभ्युपेत्यैव चेदमुदितम् । न योगोऽपि सम्भवति ।**

ಮತ್ತು ಪರಮಾತ್ಮನಲ್ಲಿ ಶಬ್ದಗಳ ಯೋಗವೃತ್ತಿಯಿದೆ ಎಂಬ ಮಾತ್ರದಿಂದ ಲೋಕಪ್ರಸಿದ್ಧವಾದ ರೂಢಾರ್ಥವನ್ನು ಬಿಡಲು ಸಾಧ್ಯವಿಲ್ಲ. ಏಕೆಂದರೆ ಯೋಗಕ್ಕಿಂತಲೂ ರೂಢಿಯೇ ಪ್ರಬಲವಾಗಿರುತ್ತದೆ. ಅಂಗೀಕಾರವಾದ ಮಾಡಿ ಹೀಗೆ ಹೇಳಿದ್ದು, ವಿಚಾರ ಮಾಡಿದರೆ ಯೋಗವೂ ಕೂಡ ಪರಮಾತ್ಮನಲ್ಲಿ ಕೂಡುವುದಿಲ್ಲ.

ಬ್ರಹ್ಮಪರವಾದಲ್ಲಿ ಶಬ್ದಗಳ ನಿಷ್ಪತ್ತಿಯೂ ನಿಂತುಹೋಗುತ್ತವೆ

**तत्वप्रकाशिका – 'ज्योतिषां स्तोमः' इत्यादिरूपा हि ज्योतिष्टोमादिशब्दव्युत्पत्तिः। कथमसौ स्तोमादिशब्दानामन्यपरत्वानभ्युपगमे सम्भवेत् ? अन्यथा भगवन्नामावृत्तिमात्रत्वप्राप्तेः ।**

ಏಕೆಂದರೆ 'ಜ್ಯೋತಿಷಾಂ ಸ್ತೋಮಃ' ಎಂಬ ವ್ಯುತ್ಪತ್ತಿಯಿಂದ 'ಜ್ಯೋತಿಷ್ಟೋಮ' ಶಬ್ದವು ವ್ಯುತ್ಪನ್ನವಾಗಿದೆ. ಇಲ್ಲಿರುವ 'ಸ್ತೋಮ' ಶಬ್ದವು ಅನ್ಯಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಒಪ್ಪದಿದ್ದರೆ ಶಬ್ದದ ವ್ಯುತ್ಪತ್ತಿಯೇ ಅಸಾಧ್ಯವಾಗುತ್ತದೆ. ಇಲ್ಲದಿದ್ದರೆ 'ಜ್ಯೋತಿ' ಎಂಬ ಪದವು ಹೇಗೆ ವಿಷ್ಣುನಾಮವೋ, ಅದರಂತೆ 'ಸ್ತೋಮ' ಎಂಬ ಪದವೂ ಕೂಡ ವಿಷ್ಣುನಾಮ ಎಂದಾಗುತ್ತದೆ. ಹೇಳಿದ ಅರ್ಥವನ್ನೇ ಪುನಃ ಮುಂದಿನ ಪದವು ಹೇಳುವುದರಿಂದ ವ್ಯುತ್ಪತ್ತಿಯನ್ನು ಮಾಡಲು ಸಾಧ್ಯವಾಗುವುದಿಲ್ಲ.

ನಿಷ್ಪತ್ತಿಗಾಗಿ ಅನ್ಯಪರತ್ವವನ್ನು ಒಪ್ಪಿದರೆ ಪುನಃ ಅದೇ ತೊಂದರೆ

**तत्वप्रकाशिका – स्तोमादिशब्दानामन्यपरत्वाभ्युपगमे किं ज्योतिष्टोमादिशब्दैरेव विशेषतोऽपराद्धम् ।**

ಆದ್ದರಿಂದ 'ಸ್ತೋಮ' ಎಂಬ ಪದಕ್ಕೆ ಅನ್ಯಪರತ್ವವನ್ನು ಅವಶ್ಯವಾಗಿ ಒಪ್ಪಲೇ ಬೇಕು. ಹಾಗೇ ಒಪ್ಪಿದಾಗ 'ಜ್ಯೋತಿಷ್ಟೋಮ' ಎಂಬ ಶಬ್ದವೂ ಕೂಡ ಬೇರೆ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆ. ಈ ಜ್ಯೋತಿಷ್ಟೋಮ ಪದವು ಯಾವ ಅಪರಾಧವನ್ನು ಮಾಡಿದೆ. ಸ್ತೋಮಪದವು ಅನ್ಯಪದಾರ್ಥ ಪ್ರತಿಪಾದಕವಾದಾಗ 'ಜ್ಯೋತಿಷ್ಟೋಮ' ಎಂಬ ಶಬ್ದವೂ ಕೂಡ ಅನ್ಯಪದಾರ್ಥ ಪ್ರತಿಪಾದಕವೇ ಆಗಬೇಕು.

ಲಕ್ಷಣಾವೃತ್ತಿಯನ್ನು ಮಾತ್ರ ಒಪ್ಪಬೇಕಾಗುತ್ತದೆ

**तत्वप्रकाशिका – नच वाच्यं 'परमात्मसम्बन्धेनान्यत्रापि शब्दवृत्तिरभ्युपगता' इति । यथा सति लोके लक्षणेतरवृत्त्यभावप्रसङ्गात् ।**

ಸಕಲಶಬ್ದಗಳೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಪರಮಾತ್ಮನ ಸಂಬಂಧದಿಂದ ಇತರ ಪದಾರ್ಥಗಳಲ್ಲಿಯೂ ಕೂಡ ಶಬ್ದಗಳು ಪ್ರವೃತ್ತವಾಗುತ್ತವೆ ಎಂದು ಹೇಳಬಾರದು. ಹಾಗಾದಲ್ಲಿ ಎಲ್ಲಾ ಪದಾರ್ಥಗಳನ್ನು ಶಬ್ದಗಳು ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುತ್ತಿವೆ ಎಂದು ಹೇಳಿದಂತಾಗುತ್ತದೆ. ಆವಾಗ ಲೋಕದಲ್ಲಿ ಲಕ್ಷಣಾವೃತ್ತಿಯನ್ನು ಬಿಟ್ಟು, ಬೇರೆ ಅಭಿಧಾವೃತ್ತಿಯೇ ಇಲ್ಲವೆಂದಾಗಬೇಕು.

ಸರ್ವಶಬ್ದಸಮನ್ವಯವನ್ನು ಕೈ ಬಿಡುವುದೇ ಲೇಸು

**तत्वप्रकाशिका – अतो न ज्योतिरादिशब्दजातस्य परमात्मवाचित्वं युक्तम् इति न समन्वयसूत्रं युक्तमिति भावः ।**

ಆದ್ದರಿಂದ 'ಜ್ಯೋತಿಃ' ಮೊದಲಾದ ಶಬ್ದಗಳ ಸಮೂಹವು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂಬುದು ಸರ್ವಥಾ ಯುಕ್ತವಾಗುವುದಿಲ್ಲ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂಬ ಪ್ರತಿಜ್ಞೆಯೂ ಕೂಡ ಯುಕ್ತವಾಗುತ್ತದೆ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

ಸಿದ್ಧಾಂತ ಸ್ಥಾಪನೆ

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। ज्योतिष्टोमादिकर्मतदङ्गवाचकत्वेन प्रसिद्धज्योतिरादिशब्दाभिधेयो हरिरेव ।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ. ಜ್ಯೋತಿರಾದಿ ಶಬ್ದಗಳು 'ಜ್ಯೋತಿಷ್ಟೋಮ' ಮೊದಲಾದ ಕರ್ಮಗಳನ್ನು ಮತ್ತು ಅವುಗಳ ಅಂಗಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಲೋಕಪ್ರಸಿದ್ಧವಾಗಿದೆ. ಆದರೆ ಈ ಜ್ಯೋತಿರಾದಿ ಶಬ್ದಗಳಿಂದೆಲ್ಲಾ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

ಏನೆಂದು ಅಧ್ಯಯನ ಮಾಡುತ್ತಾರೆ!

**तत्वप्रकाशिका – यस्मादेके शाखिनः 'ता वा एताः' इति तथा - सर्वशब्दाभिधेयत्वेन हरिमेवाभिधीयते ।**

ಯಾವ ಕಾರಣದಿಂದ ಕೆಲವು ಐತರೇಯ ಶಾಖಿಗಳು 'ತಾ ವಾ ಏತಾಃ' ಎಂಬುದಾಗಿ ಸಕಲಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗಿದ್ದಾನೆಂದು ಅಧ್ಯಯನ ಮಾಡುತ್ತಿದ್ದಾರೋ, ಆ ಕಾರಣದಿಂದ ಸಕಲಶಬ್ದಗಳು ಭಗವದ್ವಾಚಕವೇ ಆಗುತ್ತವೆ.

ಪರಮಾತ್ಮನಲ್ಲಿ ಯೋಗವೃತ್ತಿಯಿಂದಲೇ ಅಧ್ಯಯನ

**तत्वप्रकाशिका – नच शब्दानां भगवत्परत्वे वृत्त्यभावः । 'एष इमं लोकमभ्यार्चत्' इत्यादिना शतर्च्यादिशब्दानां परमात्मनि योगस्योक्तत्वात् ।**

ಭಗವಂತನು ಇಂತಹ ಕರ್ಮಪ್ರತಿಪಾದಕ ಶಬ್ದಗಳಿಂದ ವಾಚ್ಯನಾಗಿದ್ದಾನೆನ್ನಲು ಶಬ್ದವೃತ್ತಿಯೇ ಇಲ್ಲವೆಂದು ಆಕ್ಷೇಪ ಮಾಡಬಾರದು. ಏಕೆಂದರೆ 'ಏಷ ಇಮಂ ಲೋಕಮಭ್ಯಾರ್ಚತ್' ಇವೇ ಮೊದಲಾದ ಶ್ರುತಿಗಳಿಂದ 'ಶತರ್ಚಿ' ಮೊದಲಾದ ಶಬ್ದಗಳ ಯೋಗವೃತ್ತಿಯನ್ನು ಪರಮಾತ್ಮನಲ್ಲಿ ಶ್ರುತಿಯೇ ಹೇಳುತ್ತಿದೆ.

'ತಸ್ಮಾಚ್ಛತರ್ಚಿನ' ಎಂಬ ಶ್ರುತಿಯ ಅಭಿಪ್ರಾಯ

**तत्वप्रकाशिका – नच शब्दानामन्यत्र रूढत्वेन योगाङ्गीकारायोगः 'तस्माच्छतर्चिन इत्याचक्षत एतमेव सन्तम्' इति योगेन रूढेरपहारोक्तेः ।**

'ಜ್ಯೋತಿಃ' ಮೊದಲಾದ ಶಬ್ದಗಳು ಜ್ಯೋತಿಷ್ಟೋಮಾದಿ ಅನ್ಯಪದಾರ್ಥಗಳಲ್ಲಿ ಪ್ರಸಿದ್ಧವಾಗಿರುವುದರಿಂದ ವಿಷ್ಣುವಿನಲ್ಲಿ ಯೋಗವೃತ್ತಿಯನ್ನು ಅಂಗೀಕರಿಸುವುದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಮ್' ಎಂಬುದಾಗಿ ಪರಮಾತ್ಮನಲ್ಲಿ ಶಬ್ದಗಳ ಯೋಗವೃತ್ತಿಯನ್ನು ತೋರಿಸಿ, ಲೋಕರೂಢಿಯನ್ನು ನಿರಾಕರಿಸಲಾಗಿದೆ.

ಪರಮಾತ್ಮನೇ 'ಶತರ್ಚಿ'

**तत्वप्रकाशिका – 'एतमेव परमात्मानं मुख्यतो यौगिकार्थं सन्तं शतर्च्यादिनामभिराचक्षते, नतु मुख्यतो रूढत्वेऽपि मुनीन्' इति प्रतीतेः ।**

ಇಂತಹ ಪರಮಾತ್ಮನನ್ನು 'ಶತರ್ಚಿ' ಮೊದಲಾದ ಶಬ್ದಗಳಿಂದ ಎಲ್ಲಾ ಜ್ಞಾನಿಜನರು ಮುಖ್ಯವಾಗಿ ಯೌಗಿಕಾರ್ಥದಿಂದ ತಿಳಿದಿದ್ದಾರೆ. ಆದ್ದರಿಂದಲೇ ಅವನನ್ನು 'ಶತರ್ಚಿ' ಎಂದು ಕರೆಯುತ್ತಾರೆ. ಲೋಕರೂಢಿಯಿಂದ 'ಶತರ್ಚಿ' ಮೊದಲಾದ ಶಬ್ದಗಳು ಋಷಿಯಲ್ಲಿ ಪ್ರಸಿದ್ಧವಾಗಿದ್ದರೂ, ಜ್ಞಾನಿಜನರು ಅಂತಹ ಶಬ್ದಗಳಿಂದ ಋಷಿಗಳನ್ನು ತಿಳಿಯುವುದೇ ಇಲ್ಲ. ಹೀಗೆ ಶ್ರುತಿಯಿಂದ ತಿಳಿಯುತ್ತಿದೆ.

### ಪರಮಾತ್ಮನಲ್ಲಿ ವಿದ್ವದ್ರೂಢಿಸಹಿತವಾದ ಯೋಗ

**ತत्वप्रकाशिका – यद्यपि पङ्कजादिशब्दे योगापहारित्वं रूढेर्दृश्यते तथाप्यत्र ''आचक्षते'' इति विद्वद्रूढिसहितत्वेनोक्तयोगस्य रूढ्यपहारित्वं युक्तमेव ॥**

ವಾಸ್ತವಿಕವಾಗಿ 'ಪಂಕಜ' ಮೊದಲಾದ ಶಬ್ದಗಳಲ್ಲಿ ರೂಢ್ಯರ್ಥವನ್ನೇ ಸ್ವೀಕರಿಸಿ ಯೋಗಾರ್ಥವನ್ನು ಬಿಡುವುದು ಕಂಡಿದೆ. ಆದರೂ ಕೂಡ ಪ್ರಕೃತ 'ಆಚಕ್ಷತೇ' ಎಂಬುದಾಗಿ ಶ್ರುತಿ ಹೇಳುತ್ತಿರುವುದರಿಂದ ಯೋಗವು ವಿದ್ವದ್ರೂಢಿಸಹಿತವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ವಿದ್ವದ್ರೂಢಿಸಹಿತವಾದ ಈ ಯೋಗವು ಅಜ್ಞರೂಢಿಯನ್ನು ನಿರಾಕರಿಸುವುದು ಯುಕ್ತವೇ ಆಗಿದೆ.

### ಸರ್ವಶಬ್ದಸಮನ್ವಯಕ್ಕೆ ಯಾವುದೇ ಬಾಧಕವಿಲ್ಲ

**तत्वप्रकाशिका – अतो हरेः कर्माभिधायकशब्दवाच्यत्वाद्युक्तं समन्वयसूत्रमिति भावः ।**

ಆದ್ದರಿಂದ ಶ್ರೀಹರಿಯೇ ಕರ್ಮಪ್ರತಿಪಾದಕವಾದ ಸಕಲವಿಧಶಬ್ದಗಳಿಂದ ವಾಚ್ಯನಾಗಿದ್ದಾನೆ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞೆಯು ಅತ್ಯಂತ ಸಮಂಜಸವಾಗಿದೆ. ಇಷ್ಟು ಸಿದ್ಧಾಂತದ ಅಭಿಪ್ರಾಯ.

### ಸೂತ್ರಕಾರರೇಕೆ ವಸಂತ ಶಬ್ದವನ್ನು ಬಿಟ್ಟರು ?

**तत्वप्रकाशिका – ज्योतिःशब्दस्याप्रथमपठितत्वेऽपि प्रधानकर्माभिधायकत्वात् तस्यैवान्योपलक्षकत्वसम्भवाच्च सङ्ग्रहः । तुशब्द एवार्थे ।**

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದಾಗಿ ಶ್ರುತಿಯಲ್ಲಿ ಮೊದಲು ವಸಂತ ಪದವು ಕೇಳಿಸುತ್ತಿದೆ. ಅನಂತರ 'ಜ್ಯೋತಿಃ' ಎಂಬ ಶಬ್ದವು ಕೇಳಿಸುತ್ತಿದೆ. ಅದಕ್ಕನುಗುಣವಾಗಿ ಸೂತ್ರಕಾರರು ವಸಂತಪದವನ್ನೇ ಮೊದಲು ತೆಗೆದುಕೊಳ್ಳಬೇಕಿತ್ತು. ಅದನ್ನು ಬಿಟ್ಟು ಅನಂತರ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವನ್ನು ತೆಗೆದುಕೊಳ್ಳಲು ಏನು ಕಾರಣ? ಎಂದರೆ 'ಜ್ಯೋತಿಃ' ಎಂಬ ಶಬ್ದವು ಪ್ರಧಾನವಾದ 'ಜ್ಯೋತಿಷ್ಟೋಮ' ಎಂಬ ಕರ್ಮವನ್ನು ಪ್ರತಿಪಾದನೆ ಮಾಡುತ್ತಿದೆ. 'ವಸಂತ' ಎಂಬ ಪದವು ಕೇವಲ ಕಾಲವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆ. ಮುಖ್ಯ ಹಾಗೂ ಅಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ, 'ಜ್ಯೋತಿಃ' ಎಂಬ ಮುಖ್ಯವಾದ ಪದವನ್ನು ಉಲ್ಲೇಖಿಸಿ, ಅದರಿಂದ ಅಮುಖ್ಯವಾದವುಗಳನ್ನೆಲ್ಲಾ ಉಪಲಕ್ಷಣಯಾ ಸೂತ್ರಕಾರರು ವಿವಕ್ಷಿಸುತ್ತಾರೆ. ಸೂತ್ರದಲ್ಲಿರುವ 'ತು' ಎಂಬ ಶಬ್ದವು ಅವಧಾರಣಾರ್ಥದಲ್ಲಿದೆ.

### ಧ್ವನಿಯಿಂದಲೂ ಶ್ರೀಹರಿಯೇ ವಾಚ್ಯ

**तत्वप्रकाशिका – 'यास्ता एताः सर्वा ऋचस्तासामेकमेव व्याहर्तव्यं, तच्च विष्णुरेव । किं च ये सर्वे वेदाः, तेषामपीश्वर एव प्रतिपाद्यः, किमृचाम्! अपि च ये समुद्रादिघोषाः, तेषामपि, किमु वेदानां ! तत्र ऋचस्तु विशेषतः परमात्मप्रतिपादिका इति जानीयात् इत्यर्थः ।। १ ।।**

ವೇದದಲ್ಲಿ ಯಾವ ಯಾವ 'ಋಜ್'ಮಂತ್ರಗಳಿವೆಯೋ, ಅವೆಲ್ಲವೂ ಒಬ್ಬನೇ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿವೆಯೆಂದು ಹೇಳಬೇಕು. ಸಕಲ ವೇದಗಳಿಂದ ವಿಷ್ಣು ಪ್ರತಿಪಾದ್ಯನಾದ ಮೇಲೆ 'ಋಜ್' ಮಂತ್ರಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಪ್ರತ್ಯೇಕ ಹೇಳಬೇಕೇನು? ಮತ್ತು ಯಾವ ಸಮುದ್ರ ಮೊದಲಾದವುಗಳ ಧ್ವನಿಗಳಿವೆಯೋ, ಆ ಧ್ವನ್ಯಾತ್ಮಕವಾದ ಶಬ್ದಗಳೂ ಕೂಡ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿರುವಾಗ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಪ್ರತ್ಯೇಕ ಹೇಳಬೇಕೇನು ? ಇಲ್ಲಿ ಸಕಲ ಶಬ್ದಗಳ ಮಧ್ಯದಲ್ಲಿ ಋಕ್‌ಗಳಿಂದ ಪರಮಾತ್ಮನು ವಿಶೇಷವಾಗಿ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕೆಂದರ್ಥ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಅಧಿಕರಣದ ಉಪಾಧಿ

**एतदधिकरणोपाधिभूतशब्दानां भाष्योक्तबलवदुपपत्त्याऽन्यत्रैव प्रसिद्धत्वं वदन्नन्तर्भावसङ्गतिमाह – अत्र कर्मक्रमादीति ।।**

ಜ್ಯೋತಿರುಪಕ್ರಮಾಧಿಕರಣವು ಪ್ರಾರಂಭವಾಗುತ್ತಿದೆ. ''ಸರ್ವ'' ಎಂಬುದು ಈ ಅಧಿಕರಣದ ಉಪಾಧಿ. ಈ ಉಪಾಧಿಕೋಟಿಯಲ್ಲಿ ಪ್ರವೇಶ ಹೊಂದುವ ಸಕಲಶಬ್ದಗಳನ್ನು ಇಲ್ಲಿ ಸಮನ್ವಯ ಮಾಡಲಾಗುತ್ತಿದೆ. ಇಂಥ ಶಬ್ದಗಳು ಭಾಷ್ಯದಲ್ಲಿ ಹೇಳಿದ ಬಲಿಷ್ಠವಾದ ಉಪಪತ್ತಿಗಳಿಂದ ಅನ್ಯತ್ರಪ್ರಸಿದ್ಧವಾಗಿದೆ. ಇಂಥ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಜ್ಯೋತಿರುಪಕ್ರಮಾಧಿಕರಣಕ್ಕೆ ಶಾಸ್ತ್ರಾಂತರ್ಭಾವ, ಅಧ್ಯಾಯಾಂತರ್ಭಾವ, ಪಾದಾಂತರ್ಭಾವ ಎಂಬ ಸಂಗತಿತ್ರಯಗಳು ಇರುತ್ತವೆಂಬುದನ್ನು 'ಅತ್ರ ಕರ್ಮಕ್ರಮಾದಿ' ಇತ್ಯಾದಿ ಟೀಕಾವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

### ಈ ಅಧಿಕರಣ ಏಕೆ ?

**भावदीपः** – यद्यपि शरीररूपकविन्यस्तगृहीतेरित्युक्तन्यायेन तच्छब्दवाच्येश्वर-सम्बन्धादन्यत्रापि शब्दवृत्तेरङ्गीकारेण न कर्मादिलोपप्रसङ्गः। अन्यथा पूर्वत्रापि तारतम्यलोपप्रसङ्गः स्यात् ।

ಪ್ರಶ್ನೆ- ಸಕಲಶಬ್ದಗಳು ಪರಮಾತ್ಮನನ್ನೆ ಪ್ರತಿಪಾದನೆ ಮಾಡುತ್ತವೆ ಆದರೂ ಸಹ ಅವನ ಸಂಬಂಧದಿಂದ ಬೇರೆ ಪದಾರ್ಥಗಳನ್ನು ಕೂಡ ಪ್ರತಿಪಾದನೆ ಮಾಡುತ್ತವೆ. ಹೀಗೆ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಲೌಕಿಕಪದಾರ್ಥಗಳಲ್ಲಿಯೂ ಶಬ್ದವೃತ್ತಿಯನ್ನು ಅಂಗೀಕರಿಸಲಾಗಿದೆ. ಆದ್ದರಿಂದಲೇ ಕರ್ಮಪ್ರತಿಪಾದ್ಯವಾದ ವಾಕ್ಯಗಳೇ ಇಲ್ಲವಾದ್ದರಿಂದ ಕರ್ಮಾನುಷ್ಠಾನಗಳ ಲೋಪವಾಗಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಹೀಗೆ ಒಪ್ಪದಿದ್ದರೆ ಹಿಂದೆ ಸಮರ್ಥಿಸಿದ ತಾರತಮ್ಯವೂ ಕೂಡ ಲೋಪವಾಗಬೇಕಾದೀತು. ಹೀಗಿರುವಾಗ ಈ ಅಧಿಕರಣ ಏಕೆ ಹೊರಡಬೇಕು?

ಅಧಿಕರಣವು ಸಾರ್ಥಕ

**भावदीपः –** तथापीह पदवर्णस्वरादिरूपेणैव समन्वयस्याभिप्रेतत्वेन कर्मक्रमादिप्रतीतेरेवाभावात् । तच्छब्दावाच्येशसम्बन्धात् अन्यत्र वृत्तिश्चेत् गङ्गसम्बन्धात्तीरे गङ्गापदस्येव सर्वशब्दानां लोके लक्षणाप्रसङ्गेन प्राक्तनन्यायस्यैव अयोगेन इहाप्याक्षेप्यत्वादिति भावः ।।

ಉತ್ತರ - ಹೌದು, ಆದರೂ ಸಹ ಈ ಅಧಿಕರಣ ಸಾರ್ಥಕ. ಏಕೆಂದರೆ ಇಲ್ಲಿ ಪದ ಅಕ್ಷರ ಸ್ವರ ಇವೇ ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆದ್ದರಿಂದ ಕರ್ಮಕ್ರಮಾದಿಗಳ ಪ್ರತೀತಿಯೇ ಬರುವುದಿಲ್ಲ. ಮತ್ತು ಪ್ರತಿಯೊಂದು ಶಬ್ದಗಳಿಂದ ಪ್ರತಿಪಾದ್ಯನಾದ ಪರಮಾತ್ಮನ ಸಂಪರ್ಕದಿಂದ ಶಬ್ದಗಳು ಲೌಕಿಕ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಿದರೆ ಸಕಲ ಶಬ್ದಗಳಿಗೆ ಲಕ್ಷಣಾವೃತ್ತಿಯನ್ನು ಒಪ್ಪಿದ ದೋಷ ಬರುತ್ತದೆ. ''ಗಂಗಾಯಾಂ ಘೋಷಃ'' ಎಂಬಲ್ಲಿ ಗಂಗಾಸಂಪರ್ಕ ಇರುವುದರಿಂದ ತೀರದಲ್ಲಿ 'ಗಂಗಾ' ಎಂಬ ಪದವನ್ನು ಪ್ರಯೋಗಿಸುವುದರಿಂದ ತೀರದಲ್ಲಿ ಗಂಗಾಪದಕ್ಕೆ ಲಕ್ಷಣಾವೃತ್ತಿ ಎಂದು ಎಲ್ಲರೂ ಒಪ್ಪಿದ್ದಾರೆ. ಅದರಂತೆ ಪರಮಾತ್ಮನ ಸಂಬಂಧವಿರುವುದರಿಂದ ಎಲ್ಲ ಪದಾರ್ಥಗಳನ್ನು ಸಕಲಶಬ್ದಗಳು ಪ್ರತಿಪಾದನೆ ಮಾಡುವುದಾದರೆ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದೆ. ಆದ್ದರಿಂದ 'ಶರೀರರೂಪಕ' ಇತ್ಯಾದಿ ಸೂತ್ರದಲ್ಲಿ ಹೇಳಿದ ನ್ಯಾಯವೇ ಅಯುಕ್ತವಾಗಿದೆ. ಹೀಗೆ ಅಭ್ಯಧಿಕಾಶಂಕೆಯು ಪ್ರಾಪ್ತವಾಗುವುದರಿಂದ ಅದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಡಲೇಬೇಕು.

ಪದ, ವರ್ಣ, ಸ್ವರಗಳ ಸಮನ್ವಯಕ್ಕಾಗಿ ಈ ಅಧಿಕರಣ ಹೊರಟಿದೆ

**भावदीपः –** सर्वशब्दानामिति ।। पूर्वनयेषु समन्वितानाम् अन्यत्रासमन्वितानां च वाक्यानां पदवर्णस्वरादिभेदेनेह समन्वीयमानत्वात् तद्रूपेणोदाहरणत्वमित्यर्थः ।

ಟೀಕೆಯಲ್ಲಿ ಹೇಳಿದ 'ಸರ್ವಶಬ್ದಾನಾಂ' ಎಂಬ ಪದದ ಅಭಿಪ್ರಾಯ ಹೀಗಿದೆ - ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಅನೇಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಮತ್ತು ಸಮನ್ವಯ ಮಾಡದ ಇನ್ನೂ ಅನೇಕ ಶಬ್ದಗಳಿವೆ. ಈ ಎಲ್ಲಾ ಬಗೆಯ ಶಬ್ದಗಳಲ್ಲಿರುವ ಪದ, ವರ್ಣ, ಸ್ವರಗಳ ಸಮನ್ವಯಕ್ಕಾಗಿ ಈ

ಅಧಿಕರಣ ಹೊರಟಿದೆ. ಈ ಕ್ರಮದಿಂದ ಸಕಲ ಶಬ್ದಗಳು ಈ ಅಧಿಕರಣದ ವಿಷಯವಾಗಿದೆ ಎಂದು ತಿಳಿಯಬೇಕು.

### 'ಸರ್ವ' ಎಂಬುದು ಅಧಿಕರಣದ ಉಪಾಧಿ

**भावदीपः – विरोधिसर्वबाहुल्येत्यनुभाष्ये सर्वेत्येतदधिकरणोपाधेरुक्तेः इति भावः ।**

"ವಿರೋಧಿಸರ್ವಬಾಹುಲ್ಯ" ಎಂಬ ಅನುವ್ಯಾಖ್ಯಾನದಲ್ಲಿ 'ಸರ್ವ' ಎಂಬ ಪದದಿಂದ ಈ ಅಧಿಕರಣದ ಉಪಾಧಿಯನ್ನು ಹೇಳಿರುತ್ತಾರೆ. ಪದ, ವರ್ಣ, ಸ್ವರಾದಿಗಳ ಕ್ರಮದಿಂದ ಎಲ್ಲಾ ಬಗೆಯ ಶಬ್ದಗಳ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಇದರ ಅರ್ಥ.

### ಹಿಂದಿನ ಅಧಿಕರಣದ ಭಾಷ್ಯವಾಕ್ಯವನ್ನು ಇಲ್ಲೂ ಯೋಜನೆ ಮಾಡಬೇಕು

**भावदीपः – 'तत्तु समन्वयात्' इति सर्वशब्दानां परमेश्वरे समन्वय उक्त इति पूर्वनयस्थभाष्यवाक्यमिहापि योज्यमिति भावेन तदर्थं वदन् सङ्गतिसूचकत्वेन तावत् भाष्यं व्याचष्टे – तत्तु, इति।।**

"ತತ್ತು ಸಮನ್ವಯಾದಿತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯ ಉಕ್ತಃ" "ತತ್ತುಸಮನ್ವಯಾತ್ ಎಂಬ ಸೂತ್ರದಲ್ಲಿ ಪರಮಾತ್ಮನಲ್ಲಿ ಸಕಲ ಶಬ್ದಗಳು ಸಮನ್ವಯವಾಗುತ್ತವೆಂದು ಹೇಳಲಾಯಿತು". ಹೀಗೆ ಹಿಂದಿನ ಅಧಿಕರಣದ ಭಾಷ್ಯದಲ್ಲಿರುವ ವಾಕ್ಯವನ್ನು ಈ ಅಧಿಕರಣದಲ್ಲೂ ಕೂಡ ಯೋಜನೆ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಭಾಷ್ಯದ ಮಾತನ್ನು ವ್ಯಾಖ್ಯಾನ ಮಾಡುತ್ತಾ ಸಂಗತಿಯನ್ನು ತೋರಿಸುವ ಮೂಲಕ 'ತತ್ತು' ಇತ್ಯಾದಿ ವಾಕ್ಯವು ಹೊರಟಿವೆ.

### ಕರ್ಮಕ್ರಮಾದಿ ಇತ್ಯಾದಿ ಭಾಷ್ಯಕ್ರಮದ ತಾತ್ಪರ್ಯ

**भावदीपः – वसन्त इत्यादिभाष्यभावमाह – सर्वमध्येति ।। कर्मक्रमादीत्यादिवाक्यतात्पर्यमाह – तेषां चान्यपरत्वे, इति ।। वक्ष्यमाणदिशेति भावः ।। तदिति ।। निर्णेतव्यत्वेन प्राप्तेत्यर्थः ।**

'ವಸಂತೇ' ಇತ್ಯಾದಿ ಭಾಷ್ಯದ ಅಭಿಪ್ರಾಯವನ್ನು ಟೀಕೆಯಲ್ಲಿ 'ಸರ್ವಮಧ್ಯ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. 'ಕರ್ಮಕ್ರಮಾದಿ' ಇತ್ಯಾದಿ ಭಾಷ್ಯದ ಮಾತಿನ ತಾತ್ಪರ್ಯವನ್ನು 'ತೇಷಾಂ ಚ ಅನ್ಯಪರತ್ವೇ' ಇತ್ಯಾದಿ ಟೀಕಾವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ ಶಬ್ದಗಳು ಹೇಗೆ ಅನ್ಯಪರವಾಗುತ್ತವೆಂಬುದನ್ನು ಮುಂದೆ ಹೇಳುವ ಕ್ರಮದಲ್ಲಿ ತಿಳಿದುಕೊಳ್ಳಬೇಕು. 'ತತ್' ಎಂದರೆ 'ನಿರ್ಣೀತವ್ಯತ್ವೇನ' ಪ್ರಸಕ್ತವಾದ ಎಂದರ್ಥ.

### ಸಂಗತಿಪರ ಭಾಷ್ಯವು ಪೂರ್ವಪಕ್ಷಪರವೂ ಹೌದು

**भावदीपः – पूर्वपक्षादिपरत्वेनापि भाष्यं व्याकुर्वन् कर्माभिधायकस्य इत्येतल्लब्धहेतुमाह – तस्य ज्योतिष्टोमादीति ।।**

ಸಂಗತಿಪ್ರದರ್ಶಕವಷ್ಟೇ ಅಲ್ಲದೆ ಪ್ರರ್ವಪಕ್ಷಪ್ರದರ್ಶಕವೂ ಆಗಿದೆ ಎಂಬ ದೃಷ್ಟಿಯಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾ 'ಕರ್ಮಾಭಿಧಾಯಕಸ್ಯ' ಎಂಬುದರಿಂದ ತಿಳಿಯುವ ಹೇತುವನ್ನು 'ತಸ್ಯ ಜ್ಯೋತಿಷ್ಟೋಮಾದಿ' ಇತ್ಯಾದಿ ಟೀಕೆಯಿಂದ ತೋರಿಸಿದ್ದಾರೆ.

### 'ಕರ್ಮಕ್ರಮಾದಿ ವಿರೋಧಾತ್' ಎಂಬ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – प्रसिद्धाभिधेयोऽपीत्यग्रेतनभाष्यानुरोधात् प्रसिद्धत्वादित्युक्तम्। कर्मक्रमादिविरोधादित्येतद्वाक्यं व्यनक्ति – तत्प्रसिद्धिमिति।।**

'ಪ್ರಸಿದ್ಧಾಭಿಧೇಯೋಽಪಿ' ಎಂಬ ಮುಂದಿನ ಭಾಷ್ಯವಾಕ್ಯಕ್ಕೆ ಅನುಸಾರಿಯಾಗಿ ಟೀಕೆಯಲ್ಲಿ 'ಪ್ರಸಿದ್ಧತ್ವಾತ್' ಎಂದು ಹೇಳಿದ್ದಾರೆ. 'ಕರ್ಮಕ್ರಮಾದಿವಿರೋಧಾತ್' ಎಂಬ ಭಾಷ್ಯದ ಮಾತನ್ನು 'ತತ್ ಪ್ರಸಿದ್ಧಿಮ್' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡಿದ್ದಾರೆ.

### ಅಧಿಕಾರಿ, ನಿಯೋಜ್ಯ, ಯಜಮಾನ ಇವುಗಳ ಅರ್ಥ

**भावदीपः – अधिकारीति ।।** फलस्वामित्वावस्थायुक्तोऽधिकारी । विधिप्रेर्यत्वावस्थावान् नियोज्यः । कर्मकर्तृत्वावस्थायुक्तो यजमान इत्येकस्यैवावस्थाभेदात् भेदेन व्यपदेशः ।

ಟೀಕೆಯಲ್ಲಿ 'ಅಧಿಕಾರಿ', 'ನಿಯೋಜ್ಯ', 'ಯಜಮಾನ' ಎಂಬ ಮೂರು ಪದಗಳನ್ನು ಪ್ರಯೋಗಿಸಿದ್ದಾರೆ. ಮೂರು ಪದಗಳು ಒಬ್ಬನೇ ವ್ಯಕ್ತಿಯನ್ನು ಹೇಳಿದರೂ ಕೂಡ ಅವಸ್ಥಾಭೇದವನ್ನು ವಿವಕ್ಷಿಸುತ್ತಿದೆ. ಫಲಸ್ವಾಮಿಯಾದ ಅವಸ್ಥೆಯಲ್ಲಿ 'ಅಧಿಕಾರಿ' ಎನಿಸುತ್ತಾನೆ. ವಿಧಿವಾಕ್ಯದಿಂದ ಪ್ರೇರ್ಯನಾದಾಗ 'ನಿಯೋಜ್ಯ' ಎನಿಸುತ್ತಾನೆ. ಕರ್ಮಕರ್ತೃತ್ವವೆಂಬ ಅವಸ್ಥೆಯಿಂದ ಯುಕ್ತನಾದಾಗ 'ಯಜಮಾನ' ಎನಿಸುತ್ತಾನೆ. ಈ ಅರ್ಥವನ್ನು ತಿಳಿದಾಗ ಒಬ್ಬನನ್ನೇ ಮೂರು ಪದಗಳಿಂದ ಹೇಳಿದ್ದಾರೆಂಬ ಆಕ್ಷೇಪ ಬರುವುದಿಲ್ಲ.

### ಪ್ರಸಿದ್ಧಪದದಿಂದ ಪೂರ್ವಪಕ್ಷವು ಸೂಚಿತ

**भावदीपः** – हरौ महायोगविद्वद्रूढिपरस्योपक्रमादिति सूत्रांशस्य व्यावर्त्यं भाष्यस्थप्रसिद्धपदसूचितमाह – **किं चेति ॥**

ಶ್ರೀಹರಿಯಲ್ಲಿ ಸಕಲಶಬ್ದಗಳು ಮಹಾಯೋಗವೃತ್ತಿಯಿಂದ ಹಾಗೂ ವಿದ್ವದ್‌ರೂಢಿಯಿಂದ ಸಮನ್ವಯಗೊಳ್ಳುತ್ತವೆಂಬುದನ್ನು ಸೂತ್ರದಲ್ಲಿರುವ 'ಉಪಕ್ರಮಾತ್' ಎಂಬ ಪದವು ಸಾಧಿಸುತ್ತವೆ. ಇದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರದರ್ಶಿಸುತ್ತಿದ್ದಾರೆ. ಈ ಪೂರ್ವಪಕ್ಷವು ಭಾಷ್ಯದಲ್ಲಿರುವ 'ಪ್ರಸಿದ್ಧ' ಎಂಬ ಪದದಿಂದ ಸೂಚಿತವಾಗಿದೆ.

### ಶ್ರೀಹರಿಯಲ್ಲಿ ರೂಢಿ ಒಪ್ಪಬಹುದೇ?

**भावदीपः** – हरौ शब्दानां रूढ्यङ्गीकारे बाधकं चाह – **तत इति ॥** रूढित इत्यर्थः ।

ಶ್ರೀಹರಿಯಲ್ಲಿ ಶಬ್ದಗಳಿಗೆ ರೂಢಿಯನ್ನು ಅಂಗೀಕಾರ ಮಾಡಿದರೆ ಬರುವ ಬಾಧಕವನ್ನು ಟೀಕೆಯಲ್ಲಿ 'ತತೋ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ತತಃ' ಎಂಬ ಪದಕ್ಕೆ ರೂಢಿಯನ್ನು ಒಪ್ಪುವುದರಿಂದ ಎಂದರ್ಥ.

### ಸಕಲಗುಣಪರಿಪೂರ್ಣತ್ವಕ್ಕೆ ಸಕಲಶಬ್ದಸಮನ್ವಯವು ಕಾರಣವಾಯಿತು

**भावदीपः** – 'अतोऽनन्तगुणो विष्णुर्यच्छब्दा योगवृत्तयः' इति सङ्क्षेपभाष्योक्तदिशा समन्वीयमानशब्दानां हरौ यौगिकत्व एव जिज्ञासासूत्रस्थब्रह्म शब्दोक्तगुणपूर्णत्वसिद्धिरन्यथा तदसिद्धेरित्यर्थः ।

"ಅತೋಽನಂತಗುಣೋ ವಿಷ್ಣುರ್ಯಚ್ಛಬ್ದಾ ಯೋಗವೃತ್ತಯಃ'' "ಯಾವ ಕಾರಣಗಳಿಂದ ಶಬ್ದಗಳು ವಿಷ್ಣುವಿನಲ್ಲಿ ಯೌಗಿಕವಾಗಿ ಸಮನ್ವಯಗೊಳ್ಳುತ್ತವೋ ಆ ಕಾರಣದಿಂದಲೇ ವಿಷ್ಣು ಸಕಲಗುಣಪರಿಪೂರ್ಣ-ನಾಗಿದ್ದಾನೆಂದು ಸಿದ್ಧವಾಯಿತು'' ಹೀಗೆ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಈ ದೃಷ್ಟಿಯಿಂದ ಸಮನ್ವಯ ಮಾಡುವ ಸಕಲ ಶಬ್ದಗಳು ಶ್ರೀಹರಿಯಲ್ಲಿ ಯೌಗಿಕವಾದರೆ ಮಾತ್ರ ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಯೋಗವೃತ್ತಿಯನ್ನು ಒಪ್ಪದೆ ರೂಢಿಯನ್ನು ಒಪ್ಪಿದರೆ ಈ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಭಿಪ್ರಾಯವನ್ನು 'ತತೋ' ಇತ್ಯಾದಿ ಟೀಕಾವಾಕ್ಯದಿಂದ ತಿಳಿದುಕೊಳ್ಳಬೇಕು.

'ವ್ಯುತ್ಪತ್ತೇರಪ್ಯಶಕ್ಯತಾ' ಎಂಬುದರ ವ್ಯಾಖ್ಯಾನ

**भावदीपः – कल्पनासूत्रव्यावर्त्यं व्युत्पत्तेरप्यशक्यता इत्यनुभाष्योक्तमाह – न योगोऽपि सम्भवतीति ।।**

'ಕಲ್ಪನೋಪದೇಶ್ಚ' ಎಂಬ ಸೂತ್ರದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು 'ನ ಯೋಗೋಽಪಿ ಸಂಭವತಿ' ಎಂಬ ಟೀಕಾವಾಕ್ಯದಿಂದ ತೋರಿಸುತ್ತಿದ್ದಾರೆ. "ವ್ಯುತ್ಪತ್ತೇರಪ್ಯಶಕ್ಯತಾ'' ಎಂಬ ಅನುವ್ಯಾಖ್ಯಾನದ ಮಾತಿಗೆ ಇದು ವ್ಯಾಖ್ಯಾನವಾಗಿದೆ.

'ಜ್ಯೋತಿಷಾಂ ಸ್ತೋಮಃ' ಎಂದೇಕೆ ಹೇಳಿಲ್ಲ?

**भावदीपः – ज्योतिषां स्तोम इत्यादिरूपा** हीति ।। सूत्रे ज्योतिः पदस्यैवोपात्तत्वेऽपि जातमोतं हरौ यस्माज्ज्योतिरित्यनुभाष्ये च ज्योतिः पदस्यैव व्युत्पत्त्युक्तावपीह ज्योतिष्टोमशब्दोऽप्युदाहरणम् ।

ಟೀಕೆಯಲ್ಲಿ 'ಜ್ಯೋತಿಷಾಂ ಸ್ತೋಮಃ' ಎಂದು ಉದಾಹರಿಸಬೇಕಿತ್ತು. ಆದರೆ 'ಜ್ಯೋತಿಃ' ಎಂಬ ಪದವನ್ನಷ್ಟೆ ಉದಾಹರಿಸಿದ್ದಾರೆ. 'ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ 'ಜ್ಯೋತಿಷ್ಟೋಮ' ಇಲ್ಲಿ ಉದಾಹರಿಸಬೇಕು.

'ಜ್ಯೋತಿಃ' ಎಂಬ ಪದವು ಜ್ಯೋತಿಷ್ಟೋಮಾರ್ಥಕ

**भावदीपः –** ज्योतिः शब्दो ज्योतिष्टोमवाचीति च दर्शयितुं ज्योतिष्टोमशब्दस्य व्युत्पत्तिप्रदर्शनमिति ध्येयम् ।। **नामावृत्तिमात्रत्वेति ।।** जगज्जनकत्वादिगुणपूर्तिसिद्धिर्नस्यादिति मात्रशब्दार्थः ।

ಸೂತ್ರದಲ್ಲಿರುವ 'ಜ್ಯೋತಿಃ' ಎಂಬ ಪದವು 'ಜ್ಯೋತಿಷ್ಟೋಮ' ಎಂಬ ಕರ್ಮದ ವಾಚಕವಾಗಿದೆ. ಇದನ್ನು ತಿಳಿಸಲು ಟೀಕೆಯಲ್ಲಿ ಜ್ಯೋತಿಷ್ಟೋಮಪದದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಇಲ್ಲದಿದ್ದರೆ 'ಜ್ಯೋತಿಃ' ಎಂಬ ಪದದ ನಿಷ್ಪತ್ತಿಯನ್ನಷ್ಟೇ ತೋರಿಸಿದ್ದರೆ ಸಾಕಾಗುತ್ತಿತ್ತು.

ಟೀಕೆಯಲ್ಲಿ 'ನಾಮಾವೃತ್ತಿಮಾತ್ರತ್ವಾತ್ ಪ್ರಾಪ್ತೇಃ' ಎಂದು ಹೇಳಿದ್ದಾರೆ. ಇಲ್ಲಿ ಮಾತ್ರ ಪದವನ್ನು ಪ್ರಯೋಗಿಸಿದ್ದರಿಂದ ಪರಮಾತ್ಮನಲ್ಲಿ ಜಗಜ್ಜನಕತ್ವಾದಿ ಗುಣಪೂರ್ಣತ್ವವು ಸಿದ್ಧವಾಗದಿರಬೇಕಾದೀತು ಎಂಬ ಬಾಧಕವನ್ನು ಸೂಚಿಸಿದಂತಾಯಿತು.

### ಪುನರುಕ್ತಿಯ ಪರಿಹಾರ

**भावदीपः – शरीररूपकविन्यस्तगृहीतेरिति पूर्वोक्तेन परिहृतत्वमाशङ्क्य तदाक्षेपेणागतार्थत्वमाह – नच वाच्यमिति ।।**

'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದ ಭಾಗದಿಂದ ಈ ಅಧಿಕರಣದ ಪೂರ್ವಪಕ್ಷವನ್ನು ಪರಿಹಾರ ಮಾಡಿದ್ದಾಗಿದೆ ಎಂದು ಆಶಂಕಿಸಿ ಆ ಸೂತ್ರದಲ್ಲಿ ಹೇಳಿದ ಸಿದ್ಧಾಂತದ ಮೇಲೆ ಬರುವ ಅಭ್ಯಧಿಕಾಶಂಕೆಯನ್ನು 'ನಚ ವಾಚ್ಯಮ್' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದರಿಂದ ಪುನರುಕ್ತಿಯನ್ನು ಪರಿಹರಿಸಿದಂತಾಯಿತು.

### ರೂಢಿಗಿಂತಲು ಯೋಗವು ದುರ್ಬಲ

**भावदीपः – अत इति ।।** कर्मक्रमादिविरोधाद्योगस्य च रूढितोऽपि दुर्बलत्वादीशे शब्दानां व्युत्पत्तेरशक्यत्वाच्चेत्यर्थः । न युज्यत इत्यस्य अर्थो **न ज्योतिरादीति** ।

'ಅತಃ' ಎಂಬ ಪದಕ್ಕೆ ಹೀಗರ್ಥ - ಕರ್ಮಕ್ರಮಾದಿ ವಿರೋಧ ಬರುವುದರಿಂದ ಯೋಗವು ರೂಢಿಗಿಂತಲೂ ದುರ್ಬಲವಾದ್ದರಿಂದ ಪರಮಾತ್ಮನಲ್ಲಿ ಶಬ್ದಗಳಿಗೆ ವ್ಯುತ್ಪತ್ತಿಯನ್ನು ಹೇಳಲು ಸಾಧ್ಯವಾಗದೆ ಇರುವುದರಿಂದಲೂ ಎಂದು ನಾಲ್ಕು ಅರ್ಥಗಳನ್ನು ತಿಳಿಯಬೇಕು. 'ನ ಯುಜ್ಯತೇ' ಎಂಬ ಭಾಷ್ಯದ ಮಾತಿಗೆ ಟೀಕೆಯಲ್ಲಿ 'ನ ಜ್ಯೋತಿರಾದಿ' ಎಂಬುದರಿಂದ ಅರ್ಥವನ್ನು ಹೇಳಿದ್ದಾರೆ.

### 'ಸ ಏವ' ಎಂಬ ಭಾಷ್ಯದ ವ್ಯಾಖ್ಯಾನ

**भावदीपः – पूर्वपक्षफलमाह – न समन्वयेति ।।** ज्योतिरादीति भाष्यमाकाङ्क्षितपूर्त्या व्याचष्टे – **ज्योतिष्टोमेति** ।। 'तत्तु' इत्यनुवृत्तस्य स एवेति भाष्यम् । तस्यार्थो हरिरेवेति ।

ಈ ಅಧಿಕರಣದ ಪೂರ್ವಪಕ್ಷಫಲವನ್ನು 'ನ ಸಮನ್ವಯ ಸೂತ್ರಮ್' ಎಂಬುದರಿಂದ ತೋರಿಸಿದ್ದಾರೆ. 'ಜ್ಯೋತಿರಾದಿ' ಎಂಬ ಭಾಷ್ಯದ ಮಾತನ್ನು ನೋಡಿದಾಗ ಹುಟ್ಟುವ ಆಕಾಂಕ್ಷೆಯನ್ನು ಪೂರ್ಣಮಾಡುವ ಪದಗಳನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಜ್ಯೋತಿಷ್ಟೋಮ' ಇತ್ಯಾದಿಯಾಗಿ. 'ತತ್ತು ಸಮನ್ವಯಾತ್' ಇತ್ಯಾದಿ ವಾಕ್ಯಗಳನ್ನು ಅನುವೃತ್ತಿ ಮಾಡಿಕೊಂಡಾಗ ಯಾವ ಅರ್ಥವು ಬರುತ್ತದೊ ಅದನ್ನು 'ಸ ಏವ' ಇತ್ಯಾದಿ ಭಾಷ್ಯವಾಕ್ಯದಿಂದ ಹೇಳಿದ್ದಾರೆ. ಇದನ್ನು ಟೀಕೆಯಲ್ಲಿ 'ಹರಿರೇವ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಾ ಸ್ಪಷ್ಟಪಡಿಸಿದ್ದಾರೆ.

### 'ತಾ ವಾ ಏತಾಃ' ಎಂಬ ಭಾಷ್ಯದ ವ್ಯಾಖ್ಯಾನ

**भावदीपः –** कुत इत्यतो हिशब्दो हेत्वर्थ इत्युपेत्य 'ता वा एताः' इत्यंशं व्याचष्टे – **यस्मादिति** ।।

'ಜ್ಯೋತಿರಾದಿ' ಶಬ್ದಗಳಿಂದ ಪರಮಾತ್ಮನೆ ಏಕೆ ಮುಖ್ಯವಾಗಿ ಪ್ರತಿಪಾದ್ಯನಾಗಬೇಕು ? ಎಂಬ ಪ್ರಶ್ನೆಗೆ 'ಹಿ' ಶಬ್ದವು ಹೇತ್ವರ್ಥದಲ್ಲಿದೆಯೆಂದು ಅಂಗೀಕಾರ ಮಾಡಿ ಭಾಷ್ಯದ 'ತಾವಾ ಏತಾಃ' ಇತ್ಯಾದಿ ಮಾತಿಗೆ 'ಯಸ್ಮಾತ್' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

### 'ತಥಾ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು

**भावदीपः –** इतीत्यनन्तरं सौत्रतथाशब्दमध्याहृत्य तस्यार्थमाह – **सर्वशब्दाभिधेयत्वेनेति** ।।

ಭಾಷ್ಯದಲ್ಲಿರುವ 'ಇತಿ' ಎಂಬ ಪದದ ಅನಂತರ ಸೂತ್ರದಲ್ಲಿರುವ 'ತಥಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅದರಿಂದ ತಿಳಿಯುವ ಅರ್ಥವನ್ನು ಟೀಕೆಯಲ್ಲಿ 'ಸರ್ವಶಬ್ದಾಭಿಧೇಯತ್ವೇನ' ಎಂಬುದರಿಂದ ಹೇಳಿದ್ದಾರೆ.

### ಅಧೀಯತೇ ಎಂಬುದರ ನಿಷ್ಪತ್ತಿ

**भावदीपः –** इङध्ययन इत्यस्य कर्तरि बहुवचनान्तं रूपम् । अतो हरिमित्युक्तम्। तेन सूत्रे तत्त्वित्यत्राप्यन्वेतीति सूचितम् ।

'ಅಧೀಯತೇ' ಎಂಬುದು 'ಇಙಧ್ಯಯನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಲಟ್‌ಲಕಾರದ ಬಹುವಚನ ಪ್ರಯೋಗ. (ಅಧೀತೇ, ಅಧೀಯಾತೇ, ಅಧೀಯತೇ) ಆತ್ಮನೇಪದಿಯಲ್ಲಿ ಕರ್ತರ್ಥದಲ್ಲಿರುವುದರಿಂದ 'ಹರಿಂ' ಎಂಬುದಾಗಿ ದ್ವಿತೀಯಾವಿಭಕ್ತಿಯನ್ನು ಹೇಳಿದ್ದು ಸಾಧುವಾಗಿದೆ. ಅಧೀಯತೇ ಎಂಬುದು ಕರ್ಮಣಿ ಪ್ರಯೋಗವೆಂದು ಆಪಾತತಃ ತೋರುವುದರಿಂದ 'ಹರಿಃ' ಎಂದು ಹೇಳಬೇಕಿತ್ತಲ್ಲವೆ? ಎಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಆದ್ದರಿಂದಲೇ 'ತತ್ತು' ಎಂಬುದು ಇಲ್ಲಿಯೂ ಅನುವೃತ್ತವಾಗುತ್ತದೆ.

### 'ಉಪಕ್ರಮಾತ್' ಎಂಬ ಸೂತ್ರ ಭಾಗಕ್ಕೆ ವ್ಯಾಖ್ಯಾನ

**भावदीपः – उपक्रमादिति सूत्रांशस्य 'एष इमम्' इत्यादिभाष्यं तदवतार्य व्याचष्टे – न चेति ।।**

'ಉಪಕ್ರಮಾತ್' ಎಂಬ ಸೂತ್ರದ ಭಾಗಕ್ಕೆ ಭಾಷ್ಯದಲ್ಲಿ 'ಏಷ ಇಮಮ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯಕ್ಕೆ ಅವತಾರಿಕೆ ನೀಡಿ 'ನ ಚ' ಇತ್ಯಾದಿ ಟೀಕೆಯಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

### 'ಶತರ್ಚ' ಶ್ರುತಿಯು ಅಂತಿಮಪ್ರಾಣಾಧಿಕರಣದಲ್ಲಿದೆ

**भावदीपः –** एष प्राणशब्देन प्रकृतपरमात्मा । इमं लोकं ब्रह्मादिदेहमभ्यार्चत् प्राविशदिति व्याख्यातेयं श्रुतिः पादान्त्यप्राणनये । प्रागुक्तशङ्कामनूद्य निराह **– नच शब्दानामन्यत्रेति ।।**

'ಏಷಃ' ಎಂಬ ಪದಕ್ಕೆ ಪ್ರಾಣಶಬ್ದದಿಂದ ಪ್ರಕೃತನಾದ ಪರಮಾತ್ಮನು ಎಂದರ್ಥ. 'ಇಮಮ್ ಲೋಕಮ್' ಎಂದರೆ ಬ್ರಹ್ಮಾದಿಗಳ ದೇಹವನ್ನು ಎಂದರ್ಥ. 'ಅಭ್ಯಾರ್ಚತ್' ಎಂಬ ಪದಕ್ಕೆ ಪ್ರವೇಶ ಮಾಡಿದನು ಎಂದರ್ಥ. ಹೀಗೆ ಈ ಶ್ರುತಿಯನ್ನು ಅಂತಿಮಪ್ರಾಣಾಧಿಕರಣದಲ್ಲಿ ವ್ಯಾಖ್ಯಾನಿಸಲಾಗಿದೆ. ಹಿಂದೆ ಮಾಡಿದ ಆಶಂಕೆಯನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. 'ನ ಚ ಶಬ್ದಾನಾಮ್' ಇತ್ಯಾದಿಯಾಗಿ.

### 'ಆಚಕ್ಷತೇ' ಎಂಬುದರ ಸ್ವಾರಸ್ಯ

**भावदीपः – तस्मादिति ।।** तं देहं यस्माच्छतं वर्षाण्यभ्यार्चत् तस्मादित्यर्थः ।। **योगापहारित्वमिति** ।। अन्यथा पङ्कजपदात् भेदकादि-

**प्रतीतिप्रसङ्ग इति भावः ।। आचक्षत इति ।। प्रयोगबाहुल्यस्य रूढित्वादिति भावः ।**

ಟೀಕೆಯಲ್ಲಿ ಉದಾಹರಿಸಿದ ಶ್ರುತಿಯಲ್ಲಿರುವ 'ತಸ್ಮಾದ್' ಎಂಬುದರ ಅರ್ಥ ಹೀಗಿದೆ - ಯಾವ ಕಾರಣದಿಂದ ದೇಹವನ್ನು ನೂರು ವರ್ಷಗಳ ಕಾಲ ಪ್ರವೇಶಿಸಿದ್ದನೋ ಆ ಕಾರಣದಿಂದ ಎಂದು. 'ಯೋಗಾಪಹಾರಿತ್ವಮ್' ಎಂಬ ಟೀಕೆಯಲ್ಲಿ ಹೇಳಿದ್ದಾರೆ. 'ಪಂಕಜ' ಮೊದಲಾದ ಶಬ್ದಗಳಿಗೆ ರೂಢ್ಯರ್ಥವನ್ನು ಸ್ವೀಕರಿಸಿ ಯೋಗಾರ್ಥವನ್ನು ಬಿಡುವುದು ಕಂಡಿದೆ. ಒಂದುವೇಳೆ ಯೋಗಾರ್ಥವನ್ನೇ ಸ್ವೀಕರಿಸುವುದಾದರೆ ಪಂಕಜಪದದಿಂದ ಕಪ್ಪೆ ಮೊದಲಾದ ಅರ್ಥಗಳ ಪ್ರತೀತಿ ಬರದೇ ಇರಬೇಕಾದೀತು, ಎಂಬುದು ಇದರ ಅಭಿಪ್ರಾಯ 'ಆಚಕ್ಷತೇ' ಎಂಬ ಪದದಿಂದ ಪ್ರಯೋಗಬಾಹುಲ್ಯವೇ ರೂಢಿಯಾದ್ದರಿಂದ ಶ್ರುತಿಯಲ್ಲಿ 'ಆಚಕ್ಷತೇ' ಎಂಬ ಪದದಿಂದ ಯೋಗವು ವಿದ್ವದ್ರೂಢಿಸಹಿತವಾಗಿದೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು.

### ವಿದ್ವದ್ರೂಢಿಯನ್ನು ವಿವಕ್ಷಿಸಲು ಕಾರಣ

**भावदीपः – यद्यपि श्रौतस्य स्मार्तस्य वा केवलयोगस्यैव अज्ञरूढितः प्राबल्यमस्त्येव । अन्यथा श्रुत्यादौ योगोक्तेर्वैयर्थ्यापत्तेः उपपादितमेतन्निपुणतरं चन्द्रिकायां कम्पनादित्यत्र ।।**

ಪ್ರಶ್ನೆ- ಶ್ರುತಿ ಅಥವಾ ಸ್ಮೃತಿಯಲ್ಲಿರುವ ಪದಗಳು ಕೇವಲ ಯೋಗಾರ್ಥವಾಗಿದ್ದರೂ ಸಾಕು. ಅಜ್ಞರೂಢಿಗಿಂತಲೂ ಪ್ರಬಲವಾಗಿರುತ್ತವೆ. ಇಲ್ಲದಿದ್ದರೆ ಶ್ರುತ್ಯಾದಿಗಳಲ್ಲಿ ಯೋಗವನ್ನು ಹೇಳಿದ್ದೇ ವ್ಯರ್ಥವಾಗುತ್ತದೆ. ಇದನ್ನು 'ಕಂಪನಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ತಾತ್ಪರ್ಯ ಚಂದ್ರಿಕೆಯಲ್ಲಿ ಅತ್ಯಂತ ಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ. ಆದ್ದರಿಂದ ವಿದ್ವದ್‌ರೂಢಿಯನ್ನೇಕೆ ಇಲ್ಲಿ ಸಮರ್ಥಿಸಬೇಕು?

### ಅಭ್ಯುಪೇತ್ಯವಾದ

**भावदीपः – तथाप्यभ्युपेत्यवादेन श्रौतयोगस्याज्ञरूढ्यपहारकत्वेऽपि विद्वद्रूढिसाहित्यमुक्तमिति ध्येयम् ।।**

ಉತ್ತರ - ಹೌದು ಅಂಗೀಕಾರವಾದ ಮಾಡಿ ಇಲ್ಲಿ ವಿದ್ವದ್‌ರೂಢಿಯನ್ನು ಹೇಳಿದ್ದಾರೆ. ಶ್ರುತಿಸಿದ್ಧವಾದ ಯೋಗವು ಅಜ್ಞರೂಢಿಗಿಂತ ಪ್ರಬಲವಾಗಿದ್ದರೂ ವಿದ್ವದ್‌ರೂಢಿಯಿಂದ ಸಹಿತವಾಗಿದೆ ಎಂದು ಹೇಳಿದ್ದಾರೆ.

### ಶ್ರುತಿಯಿಂದಲೇ ಸಕಲಶಬ್ದ ವಾಚ್ಯತ್ವ

**भावदीपः – अत इति ।। महायोगविद्वद्रूढिभ्यां सर्वशब्दवाच्यत्वस्य श्रौतत्वादित्यर्थः ।**

'ಅತಃ' ಎಂಬ ಪದಕ್ಕೆ ಮಹಾಯೋಗ ಹಾಗೂ ವಿದ್ವದ್‌ರೂಢಿಗಳಿಂದ ಪರಮಾತ್ಮನು ಕರ್ಮಾದಿಪ್ರತಿಪಾದಕ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಸಕಲಶಬ್ದವಾಚ್ಯತ್ವವು ಶ್ರುತಿಯಿಂದಲೇ ಸಿದ್ಧವಾಗಿರುವುದರಿಂದ ಎಂದರ್ಥ.

### 'ವಸಂತೇ ಉಪಕ್ರಮಾತ್' ಎಂದೇಕೆ ಸೂತ್ರವಿಲ್ಲ?

**भावदीपः – वसन्ते वसन्ते ज्योतिषा यजेतेति श्रुतौ वसन्तपदस्यैवादौ श्रुतत्वेन सूत्रे वसन्त उपक्रमादिति वक्तव्ये कुतो ज्योतिषा उक्तिरित्यत आह – ज्योतिः शब्दस्येति तु शब्द इति ।। सौत्र इत्यर्थः । पञ्चमी ल्यब्लोपे उपक्रम्येत्यर्थो दर्शितः ।**

"ವಸಂತೇ ವಸಂತೇ ಜ್ಯೋತಿಷಾ ಯಜೇತ" ಎಂಬ ಶ್ರುತಿಯಲ್ಲಿ 'ವಸಂತ' ಪದವೇ ಮೊದಲು ಶ್ರುತವಾಗಿದೆ. ಅದಕ್ಕೆ ಅನುಗುಣವಾಗಿ ಸೂತ್ರದಲ್ಲಿ 'ವಸಂತ ಉಪಕ್ರಮಾತ್' ಎಂದೇ ಹೇಳಬೇಕಿತ್ತು. ಹೀಗೆ ಹೇಳದೆ 'ಜ್ಯೋತಿರುಪಕ್ರಮಾತ್' ಎಂದೇಕೆ ಹೇಳಿದರು ? ಎಂಬ ಪ್ರಶ್ನೆಗೆ 'ಜ್ಯೋತಿಃ ಶಬ್ದಸ್ಯೇತಿ ತು ಶಬ್ದಃ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ ಇಲ್ಲಿ 'ಸೌತ್ರೇ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸೂತ್ರದಲ್ಲಿರುವ ಪಂಚಮೀ ವಿಭಕ್ತಿಯು ಲ್ಯಬ್‌ಲೋಪನಿಮಿತ್ತಕವಾಗಿದೆ. ಆದ್ದರಿಂದ 'ಉಪಕ್ರಮ್ಯ' ಎಂಬ ಅರ್ಥವನ್ನು ಹೇಳಿದಂತಾಗುತ್ತದೆ.

### ಋಷಿವಾಚಕಶಬ್ದಗಳಷ್ಟೇ ಹರಿಪರವಲ್ಲ

**भावदीपः – न केवलमृष्यादीनां नाम भगवतः सर्वे वेदा अपि तस्यैव नाम किमु च वेदाः समुद्रघोषवृक्षपतनभेरीताडनादिसर्वघोषा अपि तस्यैव**

**नामानि यथायोग्यं योजनीयानि इत्यैतरेयभाष्यदिशा श्रुत्यर्थमाह – यास्ता इति ॥**

"ನ ಕೇವಲಮೃಷ್ಯಾದೀನಾಂ ನಾಮ ಭಗವತಃ ಸರ್ವೇ ವೇದಾ ಅಪಿ ತಸ್ಯೈವ ನಾಮ ಕಿಮು ಚ ವೇದಾಃ ಸಮುದ್ರಘೋಷವೃಕ್ಷಪತನಭೇರೀತಾಡನಾದಿಸರ್ವಘೋಷಾ ಅಪಿ ತಸ್ಯೈವ ನಾಮಾನಿ ಯಥಾಯೋಗ್ಯಂ ಯೋಜನೀಯಾನಿ" "ಕೇವಲ ಋಷಿವಾಚಕ ಪದಗಳಷ್ಟೇ ಭಗವಂತನ ಹೆಸರುಗಳಲ್ಲ. ವೇದದಲ್ಲಿರುವ ಸಕಲ ಶಬ್ದಗಳು ಕೂಡ ಭಗವಂತನ ಹೇಸರೆ ಆಗಿವೆ. ಹೀಗಿರುವಾಗ ಸಮುದ್ರದ ಶಬ್ದ, ಮರಬೀಳುವ ಶಬ್ದ, ನಗಾರಿಯ ಶಬ್ದ, ಮೊದಲಾದ ಧ್ವನ್ಯಾತ್ಮಕಶಬ್ದಗಳು ಭಗವಂತನ ನಾಮಗಳಾಗಿವೆ. ಅವನ ಆಯಾ ಗುಣಗಳಿಗೆ ಅನುಸಾರಿಯಾಗಿ ಆಯಾ ಧ್ವನಿಗಳನ್ನು ಅರ್ಥೈಸಬೇಕು" ಎಂಬುದರಲ್ಲಿ ಸಂದೇಹವೇ ಇಲ್ಲ. ಹೀಗೆ ಐತರೇಯ ಭಾಷ್ಯದಲ್ಲಿ ಹೇಳಿದ್ದಾರೆ. ಅದಕ್ಕೆ ಅನುಗುಣವಾಗಿ ಶ್ರುತಿಯು ಅರ್ಥವನ್ನು ಟೀಕೆಯಲ್ಲಿ 'ಯಾಸ್ತಾಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

ಪ್ರಥಮಾಂತವಾಗಿ ಏಕೆ ವ್ಯಾಖ್ಯಾನ ಮಾಡಿರುವರು ?

**भावदीपः – व्याहर्तव्यं तच्च विष्णुरेवेति ॥ यद्यप्यैतरेयभाष्ये एकमेव व्याहरणं एकमेव नाम निर्दोषगुणपूर्तिवाचित्वादेकप्रकारता । प्राणे नारायण एव नारायणविषय एव व्यवहार इति प्राणपदं सप्तम्यन्तं कृत्वा योजितम्। तथापि प्रथमान्तमुपेत्य व्याख्यानान्तरमेतदित्यदोषः ।**

"ವ್ಯಾಹರ್ತವ್ಯಂ ತಚ್ಚ ವಿಷ್ಣುರೇವೇತಿ" ಎಂಬುದಾಗಿ ಟೀಕೆಯಲ್ಲಿ ಪ್ರಥಮಾಂತವಾಗಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಐತರೇಯ ಭಾಷ್ಯದಲ್ಲಿ "ಏಕಮೇವ ವ್ಯಾಹರಣಂ ಏಕಮೇವ ನಾಮ ನಿರ್ದೋಷ-ಗುಣಪೂರ್ತಿವಾಚಿತ್ವಾದೇಕಪ್ರಕಾರತಾ । ಪ್ರಾಣೇ ನಾರಾಯಣ ಏವ ನಾರಾಯಣವಿಷಯ ಏವ ವ್ಯಾವಹಾರ" ಐತರೇಯಭಾಷ್ಯದಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - "ಏಕೈವವ್ಯಾಹೃತಿಃ" ಎಂದರೆ ಒಂದೇ ವ್ಯವಹಾರ ಒಂದೇ ರೀತಿಯ ಹೆಸರು. ಈ ಎಲ್ಲಾ ಶಬ್ದಗಳು ಭಗವಂತನ ನಿರ್ದೋಷಗುಣಪೂರ್ಣತ್ವವನ್ನೇ ಹೇಳುತ್ತವೆ. ಆದ್ದರಿಂದ ಒಂದೇ ರೀತಿಯಾಗಿವೆ. 'ಪ್ರಾಣ ಏವ' ಎಂದರೆ ಪ್ರಾಣನೆನಿಸಿದ ನಾರಾಯಣನ ವಿಷಯದಲ್ಲಿಯೇ ವ್ಯವಹಾರ ಹೊಂದಿವೆ. ('ವ್ಯವಹಾರ' ಶಬ್ದಕ್ಕೆ 'ಹೆಸರು' ಎಂದರ್ಥ). ಹೀಗೆ ಪ್ರಾಣಶಬ್ದವನ್ನು ಸಪ್ತಮ್ಯಂತವಾಗಿ ವಿವಕ್ಷಿಸಿ ಯೋಜನೆ ಮಾಡಿದ್ದಾರೆ. ಆದರೆ ಟೀಕೆಯಲ್ಲಿ ಪ್ರಥಮಾಂತವಾಗಿ ಏಕೆ ವ್ಯಾಖ್ಯಾನ ಮಾಡಿದರು ?

ಉತ್ತರ - ಹೌದು; ಆದರೂ ಇದು ಮತ್ತೊಂದು ವ್ಯಾಖ್ಯಾನವೆಂದು ತಿಳಿಯಬೇಕು.

ಅಲ್ಪಜ್ಞರಿಗೂ ಕೂಡ ವಿಷ್ಣುಗುಣ ಬೋಧಕಗಳು

**भावदीपः – ऋचस्तु विशेषत इन्द्रादिनामवतो विष्णोर्गुणानल्पज्ञानामपि प्रकाशयन्तीति प्राणे नारायण एवेति विद्यादिति तद्भाष्यदिशैवार्थमाह – तत्रर्चस्त्विति ।।१।।**

''ಋಚಸ್ತು ವಿಶೇಷತ ಇಂದ್ರಾದಿನಾಮವತೋ ವಿಷ್ಣೋರ್ಗುಣಾನಲ್ಪಜ್ಞಾನಾಮಪಿ ಪ್ರಕಾಶ್ಯಂತೀತಿ ಪ್ರಾಣೇ ನಾರಾಯಣ ಏವೇತಿ ವಿದ್ಯಾದಿತಿ'' ''ಪ್ರಾಣ ಋಚ ಇತ್ಯೇವ ವಿದ್ಯಾತ್'' ಎಂದರೆ ಋಕ್‌ಗಳು ವಿಶೇಷವಾಗಿ ಇಂದ್ರಾದಿ ನಾಮಗಳಿಂದ ಪ್ರತಿಪಾದ್ಯನಾದ ವಿಷ್ಣುವಿನ ಗುಣಗಳನ್ನು ಅಲ್ಪಜ್ಞರಿಗೂ ಕೂಡ ತಿಳಿಸಿಕೊಡುತ್ತವೆ. ಆದ್ದರಿಂದ ವಿಶೇಷವಾಗಿ ಪ್ರಾಣಪರವಾಗಿವೆ. ನಾರಾಯಣ ಪರವಾಗಿವೆ ಎಂದು ಇದರ ಅರ್ಥ. ಹೀಗೆ ಐತರೇಯ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅದಕ್ಕೆ ಅನುಗುಣವಾಗಿಯೇ ಟೀಕೆಯಲ್ಲಿ ತತ್ರ ಋಚಸ್ತು ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

## ಬ್ರಹ್ಮಸೂತ್ರ

'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – ।। कल्पनोपदेशाच्च मध्वादिवदविरोधः ।। २ ।।**

ಸೂತ್ರಾರ್ಥ - ಮಧುವಿದ್ಯೆಯಲ್ಲಿ 'ಮಧು'ಶಬ್ದವನ್ನು ಹೇಗೆ ಆದಿತ್ಯನಲ್ಲಿ ಪ್ರಯೋಗಿಸಿದ್ದಾರೋ, ಅದರಂತೆ ಸಕಲ ಶಬ್ದಗಳ ಅರ್ಥವನ್ನು ಪರಮಾತ್ಮನಲ್ಲಿ ತೋರಿಸಿ, ಆಯಾ ಶಬ್ದ ಪ್ರತಿಪಾದ್ಯತ್ವವನ್ನು ಐತರೇಯೋಪನಿಷತ್ತಿನಲ್ಲಿ ತೋರಿಸಲಾಗಿದೆ. ಆದ್ದರಿಂದ ಜ್ಯೋತಿಷ್ಟೋಮಾದಿ ಕರ್ಮಗಳು ಸಿದ್ಧವಾಗುವುದಿಲ್ಲ ಎಂಬ ವಿರೋಧಕ್ಕೆ ಅವಕಾಶವಿಲ್ಲ.

ಅರ್ಥ -- ಚ ಶಬ್ದವು ಏವಾರ್ಥದಲ್ಲಿದೆ. ಅಥವಾ ಸಮುಚ್ಚಯಾರ್ಥದಲ್ಲೂ ಇದೆ. ಆದ್ದರಿಂದ 'ಮಧ್ವಾದಿವತ್' = ಯಾವ ರೀತಿಯಾಗಿ ಮಧುವಿದ್ಯೆಯಲ್ಲಿರುವ 'ಮಧು' ಮೊದಲಾದ ಶಬ್ದಗಳು ವಿಷ್ಣುವಾಚಿಯಾಗಿದ್ದರೂ, ಅವಿರೋಧಃ = ಲೋಕಸಿದ್ಧವಾದ ಜೇನಿನಲ್ಲಿ ಶಬ್ದವಿಲ್ಲವೆಂಬ ವಿರೋಧಕ್ಕೆ ಅವಕಾಶವಿಲ್ಲವೋ, ತಥಾ = ಅದೇ ರೀತಿಯಾಗಿ, ಪರಮಾತ್ಮನು ಸರ್ವಶಬ್ದವಾಚ್ಯನೆಂದು ಅಂಗೀಕಾರ ಮಾಡಿದರೂ,

ಜ್ಯೋತಿಷ್ಟೋಮಾದಿ ಕರ್ಮಗಳೇ ಇಲ್ಲದಾಗಬೇಕಾದೀತು ಎಂಬ ವಿರೋಧಕ್ಕೂ ಅವಕಾಶವಿಲ್ಲ. ಏಕೆಂದರೆ ಶಬ್ದಗಳು ಬೇರೆಡೆ ಯೋಗರೂಢಿವೃತ್ತಿಯಿಂದ ಪ್ರಸಿದ್ಧವಾಗಿದ್ದರೂ ಈಶ್ವರನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತದೆಂದು ಅಂಗೀಕರಿಸಿದ್ದರಿಂದ ವಿರೋಧವಿಲ್ಲ. ಇದನ್ನು ಹೇಗೆ ಹೇಳುತ್ತೀರಿ ಎಂದರೆ, ಕಲ್ಪನೋಪದೇಶಾತ್ = 'ಪ್ರಾಣಯಚಃ' ಎಂಬಲ್ಲಿ ವಿಷ್ಣುವೇ ಸರ್ವಶಬ್ದವಾಚ್ಯನಾಗಿದ್ದಾನೆಂದು ವಿಷ್ಣುವಿನಲ್ಲಿ ತೋರಿಸಿ, ಉಪದೇಶಾತ್ = ಸರ್ವಶಬ್ದವಾಚ್ಯತ್ವವನ್ನು 'ತಾ ವಾ ಏತಾಃ' ಎಂಬುದಾಗಿ ಉಪದೇಶ ಮಾಡಿರುವುದರಿಂದ, ಇಂತಹ ಉಪದೇಶವಾದರೂ ಮುಖ್ಯಗುಣವತ್ವವೆಂಬ ಮಹಾಯೋಗವೃತ್ತಿಯನ್ನು ಒಪ್ಪದೇ ಕೊಡುವುದಿಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಪರಮಾತ್ಮ ಪ್ರತಿಪಾದ್ಯನಾದರೂ ಲೌಕಿಕಕರ್ಮಗಳಿಗೆ ಚ್ಯುತಿ ಇಲ್ಲ

**ब्रह्मसूत्रभाष्यम् – मधुविद्यादिवत् सर्वशब्दार्थत्वेन परस्य कल्पनोपदेशान्न कर्मक्रमादिविरोधः ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये ज्योतिरुपक्रमाधिकरणम् ।। २ ।।**

ಅನುವಾದ - 'ಅತೋ ವಾ ಆದಿತ್ಯೋ ದೇವಮಧು' ಇತ್ಯಾದಿ ಮಧುವಿದ್ಯೆಯಲ್ಲಿ 'ಮಧು' ಶಬ್ದವನ್ನು ಸೂರ್ಯಾಂತರ್ಗತನಾದ ವಿಷ್ಣುವಿನಲ್ಲಿ ಪ್ರಯೋಗಿಸಲಾಗಿದೆ. ಆದರೂ ಕೂಡ ಲೋಕಸಿದ್ಧವಾದ ಜೇನು ಎಂಬರ್ಥವನ್ನೇನು ಬಿಟ್ಟಿಲ್ಲ. ಅದರಂತೆ ಪರಮಾತ್ಮನಲ್ಲಿ ಕರ್ಮಾದಿವಾಚಕ ಸಕಲಶಬ್ದಗಳನ್ನು ಸಮನ್ವಯ ಮಾಡಬಹುದು. ಆದರೂ ಕೂಡ ಆಯಾ ಲೌಕಿಕಕರ್ಮಗಳನ್ನು ಕರ್ಮವಾಚಕ ಶಬ್ದಗಳು ಹೇಳುತ್ತವೆ. ಹೀಗೆ ಐತರೇಯ ಶಾಖೆಯಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ ಕರ್ಮಾದಿಗಳೇ ಲೋಪವಾಗಲಿ ಎಂಬ ವಿರೋಧಕ್ಕೆ ಅವಕಾಶವಿಲ್ಲ.

ಪ್ರತಿಪದಾರ್ಥ -- ಜ್ಯೋತಿರಾದಿ ಶಬ್ದವಾಚ್ಯತ್ವವು ಪರಮಾತ್ಮನಲ್ಲಿ ಹೇಗೆ ಬರುತ್ತದೆ? ಹಾಗಾದಲ್ಲಿ ಕರ್ಮಕ್ರಮಾದಿಗಳ ವಿರೋಧ ಬರುತ್ತದಲ್ಲವೇ? ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಅನ್ಯಪರತ್ವವನ್ನು ಒಪ್ಪದಿದ್ದರೆ ಪರಮಾತ್ಮನಲ್ಲಿ ಆಯಾ ಶಬ್ದಗಳಿಗೆ ವ್ಯುತ್ಪತ್ತಿಯೇ ಕೂಡದಿರಬೇಕಾದೀತು. ಈ ಆಶಂಕೆಯನ್ನು ಪರಿಹರಿಸುತ್ತಾ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಮಧುವಿದ್ಯಾದಿವತ್ = ಮಧುವಿದ್ಯೆಯಲ್ಲಿ ಮಧುಶಬ್ದವನ್ನು ಸೂರ್ಯಾಂಗತನಾದ ವಿಷ್ಣುವಿನಲ್ಲಿ ಪ್ರಯೋಗಿಸಿದಂತೆ, ಸರ್ವಶಬ್ದಾರ್ಥತ್ವೇನ = ಸಮಸ್ತ ಶಬ್ದಗಳ ಅರ್ಥವನ್ನು ತೋರಿಸಿ, ಆಯಾ ಶಬ್ದವಾಚ್ಯತ್ವವನ್ನು, ಪರಸ್ಯ = ಪರಮಾತ್ಮನಲ್ಲಿ, ಕಲ್ಪನೋಪದೇಶಾಚ್ಚ = ನಿರ್ಧಾರ ಮಾಡಿರುವುದರಿಂದ, ನ ಕರ್ಮಕ್ರಮಾದಿ ವಿರೋಧಃ = ಕರ್ಮಾದಿಗಳೇ ಲೋಪವಾಗಲಿ ಎಂಬ ವಿರೋಧಕ್ಕೆ ಅವಕಾಶವಿಲ್ಲ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಛಾಂದೋಗ್ಯದಲ್ಲಿ ಮಧುವಿದ್ಯೆಯಂತೆ

**सत्तर्कदीपावलिः –**

**न केवलं व्युत्पत्तिसम्भवात् कर्मक्रमादिविरोधापरिहारः किं तर्हीत्यत आह – कल्पनेत्यादिना । द्व्याख्यरमातिरोवंशाश्रितान्तरिक्षाख्यवायुमध्वरूपरथादित्यमण्डलान्तर्गतस्य भगवतः पञ्चमूर्तेरग्न्यादिप्रधानवस्वादिमधुकरमुखसंस्पर्शेन पञ्चधा विभिन्न ऋगादि सर्ववेदाख्यपुष्पोत्थ यशस्तेज इन्द्रियवीर्यान्नाद्यात्मकमधुरसत्वे कल्पनापि मधुविद्या**

ಕೇವಲ ಶಬ್ದಗಳ ವ್ಯುತ್ಪತ್ತಿಯಿಂದ ಕರ್ಮಕ್ರಮಾದಿಗಳ ವಿರೋಧವು ಪರಿಹಾರವಾಗುವುದಲ್ಲ. ಮತ್ತೇನು ? ಎಂಬುದನ್ನು ಕಲ್ಪನೋಪದೇಶಾಚ್ಚ ಎಂಬ ಸೂತ್ರದಿಂದ ಹೇಳುತ್ತಿದ್ದಾರೆ. ಹೇಗೆ

ಮಧುಶಬ್ದವನ್ನು ಆದಿತ್ಯನಲ್ಲಿ ಪ್ರಯೋಗಿಸಲಾಗಿದೆಯೋ, ಅದರಂತೆ ಸಕಲಶಬ್ದವಾಚ್ಯತ್ವವನ್ನು ಪರಮಾತ್ಮನಲ್ಲಿ ತೋರಿಸಲಾಗಿದೆ ಎಂಬುದು ಸೂತ್ರದ ಅಭಿಪ್ರಾಯ.

'ದ್ಯು' ಎಂಬ ರಮೆಯೇ ತೀರೋಂಶಳಾಗಿದ್ದಾಳೆ. ಅವಳಲ್ಲಿ ಅಂತರಿಕ್ಷ ಎಂಬ ವಾಯುವು ಜೇನುಗೂಡಾಗಿ ಆಶ್ರಿತರಾಗಿದ್ದಾರೆ. ವಾಯು ಆಶ್ರಿತನಾಗಿದ್ದಾನೆ. ಇವನಲ್ಲಿ ಭಗವಂತನು ಅಂತರ್ಯಾಮಿಯಾಗಿ ನೆಲಸಿದ್ದಾನೆ. ಈ ಭಗವಂತನೇ ಸೂರ್ಯಮಂಡಲದಲ್ಲಿ ನೆಲಸಿ ಪಂಚರೂಪಗಳಿಂದ ಎಲ್ಲೆಡೆಯೂ ಐದು ಬಣ್ಣದಲ್ಲಿ ಕಂಗೊಳಿಸುತ್ತಿದ್ದಾನೆ. ಇವನು ಅಗ್ನಿ ಮೊದಲಾದ ಪ್ರಧಾನ ವಸು ಮೊದಲಾದ ದೇವತೆಗಳೆಂಬ ಜೇನುನೊಣಗಳ ಮುಖಸಂಸ್ಪರ್ಶದಿಂದ ಐದುರೂಪಗಳಿಂದ ಕಂಗೊಳಿಸುತ್ತಿದ್ದಾನೆ. ಇವನೇ ಋಗಾದಿ ಸರ್ವವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಋಗಾದಿ ಸರ್ವವೇದಗಳೆಂಬ ಹೂವಿನಿಂದ ಹುಟ್ಟಿದ ಯಶಸ್ಸು, ತೇಜಸ್ಸು, ವೀರ್ಯ ಮೊದಲಾದ ಮಧುರಸ ಸ್ವರೂಪನಾಗಿದ್ದಾನೆ. ಆದ್ದರಿಂದ ಇವನೇ 'ಮಧುವಿದ್ಯೆ' ಎಂದು ಕರೆಸಿಕೊಳ್ಳುತ್ತಾನೆ.

ವಿವರಣೆ - ಛಾಂದೋಗ್ಯೋಪನಿಷತ್ತಿನಲ್ಲಿರುವ ಮಧುವಿದ್ಯೆಯನ್ನು ಯಥಾವತ್ತಾಗಿ ನೀಡಲಾಗಿದೆ (ಸಂಗ್ರಹ)

ಅಸೌ ವಾ ಆದಿತ್ಯೋ ದೇವಮಧು । ತಸ್ಯ ದ್ಯೌರೇವ ತಿರಶ್ಚೀನವಂಶಃ । ಅಂತರಿಕ್ಷಮಪೂಪಃ। ಮರೀಚಯಃ ಪುತ್ರಾಃ।

ಜ್ಞಾನಿಗಳಿಗೆ ಗೋಚರಾಗುವ, ಆದಿತ್ಯನಲ್ಲಿರುವ, ಆದಿತ್ಯನಾಮಕನಾದ ವಿಷ್ಣುವು ದೇವತೆಗಳಿಗೆ ಆಶ್ರಯ ಮತ್ತು ಅಧಿಕವಾದ ಸುಖಾನುಭವಪೂರ್ಣನಾದ್ದರಿಂದ ಮಧುನಾಮಕನಾಗಿರುವನು. ದೇವತೆಗಳಿಗೆ ಜೇನುತುಪ್ಪದಂತೆ ಆಹ್ಲಾದಕನೂ ಆಗಿರುವನು. ದ್ಯುಲೋಕದಲ್ಲಿರುವ, ದ್ಯುನಾಮಕಳಾದ ಲಕ್ಷ್ಮಿಯು ಭಗವಂತನ ಬದಿಯಲ್ಲಿ ಬಗ್ಗಿನಿಂತು ನಮಸ್ಕರಿಸಿ, ಅವನನ್ನು ವಶಪಡಿಸಿಕೊಂಡಿರುವಳು. ಆ ಲಕ್ಷ್ಮಿಯು ಜೇನುಗೂಡಿಗೆ ಆಶ್ರಯವಾದ ಅಡ್ಡತೊಲೆಯಂತೆ, ಶ್ರೀಹರಿಯ ಸಾನಿಧ್ಯವುಳ್ಳ ವಾಯುವಿಗೆ ಆಶ್ರಯಳು. ತನ್ನೊಳಗೆ ಶ್ರೀಹರಿಯನ್ನು ಕಾಣುವುದರಿಂದ ಅಂತರಿಕ್ಷನಾಮಕನಾದ, ಅಂತರಿಕ್ಷಲೋಕದಲ್ಲಿರುವ ವಾಯುವು, ಜೇನಿನಂತೆ ಆಹ್ಲಾದಕನಾದ ಶ್ರೀಹರಿಯ ಸನ್ನಿಧಾನ ಪಾತ್ರನಾದ್ದರಿಂದ ಜೇನುಗೂಡಿನಂತೆ, ಜೇನಿನಂಥ ಶ್ರೀಹರಿಯನ್ನು ಪ್ರಕಟಗೊಳಿಸುವುದರಿಂದ ವಸು-ರುದ್ರಾದಿಗಳು ಜೇನುಹುಳುಗಳಂತೆ. ಸೂರ್ಯಕಿರಣಗಳನ್ನಾಶ್ರಯಿಸಿರುವ ಮರೀಚ್ಯಾದಿ ಋಷಿಗಳು ಜೇನುಹುಳುಗಳ ಮರಿಗಳಂತೆ.

ಯ ಆದಿತ್ಯಗತೋ ವಿಷ್ಣುಃ ಸ ಏವ ಮಧುನಾಮಕಃ ।
ಮದಧಿರ್ಮಾಧ್ವಿತಿ ಪ್ರೋಕ್ತೋ ಮದಃ ಸುಖಮಿಹೋಚ್ಯತೇ ।
ಅ ಇತ್ಯಾಧಿಕ್ಯಮುದ್ದಿಷ್ಟಂ ಮದ್ ಜ್ಞಾನತತಿರುಚ್ಯತೇ ।
ತದ್ವತ್ತಾ ತತಿರುದ್ದಿಷ್ಟಾ ತೇನಾನುಭವ ಈರಿತಃ ।
ಅಧಿಕೋಽನುಭವೋ ಯಸ್ಯ ಸರ್ವಸ್ಮಾದೀಪ್ಸಿತಾದಪಿ ।
ಸೋಽಯಂ ಮದ ಇತಿ ಪ್ರೋಕ್ತಃ ಸರ್ವಂ ಹಿ ಸುಖಸಾಧನಮ್ ।
ತತ್ಪೂರ್ಣೋ ಮಧುನಾಮಾ ಸ್ಯಾತ್ ತೃತೀಯೋಽತಿಶಯಾರ್ಥಕಃ ।
ದೇವಾನಾಮುಪಜೀವ್ಯತ್ವಾತ್ ಸ ದೇವಮಧುನಾಮಕಃ ।
ಆದಿತ್ವಾದಾತತತ್ವಾಚ್ಚ ಜ್ಞಾನರೂಪತ್ವತಸ್ತಥಾ ।
ಆದಿತ್ಯ ಇತಿ ಸಂಪ್ರೋಕ್ತಃ ಪ್ರಸಿದ್ಧ ಮಧುವಚ್ಚ ಸಃ ।
ತಿರೋವಂಶಾದಿಸಂಯುಕ್ತೋ ದ್ಯುನಾಮ್ನೀ ಚ ದ್ಯುಸಂಸ್ಥಿತಾ ।
ಪ್ರಕಾಶಾದಿಗುಣೈಃ ಶ್ರೀಸ್ತು ವಾಯೋರಾಶ್ರಯರೂಪತಃ ।
ತಿರೋ ವಂಶ ಇತಿ ಪ್ರೋಕ್ತಾ ಮಧ್ವಪೂಪಸ್ತು ಮಾರುತಃ ।
ತಸ್ಮಿನ್ ಸನ್ನಿಹಿತೋ ವಿಷ್ಣುಃ ವಿಶೇಷೇಣ ಯತಸ್ಸದಾ ।
ಸೋಽಂತರಿಕ್ಷಮಿತಿ ಪ್ರೋಕ್ತಃ ಸ್ವಾಂತಸ್ಸಮ್ಯಗ್ ಹರೀಕ್ಷಣಾತ್ ।
ಅಂತರಿಕ್ಷಸ್ಥಿತಶ್ಚಾಸೌ ವಸ್ವಾದ್ಯಾ ಮಧುಕಾರಿಣಃ ।
ತತ್ಪುತ್ರಾಸ್ತು ಮರೀಚಾದ್ಯಾಃ ಸೂರ್ಯರಶ್ಮಿಷು ಸಂಸ್ಥಿತಾಃ ।
ತಿರ್ಯಕ್‌ಸ್ಥಿತ್ವಾ ವಶೇ ಕುರ್ಯಾತ್ ಯಸ್ಮಾದ್ ದೇವೀ ರಮಾ ಹರಿಂ ।
ಭಕ್ತ್ಯಾ ವಾತಸ್ತಿರೋವಂಶಃ ತಿರ್ಯಕ್ತ್ವಂ ಪ್ರಣತಿಃ ಸ್ಮೃತಾ ।
ತಿರ್ಯಕ್ ಸ್ಥಿತ್ವಾ ಸ್ವಸಂಸ್ಥಂ ತು ವಶೀಕುರ್ಯಾದ್ಯತಸ್ತತಃ ।
ವಂಶಸ್ತಿರಶ್ಚೀನೋಽನ್ಯೋಽಪಿ ಯಸ್ಮಿನ್ ಆಪ್ಯಮುಪಸ್ಥಿತಮ್ ।
ಸೋಽಪೂಪ ಅಪ್ಯೋ ಭಗವಾನ್ ಮಧ್ವಾಜ್ಯಾದಿ ಪ್ರಸಿದ್ಧಗಮ್ ।

ಯಾವ ವಿಷ್ಣುವು ಆದಿತ್ಯನಲ್ಲಿರುವನೋ ಅವನೇ ಮಧುನಾಮಕನು. ಮಧು ಎಂದರೆ ಮದ ಉಳ್ಳವನೆಂದರ್ಥ. ಮದ ಎಂದರೆ ಸುಖ. ಮದ ಶಬ್ದದಲ್ಲಿ ಕೊನೆಯಲ್ಲಿರುವ ಆಕಾರವು ಆಧಿಕ್ಯವನ್ನು ತಿಳಿಸುತ್ತದೆ. ಮ ಎಂದರೆ ಜ್ಞಾನ, ತ್ ಎಂದರೆ ತತಿ, ಜ್ಞಾನತತಿ

ಎಂದರೆ ಜ್ಞಾನವಿಷಯತ್ವ ಎಂದರ್ಥ. ಜ್ಞಾನವೆಂದರೆ ಇಲ್ಲಿ ಸಾಕ್ಷಿಯಿಂದ ಬರುವ ಯಥಾರ್ಥ ಅನುಭವವೇ ವಿವಕ್ಷಿತ. ಆದ್ದರಿಂದ ಒಟ್ಟನಲ್ಲಿ, ಎಲ್ಲ ಅಭೀಷ್ಟಕ್ಕಿಂತಲೂ ಅಧಿಕವಾಗಿ ಸಾಕ್ಷಿಯ ಅನುಭವಕ್ಕೆ ಗೋಚರವಾದುದೇ ಮದ ಎಂದಾಯಿತು. ಅಂತಹ ವಸ್ತು ಸುಖವೇ ಆಗಿರುತ್ತದೆ.

ವಿಷಯಪದಾರ್ಥಗಳು ಎಲ್ಲವೂ ಕೇವಲ ಸುಖಸಾಧನವೇ ಹೊರತು ಸುಖದಂತೆ ಅತ್ಯಂತ ಅಭೀಷ್ಟವಲ್ಲ. 'ಮದಧಿ' ಅಂದರೆ ಸುಖಪೂರ್ಣನಾದವನೇ ಮಧು ಎನಿಸುವನು. ಮದಧಿ ಶಬ್ದದಲ್ಲಿ ದ ಎಂಬ ಅಕ್ಷರ ಲೋಪವಾಗುತ್ತದೆ. ಮತ್ತು ಇಕಾರಕ್ಕೆ ಉಕಾರದೇಶ ಬಂದಿದೆ. ಇ ಈ ಉ ಎಂಬ ಕ್ರಮದಲ್ಲಿ ಮೂರನೆಯದಾದ ಉ ವರ್ಣವು ಅತಿಶಯಾರ್ಥಕ. ಅದು ಮಧು ಶಬ್ದದಲ್ಲಿರುವುದರಿಂದ ಸುಖಪೂರ್ಣ ಎಂದರ್ಥ ದೊರೆಯುವುದು. ದೇವತೆಗಳಿಗೆ ಆಶ್ರಯನೂ ಆದ್ದರಿಂದ ವಿಷ್ಣುವು ದೇವಮಧು ಎನಿಸುವನು. ಎಲ್ಲರಿಗೂ ಆದಿ, ವ್ಯಾಪ್ತ ಮತ್ತು ಜ್ಞಾನ ಸ್ವರೂಪನಾದ್ದರಿಂದ ಆದಿತ್ಯನೆನಿಸುತ್ತಾನೆ. ಮಧುಶಬ್ದ ಪ್ರಯೋಗವಿರುವುದರಿಂದ ಜೇನಿನ ಸಾದೃಶವೂ ವಿವಕ್ಷಿತವೆ. ಆದ್ದರಿಂದ ಜೇನುತುಪ್ಪವು ಜೇನುಗೂಡು, ಅಡ್ಡತೊಲೆ ಮೊದಲಾದವುಗಳಿಂದ ಕೂಡಿರುವಂತೆ ವಿಷ್ಣುವೂ ಲಕ್ಷ್ಮೀಯೇ ಮೊದಲಾದವರಿಂದ ಕೂಡಿರುವನು. ಪ್ರಕಾಶಾದಿ ಗುಣಗಳಿರುವುದರಿಂದ ದ್ಯುನಾಮಕಳಾದ, ದ್ಯುಲೋಕದಲ್ಲಿರುವ ಲಕ್ಷ್ಮಿಯು ಜೇನುಗೂಡಿನಂತಿರುವ ವಾಯುವಿಗೆ ಆಶ್ರಯಳಾದ ಪ್ರಯುಕ್ತ ಅಡ್ಡತೊಲೆಯಂತೆ, ವಿಷ್ಣುವು ವಿಶೇಷವಾಗಿ ವಾಯುದೇವರಲ್ಲಿ ಸದಾ ಸನ್ನಿಹಿತನಾಗಿರುವುದರಿಂದ ವಾಯುವು ಜೇನುಗೂಡಿನಂತೆ. ಆ ವಾಯುವು ತನ್ನೊಳಗೆ ಶ್ರೀಹರಿಯನ್ನು ಚೆನ್ನಾಗಿ ನೋಡುವುದರಿಂದ ಮತ್ತು ಅಂತರಿಕ್ಷಲೋಕದಲ್ಲಿರುವುದರಿಂದ ಅಂತರಿಕ್ಷನಾಮಕ, ವಸುರುದ್ರಾದಿತ್ಯರು ಮಧುವನ್ನುಂಟುಮಾಡುವ ಹುಳುಗಳಂತೆ, ಸೂರ್ಯಕಿರಣಗಳಲ್ಲಿರುವ ಮರೀಚಿ ಮೊದಲಾದ ಋಷಿಗಳು ಜೇನುನೊಣಗಳ ಮರಿಗಳಂತೆ.

ಲಕ್ಷ್ಮೀದೇವಿಯು ಭಕ್ತಿಯಿಂದ ಬಾಗಿ ನಿಂತು ಶ್ರೀಹರಿಯನ್ನು ವಶೀಕರಿಸುವುದರಿಂದ 'ತಿರಶ್ಚೀನವಂಶ' ಎನಿಸುವಳು. ಬಾಗಿನಿಲ್ಲುವುದೆಂದರೆ ನಮಸ್ಕಾರ. ಅಡ್ಡತೊಲೆಯೂ ಸಹ ಜೇನುಗೂಡಿನಲ್ಲಿ ಅಡ್ಡವಾಗಿ ನಿಂತು ಅದನ್ನು ತನ್ನ ವಶದಲ್ಲಿಟ್ಟುಕೊಳ್ಳುವುದರಿಂದಲೇ ತಿರಶ್ಚೀನವಂಶ ಎನಿಸುವುದು. 'ಅಪ್' ಎಂದರೆ ಆಪ್ಯ. ಮುಕ್ತಪ್ರಾಪ್ಯನಾದ ವಿಷ್ಣುವು ವಾಯುದೇವನಲ್ಲಿ 'ಉಪ' ಸಮೀಪದಲ್ಲಿಯೇ ಸ್ಥಿತನಾಗಿರುವುದರಿಂದ ವಾಯುವು ಅಪೂಪನೆನಿಸುವನು. ಜೇನುಗೂಡಿನಲ್ಲಿರುವ ಜೇನುತುಪ್ಪವೂ ನೀರಿನ ಪರಿಣಾಮವಾದುದರಿಂದ ಆಪ್ಯ, ಆದ್ದರಿಂದ ಜೇನುಗೂಡು ಅಪೂಪವೆಂದು ಪ್ರಸಿದ್ಧವಾಗಿದೆ.

ತಸ್ಯ ಯೇ ಪ್ರಾಂಚೋ ರಶ್ಮಯಃ ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಃ । ಋಚ ಏವ ಮಧುಕೃತಃ । ಋಗ್ವೇದ ಏವ ಪುಷ್ಪಂ । ತಾ ಅಮೃತಾ ಆಪಃ । ತಾ ವಾ ಏತಾಋಚಃ

ಏತಮೃಗ್ವೇದಮಭ್ಯತಪನ್ । ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ । ತದ್ ವ್ಯಕ್ಷರತ್ । ತದಾದಿತ್ಯಮಭಿತೋಽಶ್ರಯತ್ । ತದ್ವಾ ಏತತ್ ಯದೇತದಾದಿತ್ಯಸ್ಯ ರೋಹಿತಂ ರೂಪಮ್ ।

ಸೂರ್ಯನ ಪೂರ್ವದಿಕ್ಕಿನ ಕಿರಣಗಳು ಜೇನುಗೂಡಿನ ಪೂರ್ವಭಾಗದಲ್ಲಿರುವ ಮಧುಛಿದ್ರಗಳಂತೆ ಇರುವುವು. ಆ ಕಿರಣಗಳಲ್ಲಿರುವ ರಶ್ಮಿನಾಮಕ ಭಗವದ್ರೂಪಗಳು ಮಧುನಾಡೀ ಎನಿಸುತ್ತವೆ. ಏಕೆಂದರೆ ಈ ರೂಪಗಳ ಅನುಗ್ರಹವಿಲ್ಲದೇ ಉಪಾಸಕನು ಸುಖಪೂರ್ಣನಾದ ಶ್ರೀಹರಿಯ ಮೂಲರೂಪವನ್ನು ಹೊಂದಲಾರ. ಋಗ್ವೇದಾಭಿಮಾನಿಗಳಾದ ಮತ್ತು ಪ್ರಾತಃಸವನದಲ್ಲಿ ವಿಶೇಷಪೂಜ್ಯರೂ ಆದ ಅಷ್ಟವಸುಗಳು ಮಧುನಾಮಕ ಪರಮಾತ್ಮನನ್ನು ಪ್ರಕಟಿಸುವುದರಿಂದ ಜೇನನ್ನು ತಯಾರಿಸುವ ಜೇನುಹುಳುಗಳಂತೆ, ಋಗ್ವೇದವು ಪುಷ್ಪ ಅಂದರೆ, ಜ್ಞಾನಕ್ಕೆ ಪೋಷಕ. ಅದು ಪ್ರಸಿದ್ಧವಾದ ಹೂವಿನಂತೆ. ಋಗ್ವೇದದ ಮಂತ್ರಗಳು ಹೂವಿನೊಳಗಿರುವ ಮಕರಂದ ರಸದಂತೆ. ಆ ಮಂತ್ರಗಳೂ ನಿತ್ಯವಾದುದರಿಂದ ಅಮೃತ ಎಂದೂ, ದೇವತೆಗಳಿಂದ ಚೆನ್ನಾಗಿ ಅಧ್ಯಯನ ಮಾಡಲ್ಪಡುವ ಕಾರಣ ಆಪಃ ಎಂದೂ ಹೇಳಲ್ಪಡುತ್ತವೆ. ಜೇನುಹುಳುಗಳು ಮಕರಂದ ರಸವನ್ನು ಪಾನಮಾಡುವಂತೆ, ಋಗ್ವೇದಾಭಿಮಾನಿಗಳಾದ ವಹ್ನಿ ಮತ್ತು ವಸುಗಳು ಋಗ್ವೇದವನ್ನು ಚೆನ್ನಾಗಿ ಅಧ್ಯಯನ ಮಾಡಿದರು. ಅಧ್ಯಯನ ಮಾಡಿದಾಗ ಆ ವೇದದಿಂದ ಜ್ಞಾನಾನಂದಾತ್ಮಕನಾದ, ಪ್ರಕಾಶರೂಪನಾದ, ಪರಮೈಶ್ವರ್ಯರೂಪನಾದ, ಸರ್ವಾನುಗ್ರಹಶಕ್ತನಾದ, ಬಲರೂಪನಾದ, ಶ್ರೇಷ್ಠನಾದ ವಾಸುದೇವನು, ಪುಷ್ಪದಿಂದ ಪ್ರಸಿದ್ಧ ಮಧುವಿನಂತೆ ಪ್ರಕಟಗೊಂಡನು. ಸಿದ್ಧಗೊಂಡ ಜೇನುತುಪ್ಪವು ಜನುಗಿ ಜೇನುಗೂಡಿನ ಛಿದ್ರಗಳಲ್ಲಿ ಸಂಚಿತವಾಗುವುದು. ಅದರಂತೆ ಜ್ಞಾನಾನಂದಾದಿಗುಣಪೂರ್ಣನಾದ ಆ ವಾಸುದೇವನು ದೇವತೆಗಳಿಗೆ ಧರ್ಮ-ಮೋಕ್ಷಾದಿಗಳನ್ನು ಕೊಟ್ಟು ಸೂರ್ಯನ ಪೂರ್ವದಿಕ್ಕನ ಕಿರಣಗಳಲ್ಲಿ ನೆಲಸಿದನು. ಅವನೇ ಸೂರ್ಯನ ಕೆಂಪುವರ್ಣದಲ್ಲೂ ಇರುವನು.

ಪ್ರಾಚ್ಯರಶ್ಮಿಷು ಸಂಸ್ಥಸ್ತು ರತಿಶಂಮಾನರೂಪತಃ ।
ಪ್ರಾಚ್ಯರಶ್ಮಿರಿತಿ ಪ್ರೋಕ್ತೋ ವಾಸುದೇವಾಭಿದೋ ಹರಿಃ ।
ಏತದ್ವಿನಾ ನಾಲಮಿತಿ ನಾಡೀತ್ಯಂತ ಉದಾಹೃತಃ ।
ಸ್ವರೂಪಾಂಶೈರ್ವಿನಾ ಪ್ರಾಪ್ತುಂ ನಾಲಂ ಹಿ ಪ್ರಾಪಿತಾಂಶಿನಮ್ ।
ಋಗ್ವೇದಮಾನಿನಶ್ಚೈವ ವಹ್ನ್ಯಾದ್ಯಾ ವಸವಸ್ತ್ವೃಚಃ ।
ಅರ್ಚ್ಯತ್ವಾತ್ ಪ್ರಥಮಂ ಚೈವ ವಿಶೇಷಾದ್ ಯಜ್ಞದೇವತಾಃ ।

ಸೂರ್ಯಮಂಡಲದ ಪೂರ್ವದಕ್ಕಿನ ಕಿರಣಗಳಲ್ಲಿರುವ ವಾಸುದೇವನು ಕ್ರೀಡೆ, ಸುಖ ಮತ್ತು ಜ್ಞಾನಸ್ವರೂಪನಾದ್ದರಿಂದ ರಶ್ಮಿ ಎನಿಸುವನು. 'ಏತದ್ ವಿನಾ ನ ಅಲಂ' ಎಂಬ

ಅರ್ಥದಲ್ಲಿ ನಾಡೀಶಬ್ದವಿರುವುದರಿಂದ ಅಂಶರೂಪಗಳು ನಾಡೀ ಎನಿಸಿವೆ. ವಾಸುದೇವಾದಿ ಸ್ವರೂಪಾಂಶಗಳ ಅನುಗ್ರಹವಿಲ್ಲದೆ ಉಪಾಸಕನು ಮೂಲರೂಪವನ್ನು ಹೊಂದಲಾರನಷ್ಟೇ! 'ಋಚ ಏವ ಮಧುಕೃತಃ' ಇತ್ಯಾದಿ ವಾಕ್ಯಗಳಲ್ಲಿ ಋಗ್ವೇದಾಭಿಮಾನಿಗಳಾದ ಅಗ್ನಿಯೇ ಮೊದಲಾದ ಋಕ್ ಎಂದು ವಿವಕ್ಷಿತರಾಗಿದ್ದಾರೆ. ಮಂತ್ರಗಳಲ್ಲ ಅಗ್ನ್ಯಾದಿ ವಸುಗಳು ಪ್ರಾತಃ ಸವನದಲ್ಲಿ ವಿಶೇಷವಾಗಿ ಅರ್ಚಿತರಾದ್ದರಿಂದ ಅವರು ಋಕ್ ಶಬ್ದವಾಚ್ಯರಾಗಿದ್ದಾರೆ.

ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯಃ। ಯಜೂಂಷ್ಯೇವ ಮಧುಕೃತಃ । ಯಜುರ್ವೇದ ಏವ ಪುಷ್ಪಂ । ತಾ ಅಮೃತಾ ಆಪಃ । ತಾನಿ ವಾ ಏತಾನಿ ಯಜೂಂಷಿ ಏತಂ ಯಜುರ್ವೇದಮಭ್ಯತಪತ್ । ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ । ತದ್ ವ್ಯಕ್ಷರತ್ । ತದಾದಿತ್ಯಮಭಿತೋಽಶ್ರಯತ್ । ತದ್ ವಾ ಏತದ್ ಯದೇತದಾದಿತ್ಯಸ್ಯ ಶುಕ್ಲಂ ರೂಪಮ್ ।

ಸೂರ್ಯನ ದಕ್ಷಿಣ ದಿಕ್ಕಿನ ಕಿರಣಗಳು ಜೇನುಗೂಡಿನ ದಕ್ಷಿಣ ಭಾಗದ ಮಧುನಾಡಿಗಳಂತೆ, ಆ ಕಿರಣಗಳಲ್ಲಿ ರಶ್ಮಿ ಎಂಬ ಹೆಸರಿನ ಸಂಕರ್ಷಣ ರೂಪಗಳು ಇರುವವು. ಆ ರೂಪಗಳೂ ಮಧುನಾಡಿ ಎನಿಸುತ್ತವೆ. ಯಜುರ್ವೇದಾಭಿಮಾನಿಗಳಾದ ಏಕಾದಶ ರುದ್ರನು ಜೇನುಹುಳುಗಳಂತೆ. ಅವರು ಭಗವಂತನನ್ನು ಪ್ರಕಟಗೊಳಿಸುವವರು. ಯಜುರ್ವೇದವು ಪುಷ್ಪದಂತೆ. ಅದರ ಮಂತ್ರಗಳು ಮಕರಂದ ರಸದಂತೆ. ಆ ಮಂತ್ರಗಳು ಅಮೃತ ಎಂದೂ, 'ಅಪ್' ಎಂದೂ ಹೇಳಲ್ಪಡುತ್ತವೆ. ಯಜುರ್ವೇದಾಭಿಮಾನಿಗಳಾದ 'ಯಜುಸ್' ಎನಿಸಿದ ಏಕಾದಶ ರುದ್ರರು ಯಜುರ್ವೇದವನ್ನು ಅಧ್ಯಯನ ಮಾಡಿದರು. ಅದರಿಂದ ಜ್ಞಾನಾನಂದಾತ್ಮಕನೂ, ಪ್ರಕಾಶರೂಪನೂ, ಪರಮೈಶ್ವರ್ಯಸ್ವರೂಪನೂ, ಸರ್ವಾನುಗ್ರಹಶಕ್ತನೂ, ಬಲರೂಪನೂ, ಶ್ರೇಷ್ಠನೂ ಆದ ಸಂಕರ್ಷಣನು ಪ್ರಕಟನಾದ. ಅವನೇ ದೇವತೆಗಳಿಗೆ ಧರ್ಮ-ಮೋಕ್ಷಾದಿಗಳನ್ನು ದಯಪಾಲಿಸಿದ. ಅವನು ಸೂರ್ಯನ ದಕ್ಷಿಣದ ಕಿರಣಗಳಲ್ಲಿರುವನು. ಆ ಸಂಕರ್ಷಣನೇ ಸೂರ್ಯನ ಶುಕ್ಲರೂಪದಲ್ಲೂ ಇರುವನು.

ಇಂದ್ರಾದ್ಯಾ ಯಜುರುದ್ದಿಷ್ಟಾ ರುದ್ರಾ ಇಂದ್ರಸಖಾ ಯತಃ।
ಇಂದ್ರಶಬ್ದೋದಿತೋ ವಾಯುಃ ಸ ಯಾಜ್ಯಃ ಸೋಮಭುಕ್ ಪುರಃ।
ಸ ಹಿ ಶಂಕರಪೂರ್ವಾಣಾಂ ರುದ್ರಾಣಾಂ ಮುಖ್ಯ ಏವ ಚ।

ಯಜ್ಞದೇವತೆಗಳಾದ್ದರಿಂದ ಇಂದ್ರನೇ ಮೊದಲಾದ ರುದ್ರರು ಯಜುಸ್-ಶಬ್ದವಾಚ್ಯರಾಗಿದ್ದಾರೆ. ರುದ್ರರು ಇಂದ್ರನ ಸ್ನೇಹಿತರಾದ್ದರಿಂದ ಇಂದ್ರನೂ ರುದ್ರರಲ್ಲಿ ಸೇರುವನು. ಈ ಇಂದ್ರನೆಂದರೆ ವಾಯುವೇ ಹೊರತು ಪುರಂದರನಲ್ಲ. ಮಾಧ್ಯಂದಿನಸವನದಲ್ಲಿ

ಸೋಮಪಾನ ಮಾಡುವ ರುದ್ರರಿಗಿಂತ ಪೂರ್ವದಲ್ಲಿ ವಾಯುವೇ ಪೂಜಿಸಲ್ಪಡುವುದರಿಂದ ಆ ವಾಯುವೇ ಇಂದ್ರಶಬ್ದದಿಂದ ವಿವಕ್ಷಿತ, ಉಪನಿಷತ್ತಿನಲ್ಲಿಯೇ ಮುಂದೆ 'ರುದ್ರಾ ಉಪಜೀವಂತಿ ಇಂದ್ರೇಣ ಮುಖೇನ' ಎಂಬಲ್ಲಿ, ರುದ್ರರಲ್ಲಿ ಇಂದ್ರ ಮುಖ್ಯನೆಂದು ಹೇಳುವುದರಿಂದ, ಶಂಕರನೇ ಮೊದಲಾದ ರುದ್ರರಿಗಿಂತ ಮುಖ್ಯನಾದವನು ವಾಯುವೇ, ಆದ್ದರಿಂದ ಇಲ್ಲಿ ಇಂದ್ರಪದದಿಂದ ವಾಯುವೇ ವಿವಕ್ಷಿತ.

ಅಥ ಯೇಽಸ್ಯ ಪ್ರತ್ಯಂಚೋ ರಶ್ಮಯಃ ತಾ ಏವಾಸ್ಯ ಪ್ರತೀಚ್ಯೋ ಮಧುನಾಡ್ಯಃ। ಸಾಮಾನ್ಯೇವ ಮಧುಕೃತಃ। ಸಾಮವೇದ ಏವ ಪುಷ್ಪಂ। ತಾ ಅಮೃತಾ ಆಪಃ। ತಾನಿ ವಾ ಏತಾನಿ ಸಾಮಾನಿ ಏತಂ ಸಾಮವೇದಮಭ್ಯತಪನ್। ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ। ತದ್ ವ್ಯಕ್ಷರತ್। ತದಾದಿತ್ಯಮಭಿತೋಽಶ್ರಯತ್। ತದ್ವಾ ಏತದ್ ಯದೇತದಾದಿತ್ಯಸ್ಯ ಕೃಷ್ಣಂ ರೂಪಮ್।

ಸೂರ್ಯನ ಪಶ್ಚಿಮ ದಿಕ್ಕಿನ ಕಿರಣಗಳು, ಜೇನುಗೂಡಿನ ಪಶ್ಚಿಮದ ಮಧುನಾಡಿಗಳಂತೆ. ಆ ಕಿರಣಗಳಲ್ಲಿ ರಶ್ಮಿ ಎನಿಸಿದ ಪ್ರದ್ಯುಮ್ನರೂಪಗಳು ಇರುವುವು. ಈ ರೂಪಗಳು ಮಧುನಾಡಿ ಎನಿಸಿವೆ. ಸಾಮನಾಮಕರಾದ, ಸಾಮಾಭಿಮಾನಿಗಳಾದ ಆದಿತ್ಯರು ಜೇನುಹುಳುಗಳಿದ್ದಂತೆ ಅವರು ಭಗವಂತನನ್ನು ಪ್ರಕಟಗೊಳಿಸುವರು. ಸಾಮದೇವು ಪುಷ್ಪದಂತೆ. ಅದರಲ್ಲಿರುವ ಮಂತ್ರಗಳು ಮಕರಂದಕ್ಕೆ ಸಮಾನ. ಅವುಗಳು ಅಮೃತ ಎಂದೂ ಅಪ್ ಎಂದೂ ಹೇಳಲ್ಪಡುತ್ತವೆ. ಸಾಮವೇದಾಭಿಮಾನಿ ಆದಿತ್ಯರು ಸಾಮದೇವನ್ನು ಅಧ್ಯಯನ ಮಾಡಿದರು. ಆದರಿಂದ ಜ್ಞಾನಾನಂದಾತ್ಮಕನೂ, ಪ್ರಕಾಶರೂಪನೂ, ಪರಮೈಶ್ವರ್ಯಸ್ವರೂಪನೂ, ಸರ್ವಾನುಗ್ರಹಶಕ್ತನೂ, ಬಲರೂಪನೂ, ಶ್ರೇಷ್ಠನೂ ಆದ ಪ್ರದ್ಯುಮ್ನನು ಪ್ರಕಟನಾದ. ಆ ಪ್ರದ್ಯುಮ್ನನೇ ದೇವತೆಗಳಿಗೆ ಧರ್ಮ-ಮೋಕ್ಷಾದಿಗಳನ್ನು ಕೊಟ್ಟನು. ಅವನು ಸೂರ್ಯನ ಪಶ್ಚಿಮ ಕಿರಣದಲ್ಲಿರುವನು. ಅವನೇ ಸೂರ್ಯನ ಕಪ್ಪುವರ್ಣದಲ್ಲೂ ಇರುವನು.

ಸಾಮಾನಾಮನ ಆದಿತ್ಯಾಃ ಮಾಸಶಃ ಸಮಭೋಗತಃ।
ಇಂದ್ರೋ ವರುಣ ಉದ್ದಿಷ್ಟೋ ಯಜ್ಞೇಷು ವ್ರಿಯತೇ ಯತಃ।
ಆದಿತ್ಯಾನಾಮಧಿಪತಿಃ ಸ ಹಿ ವಿಷ್ಣುನಿಯೋಜಿತಃ।
ವಿಷ್ಣುಸ್ತೂಪಾಸ್ಯ ರೂಪತ್ವಾತ್ ನೋಪಾಸಕಗಣೇ ಯುತಃ।

ಒಂದೊಂದು ಮಾಸಕ್ಕೆ ಒಬ್ಬೊಬ್ಬರಂತೆ ಸಮವಾದ ಭೋಗ ಉಳ್ಳವರಾದ ಕಾರಣ ಹನ್ನೆರಡು ಮಂದಿ ಆದಿತ್ಯರು ಸಾಮ ಎಂದು ಹೆಸರುಳ್ಳವರಾಗಿದ್ದಾರೆ. ಮುಂದೆ 'ಆದಿತ್ಯಾ ಉಪಜೀವಂತಿ ವರುಣೇನ ಮುಖೇನ' ಎಂಬಲ್ಲಿ ವರುಣನೆಂದರೆ ಪುರಂದರ. 'ವ್ರೀಯತೇ ಇತಿ ವರುಣಃ' ಎಂಬ ವ್ಯುತ್ಪತ್ತಿಯಿಂದ ಯಾಗಗಳಲ್ಲಿ ವರಿಸಲ್ಪಡುವವನಾದ್ದರಿಂದ,

ಅಂದರೆ ಸ್ತುತಿಸಲ್ಪಡುವುದರಿಂದ ಪುರಂದರನೇ ಇಲ್ಲಿ ವರುಣ, ಮತ್ತು ಮೇಲಿನ ವಾಕ್ಯದಲ್ಲಿ, ಆದಿತ್ಯರಲ್ಲಿ ಮುಖ್ಯ ಎಂದು ಹೇಳಿದೆ. ಪುರಂದರನೇ ಆದಿತ್ಯರಲ್ಲಿ ಮುಖ್ಯ ಎಂದು ವಿಷ್ಣುವಿನಿಂದ ನೇಮಿಸಲ್ಪಟ್ಟಿರುವನು. ಆದ್ದರಿಂದ ಇಲ್ಲಿ ಪ್ರಸಿದ್ಧ ವರುಣನಲ್ಲದೇ ಪುರಂದರನೇ ವರುಣಪದದಿಂದ ವಿವಕ್ಷಿತ. ಆದಿತ್ಯರಲ್ಲಿ ಮುಖ್ಯ ವಿಷ್ಣುವಾಗಿದ್ದರೂ, ಅವನು ಉಪಾಸ್ಯನಾಗಿರುವುದರಿಂದ ಪ್ರಕೃತದಲ್ಲಿ ಪ್ರಸ್ತುತವಾದ ಉಪಾಸಕಗಣದಲ್ಲಿ ಅವನು ಸೇರುವುದಿಲ್ಲವಾದ್ದರಿಂದ ಪುರಂದರನನ್ನೇ ಇಟ್ಟುಕೊಳ್ಳಬೇಕು.

ಅಥ ಯೇಽಸ್ಯೋದಂಚೋ ರಶ್ಮಯಃ ತಾ ಏವಾಸ್ಯೋದೀಚ್ಯೋ ಮಧುನಾಡ್ಯಃ। ಅಥರ್ವಾಂಗಿರಸ ಏವ ಮಧುಕೃತಃ । ಇತಿಹಾಸ ಪುರಾಣಂ ಪುಷ್ಪಂ । ತಾ ಅಮೃತಾ ಅಪಃ । ತೇ ವಾ ಏತೇಽಥರ್ವಾಂಗಿರಸ ಏತದಿತಿಹಾಸ ಪುರಾಣಂ ಅಭ್ಯತಪನ್ । ತಸ್ಯಾಭಿ ತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ । ತದ್ ವ್ಯಕ್ಷರತ್। ತದಾದಿತ್ಯಮಭಿತೋಽಶ್ರಯತ್ । ತದ್ ವಾ ಏತದ್ ಯದೇತದಾದಿತ್ಯಸ್ಯ ಪರಃ ಕೃಷ್ಣಂ ರೂಪಮ್ ।

ಸೂರ್ಯನ ಉತ್ತರ ಕಿರಣಗಳು, ಜೇನುಗೂಡಿನ ಉತ್ತರದ ಮಧುನಾಡಿಗಳಂತೆ. ಆ ಕಿರಣಗಳಲ್ಲಿ ರಶ್ಮಿ ಎಂಬ ಹೆಸರಿನಿಂದ ಅನಿರುದ್ಧರೂಪಗಳು ಇರುವವು. ಈ ರೂಪಗಳು ಮಧುನಾಡಿ ಎಂದೆನಿಸಿವೆ.

ಅಥರ್ವವೇದ ಹಾಗೂ ಇತಿಹಾಸ ಪುರಾಣಗಳಿಗೆ ಅಭಿಮಾನಿಗಳಾದ ಅಥರ್ವ. ಅಂಗಿರಸ ಎಂದೂ ಹೆಸರುಳ್ಳ ಚಂದ್ರ ಮತ್ತು ಇತರ ಮರುತ್ ದೇವತೆಗಳು, ಜೇನನ್ನು ಜೇನುಹುಳುಗಳು ಪ್ರಕಟಗೊಳಿಸುವಂತೆ ಭಗವಂತನನ್ನು ಪ್ರಕಟಪಡಿಸುವರು. ಅಥರ್ವವೇದ ಮತ್ತು ಇತಿಹಾಸ ಪುರಾಣಾದಿಗಳು ಪುಷ್ಪವಿದ್ದಂತೆ. ಆ ಅಥರ್ವವೇದ ಮತ್ತು ಇತಿಹಾಸ ಪುರಾಣಾದಿಗಳ ವಚನಗಳು ಮಕರಂದರಸವಿದ್ದಂತೆ. ಇವು ಅಮೃತ ಮತ್ತು ಅಪ್ ಎನಿಸುತ್ತವೆ. ಅಥರ್ವವೇದ ಹಾಗೂ ಇತಿಹಾಸ ಪುರಾಣಗಳ ಅಭಿಮಾನಿಗಳು ಅವುಗಳನ್ನು ಅಧ್ಯಯನ ಮಾಡಿದರು. ಆದ್ದರಿಂದ ಜ್ಞಾನಾನಂದಾತ್ಮಕನೂ ಪ್ರಕಾಶರೂಪನೂ, ಪರಮೈಶ್ವರ್ಯಸ್ವರೂಪನೂ, ಸರ್ವಾನುಗ್ರಹ ಶಕ್ತನೂ, ಬಲರೂಪನೂ, ಶ್ರೇಷ್ಠನೂ ಆದ ಅನಿರುದ್ಧನು ಪ್ರಕಟನಾದ. ಅವನು ದೇವತೆಗಳಿಗೆ ಧರ್ಮ-ಮೋಕ್ಷಾದಿಗಳನ್ನು ಕೊಟ್ಟನು. ಅವನು ಸೂರ್ಯನ ಉತ್ತರ ಕಿರಣಗಳಲ್ಲಿ ನೆಲೆಸಿದನು. ಆ ಅನಿರುದ್ಧನೇ ಸೂರ್ಯನ ಅತಿಶಯವಾದ ಕಪ್ಪುಬಣ್ಣದಲ್ಲಿರುವನು.

ಇತಿಹಾಸ ಪುರಾಣಾನಾಂ ಸೋಮಾದ್ಯಾ ಅಭಿಮಾನಿನಃ।
ಅಥರ್ವಾಂಗಿರಸಾಂ ಚೈವಾಪ್ಯಥರ್ವಾಂಗಿರನಾಮಕಾಃ।
ಅಧರಂ ವರ್ತಯೇಯುಸ್ತೇ ವೃಷ್ಟಿಮಂಗರಸಾಸ್ತಥಾ।
ಮನಸ್ತ್ವಾತ್ ಪ್ರಾಣರೂಪತ್ವಾದ್ ಅಥರ್ವಾಂಗಿರಸಸ್ತತಃ।

ಚಂದ್ರಾದಿದೇವತೆಗಳು ಇತಿಹಾಸ ಪುರಾಣ ಹಾಗೂ ಅಥರ್ವವೇದಗಳಿಗೆ ಅಭಿಮಾನಿಗಳಾಗಿರುವುದರಿಂದ, ಅಥರ್ವಾಂಗಿರಸ ಎಂದು ಹೆಸರುಳ್ಳವರು. ಅವರು ಮಳೆಯನ್ನು ಕೆಳಗೆ ಸುರಿಸುವವರೂ ಮತ್ತು ಅಂಗಗಳಿಗೆ ನಿಯಾಮಕರೂ ಆಗಿರುವುದರಿಂದ 'ಅಧರಂ ವರ್ತಯಂತಿ', ಹಾಗೂ 'ಅಂಗಾನಾಂ ರಸಾಃ' ಎಂಬ ವ್ಯುತ್ಪತ್ತಿಯಿಂದ, ಅಥರ್ವಾಂಗಿರಸ ನಾಮಕರಾಗಿರುವವರು. ಚಂದ್ರನು ಮನಸ್ಸಿಗೆ ನಿಯಾಮಕ. ಇತರ ಮರುತ್ ದೇವತೆಗಳು ಪ್ರಾಣಾಪಾನಾದಿ ರೂಪರಾಗಿರುವರು. ಅಥವಾ ಇಂದ್ರಿಯಾಭಿಮಾನಿಗಳಾಗಿರುವರು. ಆದ್ದರಿಂದ ಚಂದ್ರಾದಿ ದೇವತೆಗಳು ಅಂಗಗಳಿಗೆ ನಿಯಾಮಕರು.

ಅಥ ಯೇಽಸ್ಯೋರ್ಧ್ವಾ ರಶ್ಮಯಃ ತಾ ಏವಾಸ್ಯೋರ್ಧ್ವಾ ಮಧುನಾಡ್ಯಃ । ಗುಹ್ಯಾ ಏವಾದೇಶಾ ಮಧುಕೃತಃ । ಬ್ರಹ್ಮೈವ ಪುಷ್ಪಂ । ತಾ ಅಮೃತಾ ಆಪಃ । ತೇ ವಾ ಏತೇ ಗುಹ್ಯಾ ಆದೇಶಾ ಏತದ್ ಬ್ರಹ್ಮ ಅಭ್ಯತಪನ್ । ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ । ತದ್ ವ್ಯಕ್ಷರತ್ । ತದಾದಿತ್ಯಮಭಿತೋಽಶ್ರಯತ್। ತದ್ವಾ ಏತದ್ ಯದೇತದಾದಿತ್ಯಸ್ಯ ಮಧ್ಯೇ ಕ್ಷೋಭತ ಇವ । ತೇ ವಾ ರಸಾನಾಂ ರಸಾಃ । ವೇದಾ ಹಿ ರಸಾಃ ತೇಷಾಮೇತೇ ರಸಾಃ । ತಾನಿ ವಾ ಏತಾನ್ಯಮೃತಾನಾಮಮೃತಾನಿ । ವೇದಾ ಹ್ಯಮೃತಾಃ ತೇಷಾಮೇತಾನ್ಯಮೃತಾನಿ ।

ಸೂರ್ಯನ ಊರ್ಧ್ವದಿಕ್ಕಿನ ಕಿರಣಗಳು ಜೇನುಗೂಡಿನ ಮೇಲಿನ ಮಧುಛಿದ್ರಗಳಂತೆ, ಆ ಕಿರಣಗಳಲ್ಲಿರುವ ರಶ್ಮಿನಾಮಕ ನಾರಾಯಣರೂಪಗಳು ಮಧುನಾಡಿ ಎನಿಸಿವೆ. ಗೋಪ್ಯವಾದ ವೇದದ ಆದೇಶವನ್ನು ಉಪದೇಶಿಸುವುದರಿಂದ ಗುಹ್ಯಾದೇಶ ಶಬ್ದವಾಚ್ಯರಾದ ಸರ್ವವೇದಾಭಿಮಾನಿ ಋಜುಗಳು ಜೇನುಹುಳುಗಳಿದ್ದಂತೆ. ವೇದರಾಶಿಯೇ ಪುಷ್ಪದಂತೆ. ಅದರೊಳಗಿನ ವಚನಗಳು ಮಕರಂದದ ರಸದಂತೆ. ಆ ವಚನಗಳು ಅಮೃತ ಎಂದೂ ಆಪ್ ಎಂದೂ ಹೇಳಲ್ಪಡುತ್ತವೆ. ಆ ವೇದಾಭಿಮಾನಿಗಳಾದ ಋಜುಗಳು ವೇದರಾಶಿಯನ್ನು ಚೆನ್ನಾಗಿ ಅಧ್ಯಯನ ಮಾಡಿದರು. ಅದರಿಂದ ಜ್ಞಾನಾನಂದಾತ್ಮಕನೂ ಪ್ರಕಾಶರೂಪನೂ ಪರಮೈಶ್ವರ್ಯ ಸ್ವರೂಪನೂ, ಸರ್ವಾನುಗ್ರಹಶಕ್ತನೂ, ಬಲರೂಪನೂ, ಸರ್ವಶ್ರೇಷ್ಠನೂ ಆದ ನಾರಾಯಣನು ಪ್ರಕಟನಾದ. ಅವನು ದೇವತೆಗಳಿಗೆ ಧರ್ಮಮೋಕ್ಷಗಳನ್ನು ವಿತರಿಸಿದ. ಆ ನಾರಾಯಣನು ಸೂರ್ಯನ ಮೇಲ್ಭಾಗದ ಕಿರಣಗಳಲ್ಲಿ ನೆಲೆಸಿದ. ಅವನು ಸೂರ್ಯಮಂಡಲದ ಮಧ್ಯದಲ್ಲಿ ಅಚಲನಾದರೂ ನೋಡುವವರ ದೃಷ್ಟಿಗೆ ಚಲಿಸುವವನಂತೆ ಕಾಣುವನು. ಆ ವಾಸುದೇವಾದಿ ಪಂಚರೂಪಗಳು ಸಾರಗಳಲ್ಲಿ ಸಾರ. ಏಕೆಂದರೆ ಋಗ್ವೇದಾದಿಗಳು ಸಾರಭೂತವಾಗಿವೆ. ಅವುಗಳಿಂದ ಮುಖ್ಯವಾಗಿ ಪ್ರತಿಪಾದ್ಯವಾಗಿರುವುದಿರಂದ ವಾಸುದೇವಾದಿರೂಪಗಳು

ಅವುಗಳಲ್ಲಿ ಸಾರಭೂತವಾಗಿವೆ. ಆಪಂಚರೂಪಗಳು ಅಮೃತದಲ್ಲಿ ಅಮೃತಗಳೂ ಆಗಿವೆ. ಋಗ್ವೇದಾದಿಗಳು ನಿತ್ಯವಾದುದರಿಂದ ಅಮೃತ, ಅವುಗಳಿಗೆ ಅಮೃತತ್ವವನ್ನು ಕೊಟ್ಟಿರುವುದರಿಂದ ವಾಸುದೇವಾದಿ ಪಂಚರೂಪಗಳು ಅಮೃತಗಳಲ್ಲಿ ಅಮೃತ.

> ಗುಹ್ಯಾದೇಶಾ ಬ್ರಹ್ಮಪದೇ ಯೇ ಯೋಗ್ಯಾ ಬ್ರಹ್ಮಣಾ ಸಹ ।
> ಸರ್ವಗುಹ್ಯೋಪದೇಷ್ಟಾರಃ ಸರ್ವೇಷಾಂ ಗುರವೋ ಹಿ ತೇ ।
> ಬ್ರಹ್ಮೇತಿ ಸರ್ವವೇದಾನಾಂ ನಾಮಾನಂತತ್ವತಃ ಸ್ಮೃತಮ್ ।

ಎಲ್ಲರಿಗೂ ಗೋಪ್ಯ ತತ್ತ್ವಗಳನ್ನು ಉಪದೇಶ ಮಾಡಿರುವುದರಿಂದ ಬ್ರಹ್ಮನೂ ಬ್ರಹ್ಮಪದಯೋಗ್ಯರಾದ ಋಜುಗಳೂ ಗುಹ್ಯಾದೇಶರೆನಿಸಿರುವರು, ಋಜುಗಳು ಎಲ್ಲರಿಗೂ ಗುರುಗಳು ಉಪದೇಶಕರೆಂಬುದು ಪ್ರಸಿದ್ಧವೇ ಆಗಿದೆ. ವೇದಗಳು ಅನಂತ ಇರುವುದರಿಂದಲೂ, ಬ್ರಹ್ಮಶಬ್ದವು ಅನಂತತ್ವವನ್ನು ಹೇಳುವುದರಿಂದರೂ, ಬ್ರಹ್ಮ ಎಂದರೆ ವೇದರಾಶಿ ಎಂದರ್ಥ.

> ಋಗ್ವೇದಾದೀಂಸ್ತು ತೇ ದೇವಾಃ ಅಗ್ನ್ಯಾದ್ಯಾಃ ಸಂವ್ಯಚಾರಯನ್ ।
> ಮಧುಬ್ರಹ್ಮವ್ಯಕ್ತಿಕೃತ್ತ್ವಾತ್ ತೇ ವೈ ಮಧುಕೃತಃ ಸ್ಮೃತಾಃ ।
> ಜ್ಞಾನಪೋಷಕರತ್ವಾತ್ತು ವೇದಾಃ ಪುಷ್ಪಾಭಿಧಾಃ ಸ್ಮೃತಾಃ ।
> ಅನ್ಯತ್ರ ಮಧುಕೃತ್‌ಪೋಷಾತ್ ನಿತ್ಯತ್ವಾದಮೃತಾಶ್ಚ ತಾಃ ।
> ವೇದವಾಚಃ ಸುರೈಃ ಪೇಯಾ ಭೋಗ್ಯತ್ವಾದ್ ಆಪ ಈರಿತಾಃ ।
> ವೇದಪಾನಂ ವಿಚಾರಶ್ಚ ಶ್ರವಣಂ ಪಾಠ ಏವ ಚ ।
> ದೇವೈರ್ವಿಚಾರಿತೇಭ್ಯಶ್ಚ ವೇದೇಭ್ಯೋ ವ್ಯಕ್ತತಾಂ ಗತಃ ।
> ಜ್ಞಾನಾನಂದ ಸ್ವರೂಪತತ್ವಾತ್ ಯಶಸ್ತೇಜಃಸ್ವರೂಪಕಃ ।
> ಇಂದ್ರಿಯಂ ಪರಮೈಶ್ವರ್ಯಾದ್ ವೀರ್ಯರೂಪಶ್ಚ ಸರ್ವದಾ ।
> ಸರ್ವಾನುಗ್ರಹಶಕ್ತಿತ್ವಾದ್ ಅನ್ನಾದ್ಯೋ ಬಲರೂಪತಃ ।
> ರಸನಾಮಾ ಚ ಭಗವಾನ್ ............. ।

ಋಗ್ವೇದವೇ ಮೊದಲಾದ ವೇದಗಳಿಗೆ ಅಭಿಮಾನಿಗಳಾದ ಪೂರ್ವೋಕ್ತ ಅಗ್ನ್ಯಾದಿದೇವತೆಗಳು ಆಯಾ ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡಿದರು. ಆ ದೇವತೆಗಳು ಜೇನುತುಪ್ಪಕ್ಕೆ ಸದೃಶವಾದ ಪರಬ್ರಹ್ಮನನ್ನು ಪ್ರಕಟಪಡಿಸುವುದರಿಂದ ಅವರನ್ನು ಮಧುಕರರೆಂದು ಹೋಲಿಸಲಾಗಿದೆ. 'ಪೋಷಯತಿ ಇತಿ ಪುಷ್ಪಂ' ಎಂಬ ವ್ಯುತ್ಪತ್ತಿಯಿಂದ ಜ್ಞಾನಾಭಿವೃದ್ಧಿಗೆ ಕಾರಣವಾದ ವೇದಗಳನ್ನು ಪುಷ್ಪ ಎನ್ನಲಾಗಿದೆ. ಉಪಮಾನದ ವಿವಕ್ಷೆಯ ಪ್ರಕಾರ, ಜೇನುಹುಳುಗಳ ಪೋಷಣೆಗೈಯುವುದರಿಂದ ಪ್ರಸಿದ್ಧ ಹೂಗಳೂ ಪುಷ್ಪ ಎನಿಸುತ್ತದೆ. ನಿತ್ಯವಾದುದರಿಂದ ವೇದವಚನಗಳು ಅಮೃತ. ದೇವತೆಗಳು ಅವುಗಳನ್ನು

ಪಾಲಿಸುವುದರಿಂದಲೂ ಭೋಗಿಸುವುದರಿಂದಲೂ 'ಆ ಪೀಯಂತೇ ಇತಿ ಅಪಃ' ಎಂಬ ನಿರ್ವಚನದಿಂದ ಆ ವೇದವಚನಗಳು 'ಅಪಃ' ಎಂದೆನಿಸಿವೆ. ವೇದಗಳ ಪಾಲನ ಮತ್ತು ಪಾನವೆಂದರೆ ವಿಚಾರ ಶ್ರವಣ ಮತ್ತು ಪಾಠರೂಪವಾದುದು. ದೇವತೆಗಳಿಂದ ವಿಚಾರಿಸಲ್ಪಟ್ಟ ವೇದಗಳಿಂದ ಭಗವಂತ ವ್ಯಕ್ತನಾಗುತ್ತನೆ. ಅವನು ಜ್ಞಾನಾನಂದರೂಪಿಯಾದ್ದರಿಂದ ಅವನನ್ನು ಯಶಃ ಎಂದೂ ತೇಜೋರೂಪನಾದ್ದರಿಂದ ತೇಜಃ ಎಂದು ಪರಮೈಶ್ವರ್ಯಶಾಲಿಯಾದ್ದರಿಂದ ಇದಿ ಪರಮೈಶ್ವರ್ಯೇ ಎಂಬ ಧಾತುವಿನ ಪ್ರಕಾರ ಇಂದ್ರಿಯ ಎಂದೂ, ವೀರ್ಯರೂಪನಾದ್ದರಿಂದ, ವೀರ್ಯಂ ಎಂದೂ, ಸರ್ವಾನುಗ್ರಹಶಕ್ತನಾದ್ದರಿಂದ ಅನ್ನಾದ್ಯ ಎಂದೂ, ಬಲರೂಪಿಯಾದ್ದರಿಂದ ರಸ ಎಂದೂ ಹೇಳಲ್ಪಟ್ಟಿದ್ದಾನೆ.

............ ಸಂಸ್ಥಿತಃ ಸೂರ್ಯಮಂಡಲೇ ।
ವ್ಯಕ್ಷರದ್ ಧರ್ಮಮೋಕ್ಷಾದೀನ್ ದೇವಾನಾಂ ಭಗವಾನ್ ಹರಿಃ ।
ಋಕ್ ಪ್ರೋಕ್ತೋ ಲೋಹಿತಾಕಾರೋ ವಾಸುದೇವಃ ಪರಃ ಪುಮಾನ್ ।
ಸ ಏವ ಸೂರ್ಯ ಲೌಹಿತ್ಯೇ ಪ್ರಾಚ್ಯರಶ್ಮಿಷು ಸಂಸ್ಥಿತಃ ।
ಸಂಕರ್ಷಣಃ ಶುಕ್ಲವರ್ಣೋ ಯಜುರ್ವೇದೋದಿತಃ ಪ್ರಭುಃ ।
ಶುಕ್ಲವರ್ಣೇ ಚ ಸೂರ್ಯಸ್ಯ ದಕ್ಷರಶ್ಮಿಷು ಸಂಸ್ಥಿತಃ ।
ಪ್ರದ್ಯುಮ್ನಃ ಶ್ಯಾಮವರ್ಣಸ್ತು ಸಾಮವೇದೋದಿತಃ ಪ್ರಭುಃ ।
ಪ್ರತ್ಯಗ್‌ರಶ್ಮಿಷು ಸೂರ್ಯಸ್ಯ ಶ್ಯಾಮವರ್ಣೇಽಪಿ ಚ ಸ್ಥಿತಃ ।
ಅನಿರುದ್ಧಃ ಸುನೀಲಶ್ಚ ಇತಿಹಾಸಪುರಾಣೋಃ ।
ಅಥರ್ವವೇದೇ ಚೋಕ್ತಸ್ಸನ್ ಉದಗ್‌ರಶ್ಮಿಷು ಸಂಸ್ಥಿತಃ ।
ಸುಕೃಷ್ಣೇ ಸೂರ್ಯರೂಪೇ ಚ ಮಧ್ಯೇ ನಾರಾಯಣಃ ಪ್ರಭುಃ ।
ಊರ್ಧ್ವರಶ್ಮಿಷು ಸಂಸ್ಥಶ್ಚ ಪ್ರೋದ್ಯದಾದಿತ್ಯಸಪ್ರಭಃ ।
ಮಹಾಮರೀಚಿಪುಂಜೇನ ಚಲತೀವಾಚಲೋಽಪಿ ಸನ್ ।
ಸ ವಾಚ್ಯಃ ಸರ್ವವೇದಾನಾಮೇವಂ ಪಂಚಾತ್ಮಕೋ ಹರಿಃ ।
ವೇದಾನಾಂ ಸಾರಭೂತೋಽಸೌ ವೇದಾನಾಂ ನಿತ್ಯತಾಪ್ರದಃ ।
ಅತೋಽಮೃತಾನಾಮಮೃತೋ ರಸಾನಾಂ ರಸ ಏವ ಚ ।
ಇತಿ ಸಾಮಸಂಹಿತಾಯಾಮ್ ।

ಭಗವಾನ್ ಶ್ರೀಹರಿಯು ಸೂರ್ಯಮಂಡಲದಲ್ಲಿ ನೆಲಸಿದವನಾಗಿ ದೇವತೆಗಳಿಗೆ ಧರ್ಮ-ಮೋಕ್ಷಾದಿಗಳನ್ನು ಕೊಡುವನು. ಋಗ್ವೇದಪ್ರತಿಪಾದ್ಯನಾದ, ಕೆಂಪುಬಣ್ಣದ, ಸರ್ವೋತ್ತಮನಾದ ಆ ವಾಸುದೇವನು ಸೂರ್ಯನ ಕೆಂಪುವರ್ಣದಲ್ಲಿಯೂ ಪೂರ್ವದಿಕ್ಕಿನ

ಕಿರಣಗಳಲ್ಲಿಯೂ ಇರುವನು. ಸರ್ವೋತ್ತಮನೂ, ಯಜುರ್ವೇದ ಪ್ರತಿಪಾದ್ಯನೂ ಆದ ಬಿಳಿ ಬಣ್ಣಸಂಕರ್ಷಣನುಸೂರ್ಯನಶುಕ್ಲವರ್ಣದಲ್ಲಿಮತ್ತುಅವನದಕ್ಷಿಣದಿಕ್ಕಿನಕಿರಣಗಳಲ್ಲಿಯೂ ಇರುವನು. ಸರ್ವೋತ್ಕೃಷ್ಟನೂ, ಸಾಮವೇದಪ್ರತಿಪಾದ್ಯನೂ ಆದ ಕಪ್ಪು ಬಣ್ಣದ ಪ್ರದ್ಯುಮ್ನನು ಸೂರ್ಯನ ಪಶ್ಚಿಮದ ಕಿರಣಗಳಲ್ಲಿ ಮತ್ತು ಅವನ ಅತಿಕಪ್ಪು ಬಣ್ಣದಲ್ಲಿಯೂ ಇರುವನು. ಸರ್ವೋತ್ತಮನಾದ ನಾರಾಯಣನು ಸೂರ್ಯಮಂಡಲದ ಮಧ್ಯದಲ್ಲಿಯೂ, ಸೂರ್ಯನ ಉತ್ತರದ ಕಿರಣಗಳಲ್ಲಿಯೂ ಇರುವನು. ಉದಯಿಸುವ ಸೂರ್ಯನಂತೆ ಪ್ರಭೆಯುಳ್ಳ ಅವನು ನಿಶ್ಚಲನಾದರೂ, ಅತಿಯಾದ ಕಿರಣಗಳ ಸಮೂಹದಿಂದಾಗಿ ನೋಡುವವನ ದೃಷ್ಟಿಗೆ ಚಲಿಸುವವನಂತೆ ತೋರುವನು. ಆ ನಾರಾಯಣನು ಸಮಸ್ತ ವೇದಗಳಿಂದಲೂ ಪ್ರತಿಪಾದ್ಯನು. ಹೀಗೆ ಪಂಚರೂಪಿಯಾದ ಭಗವಂತನು ವೇದಗಳಿಂದ ಮುಖ್ಯಪ್ರತಿಪಾದ್ಯನೂ, ವೇದಗಳಿಗೆ ನಿತ್ಯತ್ವಪ್ರದಾಯಕನೂ ಆಗಿರುವನು. ಆದ್ದರಿಂದ 'ರಸಾನಾಂ ರಸಃ' ಎಂದೂ 'ಅಮೃತಾನಾಂ ಅಮೃತ' ಎಂದೂ ಹೇಳಲ್ಪಡುವನು, ಎಂದು ಸಾಮಸಂಹಿತೆಯಲ್ಲಿದೆ.

ನ ಚ ಅಚೇತನಮಾತ್ರಮುಪಾಸಿತಂ ಪುರುಷಾರ್ಥಪ್ರದಾನಶಕ್ತಮ್ । 'ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾತ್' ಇತಿ ವಾಕ್ಯಶೇಷಾಚ್ಚ ಏತದವಗಮ್ಯತೇ । 'ಯ ಏತಾಮೇವಂ ಬ್ರಹ್ಮೋಪನಿಷದಂ ವೇದೇ'ತಿ ಚ । ಕಥಂ ಚಾಚೇತನೋಪಾಸನಂ ಬ್ರಹ್ಮಾದಿಪದಪ್ರದಂ ಭವತಿ ? 'ನೈವ ತತ್ರ ನ ನಿಮ್ಲೋಚೋ ನೋದಿಯಾಯ ಕದಾಚನ' । 'ಸಕೃದ್ದಿವಾ ಹೈವಾಸ್ಮೈ ಭವತಿ' ಇತ್ಯಾದಿ ಮುಕ್ತಸ್ಯೈವ ಮುಖ್ಯತೋ ಯುಜ್ಯತೇ।

ಹಿಂದಿನ ಮಂತ್ರಗಳಲ್ಲಿ ಬೇರೆಯವರು ವ್ಯಾಖ್ಯಾನ ಮಾಡುವಂತೆ, ಆದಿತ್ಯನಲ್ಲಿರುವ ಜಡವಾದ ಕಪ್ಪುಬಣ್ಣದ ರೂಪವೇ ಮಧುವೆಂದು ಉಪಾಸನೆಗಾಗಿ ಪ್ರತಿಪಾದ್ಯವೆನ್ನುವುದು ಸರಿಯಲ್ಲ. ಚೇತನ ಸಂಬಂಧವಿಲ್ಲದ ಕೇವಲ ಜಡವಸ್ತುವು ಉಪಾಸನೆ ಮಾಡಲ್ಪಟ್ಟು ಫಲವನ್ನು ಕೊಡುವುದರಲ್ಲಿ ಸಮರ್ಥವಲ್ಲ. ಏಕೆಂದರೆ ಮುಂದಿನ ಮಂತ್ರಗಳಲ್ಲಿ ಉಪಾಸಕರಿಗೆ ವಸುರುದ್ರಾದಿಗಳ ಪದಪ್ರಾಪ್ತಿ ರೂಪವಾದ ಪುರುಷಾರ್ಥವನ್ನು ಹೇಳಿದ್ದಾರೆ. ಅದು ಅಸ್ವತಂತ್ರವಾದ ಜಡಕ್ಕೆ ಸರಿಯಾಗುವುದಿಲ್ಲವಾದ ಕಾರಣ, ಹಿಂದಿನ ಮಧುವಿದ್ಯೆಲ್ಲಿ ಚೇತನನಾದ ಪರಬ್ರಹ್ಮನೇ ಪ್ರತಿಪಾದ್ಯನಾಗಿರುವನು.

ಈ ಮಧುವಿದ್ಯಾ ಪ್ರಕರಣದ ಕೊನೆಯಲ್ಲಿ ಜ್ಯೇಷ್ಠಪುತ್ರನಿಗೆ ತಂದೆಯು ಬ್ರಹ್ಮನನ್ನುಪದೇಶಿಸಬೇಕು ಎಂದಿರುವುದರಿಂದಲೂ ಈ ಮಧುವಿದ್ಯೆಯು ಬ್ರಹ್ಮಪರವೆಂದು ತಿಳಿಯುವುದು. 'ಯಾರು ಪರಬ್ರಹ್ಮವಿಷಯಕವಾದ ಈ ರಹಸ್ಯವಿದ್ಯೆಯನ್ನು ತಿಳಿಯುವರೋ' ಎಂದೂ ಇರುವುದರಿಂದ ಮಧುವಿದ್ಯೆಯು ಪರಬ್ರಹ್ಮಪರವೆಂದು ತಿಳಿಯುತ್ತದೆ. ಸಾಧ್ಯಾನಾಮೇವೈಕೋ ಭೂತ್ವಾ ಎಂಬಲ್ಲಿ ಹೇಳಿರುವಂತೆ, ಬ್ರಹ್ಮಪದವೀಪ್ರಾಪ್ತಿರೂಪವಾದ

ಮಹಾಫಲಪ್ರದತ್ವವೂ ಕೂಡ ಅಚೇತನದ ಉಪಾಸನೆಗೆ ಹೇಗೆ ಯುಕ್ತವಾದೀತು ? ಮತ್ತು 'ಪರಬ್ರಹ್ಮನಲ್ಲಿ ಯಾವ ದೋಷಗಳೂ ಇಲ್ಲ. ಅವನಲ್ಲಿ ಉದಯಾಸ್ತಮಯಾದಿ ದೋಷಗಳೂ ಇಲ್ಲ' ಎಂದು ಹೇಳುವುದು ಯುಕ್ತವಾಗಲಾರದು. ಈ ವಿದ್ಯೆಯನ್ನು ಉಪಾಸನೆ ಮಾಡಿದವನಿಗೆ ಯಾವಾಗಲೂ ಹಗಲೇ ಇರುವುದು, ಎಂದು ಮುಂತಾಗಿ ಉದಯಾಸ್ತಮಯಾದಿ ದೋಷವಿಲ್ಲವೆಂದು ಈ ಪ್ರಕರಣದಲ್ಲಿ ಹೇಳಿರುವುದು ಮುಕ್ತನಾದ ಅಧಿಕಾರಿಗೆ ಮುಖ್ಯವಾಗಿ ಯುಕ್ತವಾಗುತ್ತದೆ.

ಯಶಸ್ತೇಜಃ ಇಂದ್ರಿಯವೀರ್ಯಾನ್ನಾದ್ಯರಸತ್ವಂ ಚ ಭಗವಂತಂ ವಿನಾ ಕಸ್ಯ ಮುಖ್ಯತೋ ಯುಜ್ಯತೇ ? "ತಸ್ಯ ನಾಮ ಮಹದ್ ಯಶಃ", "ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನ ವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ" "ರಸೋ ವೈ ಸಃ", "ಸುಖಾತ್ಮಕಂ ಷಡ್ ಗುಣವಿಗ್ರಹಂ ಪರಂ ಹೃದಿ ಸ್ಥಿತಂ ಬ್ರಹ್ಮ ನಿರಂಜನಂ ಸ್ವರುಕ್। ಐಶ್ವರ್ಯವೈರಾಗ್ಯಯಶೋವಿಬೋಧ ವೀರ್ಯಶ್ರಿಯಾ ಪೂರ್ಣಮಹಂ ಪ್ರಪದ್ಯೇ" "ಅಹಂ ತತ್ ತೇಜೋ ರಶ್ಮೀನ್ನಾರಾಯಣಂ ಪುರುಷಂ" ಇತ್ಯಾದೇಶ್ಚ । "ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ ನಾರಾಯಣಃ" ಇತಿ ಚ ॥

ಮತ್ತು, ಜ್ಞಾನಾನಂದಸ್ವರೂಪತ್ವ, ಪ್ರಕಾಶರೂಪತ್ವ, ಪರಮೈಶ್ವರ್ಯರೂಪತ್ವ, ವೀರ್ಯರೂಪತ್ವ, ಸರ್ವಾನುಗ್ರಹಶಕ್ತತ್ವ, ಬಲರೂಪತ್ವ ಹಾಗೂ ಸರ್ವಶ್ರೇಷ್ಠತ್ವಗಳು ಭಗವಂತನಲ್ಲದೆ ಬೇರೆ ಯಾರಲ್ಲಿ ಮುಖ್ಯವಾಗಿ ಇರಲು ಸಾಧ್ಯ ? ಭಗವಂತನಲ್ಲಿ ಈ ಧರ್ಮಗಳಿವೆ ಎನ್ನಲು ಪ್ರಮಾಣವಿದೆ - ಆ ಭಗವಂತನ ಹೆಸರು 'ಮಹತ್ ಯಶಃ' ಎಂಬುದಾಗಿದೆ. ಸಮಗ್ರವಾದ ಸಾಮರ್ಥ್ಯ, ಪರಾಕ್ರಮ, ಯಶಸ್ಸು, ಜ್ಞಾನ, ಸಂಪತ್ತು, ವಿಜ್ಞಾನ ಈ ಆರಕ್ಕೆ 'ಭಗ' ಎಂದು ಹೆಸರು. ಇವುಗಳುಳ್ಳವನು ಭಗವಂತನಾದ ಶ್ರೀಹರಿಯೇ ರಸ, ಎಂದರೆ ಆ ಭಗವಂತನೇ. 'ಸುಖಸ್ವರೂಪನಾದ, ಸಾಮರ್ಥ್ಯ ಮೊದಲಾದ ಆರು ಗುಣಗಳೇ ದೇಹವಾಗಿವುಳ್ಳ ಉತ್ತಮನಾದ, ಹೃದಯದಲ್ಲಿರುವ, ಗುಣಪೂರ್ಣನಾದ, ದೋಷದೂರನಾದ, ಸ್ವಪ್ರಕಾಶನಾದ, ಸಾಮರ್ಥ್ಯ ವೈರಾಗ್ಯ, ಯಶಸ್ಸು, ವಿಜ್ಞಾನ, ವೀರ್ಯ, ಸಂಪತ್ತುಗಳಿಂದ ಪೂರ್ಣನಾದ ನಾರಾಯಣನನ್ನು ಮೊರೆಹೊಂದುವೆನು', ದೋಷದೂರನು, ವ್ಯಾಪ್ತನು, ತೇಜಃಸ್ವರೂಪನು, ಸೂರ್ಯಾದಿಗಳ ಕಿರಣಗಳಿಗೆ ಪ್ರೇರಕನೂ, ಪೂರ್ಣಷಡ್ಗುಣನೂ, ಸೃಷ್ಟಿಯ ಆದಿಕಾಲದಲ್ಲಿ ಪ್ರಾದುರ್ಭೂತನೂ ಆಗಿರುವ ನಾರಾಯಣನನ್ನು' ಎಂಬಿವೇ ಮೊದಲಾದ ಪ್ರಮಾಣಗಳಿರುವುದರಿಂದ, 'ಯಶಸ್ತೇಜಃ' ಇತ್ಯಾದಿಯಾಗಿ ಹೇಳಿದ್ದು ಭಗವಂತನಲ್ಲಿಯೇ ಸಮನ್ವಯವಾಗುತ್ತದೆ. 'ಸೂರ್ಯಮಂಡಲ ಮಧ್ಯದಲ್ಲಿರುವ ನಾರಾಯಣನು ಯಾವಾಗಲೂ ಧ್ಯಾನಮಾಡಲ್ಪಡಬೇಕು' ಎಂದೂ

ಪ್ರಮಾಣ ಇರುವುದರಿಂದ, 'ಭಗವಂತನು ಆದಿತ್ಯಾಂತರ್ಗತನಾಗಿದ್ದಾನೆ. ಆದ್ದರಿಂದ ಆದಿತ್ಯಾಂತರ್ಗತ ಭಗವಂತನು ಮಧು ಸದೃಶನೆಂದು ಉಪಾಸ್ಯನಾಗಿದ್ದಾನೆ' ಎಂದು ನಾವು ವ್ಯಾಖ್ಯಾನ ಮಾಡಿರುವುದೂ ಯುಕ್ತವಾಗುತ್ತದೆ.

ನ ಚಾಚೇತನಸ್ಯೈಶ್ವರ್ಯಾದಿರೂಪತ್ವಂ ಯುಜ್ಯತೇ । ''ಜ್ಞಾನಾತ್ಮಕೋ ಭಗವಾನ್ ಐಶ್ವರ್ಯಾತ್ಮಕೋ ಭಗವಾನ್ ಶಕ್ತ್ಯಾತ್ಮಕೋ ಭಗವಾನ್'' ಇತಿ ಚ ಶ್ರುತಿಃ । ''ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್'' ಇತಿ ಸರ್ವವೇದಪ್ರತಿಪಾದ್ಯತ್ವಂ ಭಗವತ ಉಕ್ತಂ ಭಗವತಾ । ''ಸ ಸರ್ವನಾಮಾ ಸ ಚ ವಿಶ್ವರೂಪಃ ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ ।'' ಇತಿ ಚ । 'ಸರ್ವೇ ವೇದಾ ಯತ್ ಪದಮಾಮನಂತಿ', 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ', 'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ', 'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ' ಇತ್ಯಾದೇಶ್ಚ ।

ಅಚೇತನದಲ್ಲ ತೇಜೋರೂಪತ್ವ ಒಂದು ಪಕ್ಷ ಕೂಡಿದರೂ, ಐಶ್ವರ್ಯಾದಿ ರೂಪತ್ವವು ಸರ್ವಥಾ ಕೂಡುವುದಿಲ್ಲ. ಶ್ರೀಹರಿಯಾದರೆ ಕೂಡುತ್ತದೆ. ಭಗವಂತನು ಜ್ಞಾನಾತ್ಮಕ, ಐಶ್ವರ್ಯಾತ್ಮಕ, ಶಕ್ತ್ಯಾತ್ಮಕ ಎಂದು ಶ್ರುತಿ ಇದೆ. 'ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್' ಎಂಬ ಬ್ರಹ್ಮಸೂತ್ರದಲ್ಲಿ, ಭಗವಾನ್ ಶ್ರೀವೇದವ್ಯಾಸರು ಭಗವಂತನಿಗೇನೆ ಸರ್ವವೇದ ಪ್ರತಿಪಾದ್ಯತ್ವವನ್ನು ನಿರ್ಣಯಿಸಿದ್ದಾರೆ. ಆದ್ದರಿಂದಲೂ ಅಚೇತನವಾದ ಮಧುವು ಈ ವಿದ್ಯೆಯಲ್ಲಿ ಪ್ರತಿಪಾದ್ಯವಲ್ಲ. ''ಆ ಭಗವಂತನು ಸರ್ವನಾಮಗಳುಳ್ಳವನು. ಅವನೇ ಅನೇಕ ರೂಪಗಳುಳ್ಳವನು, ಮಹಾಐಶ್ವರ್ಯವುಳ್ಳ ಪರಿಪೂರ್ಣನಾದ ಆ ಭಗವಂತನು ಪ್ರಸನ್ನನಾಗಲಿ,' 'ಎಲ್ಲ ವೇದಗಳು ಯಾವ ಭಗವಂತನನ್ನು ಹೇಳುತ್ತವೋ', 'ಎಲ್ಲ ಋಕ್ಕುಗಳೂ ಎಲ್ಲ ವೇದಗಳೂ, ಎಲ್ಲ ಧ್ವನಿಗಳೂ ನಾರಾಯಣನಲ್ಲಿಯೇ ನಿರ್ದುಷ್ಟತ್ವ, ಗುಣಪೂರ್ಣತ್ವವನ್ನು ಹೇಳುವ ನಾಮಗಳೇ ಆಗಿವೆ'. 'ವೇದ ರಾಮಾಯಣ ಪುರಾಣ ಹಾಗೂ ಭಾರತ ಇವುಗಳಲ್ಲಿ ಆದಿ ಅಂತ್ಯ ಹಾಗೂ ಮಧ್ಯದಲ್ಲಿ ಎಲ್ಲೆಡೆಯಲ್ಲಿಯೂ ಆ ವಿಷ್ಣುವೇ ಸ್ತುತಿಸಲ್ಪಡುತ್ತಾನೆ', 'ಎಲ್ಲ ನಾಮಗಳೂ ಯಾರನ್ನು ಹೇಳುತ್ತವೋ ಅಂತ ವಿಷ್ಣುವನ್ನು ಸರ್ವೋತ್ತಮನೆನ್ನುತ್ತಾರೆ' ಇತ್ಯಾದಿ ಪ್ರಮಾಣಗಳಿರುವುದರಿಂದಲೂ ಶ್ರೀಹರಿಯೇ ಈ ಮಧುವಿದ್ಯೆಯಲ್ಲಿ ಪ್ರತಿಪಾದ್ಯ.

ಉಪನಿಷತ್ಸ್ವಾಚ್ಚ ವಿಶೇಷತೋ ನ ಯತ್ ಕಿಂಚಿದುಚ್ಯತೇ ಇತಿ ವಕ್ತುಂ ಯುಕ್ತಂ ।
ವಿಷ್ಣುರುಕ್ತಃ ಸರ್ವವೇದೈರ್ಮಂತ್ರೇಷು ತು ವಿಶೇಷತಃ ।
ಆರಣ್ಯಕೇ ವಿಶೇಷೇಣ ನೈವಾನ್ಯತ್ ಕಿಂಚಿದುಚ್ಯತೇ ।

ಕರ್ಮಾರ್ಥಂ ಚ ಬ್ರಾಹ್ಮಣಂ ಸ್ಯಾದ್ ಅಮುಖ್ಯಾರ್ಥವಿವಕ್ಷಯಾ -
ಮುಖ್ಯತೋ ವಿಷ್ಣುರೇವೈಕೋ ಬ್ರಾಹ್ಮಣೇಷ್ವಪಿ ಕಥ್ಯತೇ।
ಅರಣ್ಯಕೇಷು ಋತೇ ವಿಷ್ಣುಂ ನೈವಾನ್ಯತ್ ಕಿಂಚಿದುಚ್ಯತೇ।
ಸೂತ್ರಾತ್ಮಾ ತೂಚ್ಯತೇ ವಿಷ್ಣೋಃ ತದ್ವಿಶಿಷ್ಟತ್ವವಿತ್ತಯೇ।
ಕುತ್ರಚಿತ್ ತದುಪಾಸ್ತಿಶ್ಚ ತಸ್ಯಾಧ್ಯರ್ಥತನುತ್ವತಃ।
ತಸ್ಮಿನ್ ವಿಷ್ಣೋರುಪಾಸ್ತ್ಯರ್ಥಂ ನಾನ್ಯಥಾ ಕಿಂಚಿದುಚ್ಯತೇ।

ಇತಿ ಬ್ರಹ್ಮಾಂಡೇ।

ಯಸ್ಯಾಂ ನ ಮೇ ಪಾವನಮಂಗ ಕರ್ಮ
ಸ್ಥಿತ್ಯುದ್ಭವಪ್ರಾಣ ನಿರೋಧಮಸ್ಯ।
ಲೀಲಾವತಾರೈರ್ಧಿತಕರ್ಮ ವಾ ಸ್ಯಾತ್
ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ।
ವಿತ್ತಂ ತ್ವತೀರ್ಥಿಕೃತಮಂಗ ವಾಚಂ
ಹೀನಾಂ ಮಯಾ ರಕ್ಷತಿ ದುಃಖದುಃಖೀ।
ಯನ್ನ ವ್ರಜಂತ್ಯಘಭಿದೋಽರಚನಾನುವಾದಾಃ।
ಶೃಣ್ವಂತಿ ಯೇಽನ್ಯ ವಿಷಯಾಃ ಕುಕಥಾ ಮತಿಘ್ನೀಃ।
ಯಾಸ್ತು ಶ್ರುತಾ ಹತ ಭಗೈಃ ನೃಭಿರಾತ್ತವೀರ್ಯಾಃ
ತಾನ್ ತಾನ್ ಕ್ಷಿಪಂತ್ಯಶರಣೇಷು ತಮಃಸು ಹಂತ''।

ಇತ್ಯಾದಿ ಭಗವದ್ವಚನಾಚ್ಚ।

''ಸರ್ವಾಸು ಶಾಖಾಸ್ವಾರಣಮಾವರ್ತಯೇದ್ ಆರಣಮಾವರ್ತಯೇದ್
ಉಪನಿಷದಮಾವರ್ತಯೇದ್ ಉಪನಿಷದಮಾವರ್ತಯೇತ್।''
ಇತ್ಯುಪನಿಷದಭ್ಯಾಸಸ್ಯ ಸತಾತ್ಪರ್ಯಂ ವಿಹಿತತ್ವಾತ್ ಅಭಗವದ್ವಿಷಯಸ್ಯ
ನಿಂದಿತತ್ವಾಚ್ಚನೋಪನಿಷತ್ತು ಅನ್ಯದುಚ್ಯತೇ।
ಅಭ್ಯಸೇದಧಿಯಜ್ಞಂ ಚಾಪ್ಯಧಿದೈವಂ ವಿಶೇಷತಃ।
ಆಧ್ಯಾತ್ಮಂ ತು ವಿಶೇಷೇಣ ಯಸ್ಮಾದ್ ವಿಷ್ಣುಸ್ತ್ರಿಷೂದಿತಃ। ಇತಿ ಸ್ಕಾಂದೇ।
ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಇತ್ಯಹಮ್।
ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ ವೇದ ಕಶ್ಚನ।
ಇತ್ಯಾದೇಶ್ಚ ಭಗವದುಪಾಸನಾ ಏವ ಸರ್ವತ್ರೋಕ್ತಾಃ।

ಪ್ರಸ್ತುತವಾದ ಮಧುವಿದ್ಯೆಯು ವಿಶೇಷವಾಗಿ ಉಪನಿಷತ್ ಆದ್ದರಿಂದಲೂ, ಬ್ರಹ್ಮಾತಿರಿಕ್ತವಾದ ಯಾವುದೋ ಒಂದು ವಿಷಯ ಇಲ್ಲಿ ಪ್ರತಿಪಾದ್ಯವಾಗಿದೆ ಎನ್ನುವುದು ಸರಿಯಲ್ಲ.

ಎಲ್ಲ ವೇದಗಳಿಂದ, ವಿಶೇಷವಾಗಿ ಎಲ್ಲ ಮಂತ್ರಗಳಿಂದ ವಿಷ್ಣುವೇ ಪ್ರತಿಪಾದ್ಯ ಉಪನಿಷತ್ತಿನಲ್ಲಿಯೂ ವಿಶೇಷವಾಗಿ ಶ್ರೀವಿಷ್ಣುವೇ ಪ್ರತಿಪಾದ್ಯ , ಹೊರತು ಬೇರೆ ಯಾವುದೋ ವಿಷಯವಲ್ಲ. ಬ್ರಾಹ್ಮಣ ಎಂಬ ವೇದಭಾಗವು ಮಾತ್ರ ಅಮುಖ್ಯಾರ್ಥ ವಿವಕ್ಷೆಯಿಂದ ಕರ್ಮಪ್ರಕ್ರಿಯೆಗಳನ್ನು ತಿಳಿಸುತ್ತದೆ. ಆದರೆ ಮುಖ್ಯವೃತ್ತಿಯಿಂದ ಶ್ರೀವಿಷ್ಣು ಒಬ್ಬನೇ ಬ್ರಾಹ್ಮಣಗಳಿಂದಲೂ ಪ್ರತಿಪಾದ್ಯ . ಉಪನಿಷತ್ತುಗಳಲ್ಲಿ ಶ್ರೀವಿಷ್ಣುವನ್ನು ಬಿಟ್ಟು ಬೇರೆ ಯಾವುದೂ ಪ್ರತಿಪಾದ್ಯವಲ್ಲ. ಆದರೂ ಉಪನಿಷತ್ತಿನಲ್ಲಿ ಕೆಲವು ಕಡೆ ಸೂತ್ರಸ್ವರೂಪನಾದ ವಾಯುವು ಪ್ರತಿಪಾದ್ಯನಾಗಿದ್ದಾನೆ. ಅದು, ವಾಯುವಿಗಿಂತಲೂ ಶ್ರೀಹರಿಯಲ್ಲಿ ಉತ್ತಮತ್ವವನ್ನು ತಿಳಿಸುವ ಉದ್ದೇಶದಿಂದಲೇ ಹೊರತು ಮುಖ್ಯವಾಗಿ ವಾಯುವನ್ನು ಹೇಳುವ ಉದ್ದೇಶದಿಂದಲ್ಲ. ಕೆಲವು ಕಡೆ ವಾಯುದೇವರ ಉಪಾಸನೆಯೇ ವಿಹಿತವಾದದ್ದು ಕಂಡಿದೆ. ಅದೂ ಕೂಡ ಬೇರೆಯವರಿಗಿಂತ ಅತ್ಯಂತ ಉತ್ತಮವಾದ ಪ್ರತಿಮೆಯೆನಿಸಿದ್ದರಿಂದ ವಾಯುವಿನಲ್ಲಿಯೇ ಶ್ರೀಹರಿಯ ಉಪಾಸನೆ ಮಾಡಬೇಕೆಂಬುದನ್ನು ತಿಳಿಸಲು ಹೊರತು ವಾಯುವೇ ಮುಖ್ಯ ಪ್ರತಿಪಾದ್ಯನೆಂದು ಅರ್ಥವಲ್ಲ, ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.

'ಉದ್ಧವ ! ಯಾವ ಮಾತಿನಲ್ಲಿ ಜಗತ್ತಿನ ಸ್ಥಿತಿ, ಸೃಷ್ಟಿ, ಪಾಲನೆ, ಸಂಹಾರ ರೂಪವಾದ ನನ್ನ ಪಾವನ ಕರ್ಮಗಳಾಗಲೀ ಅಥವಾ ಲೀಲಾವತಾರಗಳಲ್ಲಿ ನಾನು ತೋರಿದ ಕರ್ಮಗಳಾಗಲೀ, ವರ್ಣಿಸಲ್ಪಡುವುದಿಲ್ಲವೋ, ಅಂಥ ವ್ಯರ್ಥವಾದ ಮಾತುಗಳನ್ನು ವಿವೇಕಿಯು ಆಡಬಾರದು', 'ಉದ್ಧವ ! ಸತ್ಪಾತ್ರದಲ್ಲಿ ದಾನ ಮಾಡದ ಸಂಪತ್ತನ್ನು ಇಟ್ಟುಕೊಳ್ಳುವವನು ಮತ್ತು ನನ್ನ ವಿಚಾರವಿಲ್ಲದ ಮಾತನ್ನು ಆಡುವವನು ಬಹುದುಃಖವನ್ನು ಅನುಭವಿಸುತ್ತಾನೆ', ಪಾಪಗಳನ್ನು ಕಳೆಯುವ ಶ್ರೀಹರಿಯ ಗುಣಾನುವಾದವಿಲ್ಲದ, ಅನ್ಯವಿಷಯಕವಾದ, ಹತಭಾಗ್ಯಜನರಿಂದಲೇ ಕೇಳಲ್ಪಡುವ, ಶ್ರೋತೃಗಳ ಶಕ್ತಿಯನ್ನು ಹೀರುವ ಆಯಾ ಅಯೋಗ್ಯ ಜನರನ್ನು ಅಂಧಂತಮಸ್ಸಿಗೆ ತಳ್ಳುವ, ತಲೆಕೆಡಿಸುವ ಕೆಟ್ಟಕಥೆಗಳಟ್ಟು ಯಾರು ಕೇಳುತ್ತಾರೋ ಅಂತಹವರಿಂದ ಹೊಂದಲ್ಪಡದಿರುವುದೇ ಶ್ರೀಹರಿಯ ಲೋಕ', ಇತ್ಯಾದಿಯಾಗಿ ಶ್ರೀಕೃಷ್ಣನ ಮಾತಿರುವುದರಿಂದಲೂ, 'ಎಲ್ಲಾ ಶಾಖೆಗಳಲ್ಲಿಯೂ ಅರಣ್ಯಕವನ್ನು ಆವೃತ್ತಿಮಾಡಬೇಕು. ಅರಣ್ಯಕವನ್ನು ಆವೃತ್ತಿ ಮಾಡಬೇಕು' ಉಪನಿಷತ್ತನ್ನು ಆವೃತ್ತಿ ಮಾಡಬೇಕು. ಉಪನಿಷತ್ತನ್ನು ಆವೃತ್ತಿ ಮಾಡಬೇಕು, ಎಂದು ಉಪನಿಷತ್ತಿನ ಅಭ್ಯಾಸವನ್ನು ತಾತ್ಪರ್ಯಪೂರ್ವಕ ವಿಧಿಸಿದ್ದರಿಂದಲೂ,

ಭಗವದ್ವಿಷಯಕವಲ್ಲದ ವಚನಗಳನ್ನು ನಿಂದಿಸಿರುವುದರಿಂದಲೂ ಉಪನಿಷತ್ತುಗಳಲ್ಲಿ ಬೇರೆ ಯಾವ ವಿಷಯವೂ ಮುಖ್ಯಪ್ರತಿಪಾದ್ಯವಲ್ಲ. 'ಯಜ್ಞಾದಿಕರ್ಮಗಳನ್ನು ಪ್ರತಿಪಾದಿಸುವ ಬ್ರಾಹ್ಮಣಗಳು, ದೇವತೆಗಳನ್ನು ವರ್ಣಿಸುವ ಮಂತ್ರಗಳು, ಪರಮಾತ್ಮನನ್ನು ಕುರಿತು ಹೇಳುವ ಆರಣ್ಯಕ ಈ ಮೂರನ್ನು ವಿಶೇಷವಾಗಿ ಅಧ್ಯಯನ ಮಾಡಬೇಕು ಏಕೆಂದರೆ ಈ ಮೂರರಲ್ಲೂ ಶ್ರೀವಿಷ್ಣುವೇ ಹೇಳಲ್ಪಟ್ಟಿದ್ದಾನೆ', ಎಂದೂ ಸ್ಕಾಂದಪುರಾಣದಲ್ಲಿದೆ. ಕರ್ಮಗಳನ್ನು ವಿಧಾನ ಮಾಡುವ ಶ್ರುತಿಯೂ ನನ್ನನ್ನೇ ವಿಧಿಸುತ್ತದೆ. ಇಂದ್ರಾದಿಗಳನ್ನು ಹೇಳುವ ಶ್ರುತಿಯೂ ನನ್ನನ್ನೇ ಹೇಳುತ್ತದೆ. ಚತ್ವಾರಿ ವಾಕ್ ಇತ್ಯಾದಿ ವೇದಗಳಿಂದಲೂ ನಾನೇ ವಿವಿಧರೂಪಗಳಿಂದ ಪ್ರತಿಪಾದ್ಯ, 'ನ ಸುರಾಂ ಪಿಬೇತ್' ಇತ್ಯಾದಿ ಶ್ರುತಿವಾಕ್ಯಗಳಿಂದ ಹೇಳಲ್ಪಟ್ಟ ನಿಷೇಧಕ್ಕೂ ನಾನೇ ವಿಷಯ ಅಂದರೆ ''ಶ್ರೀಹರಿಯ ಗುಣಗಳು ನನಗಿರಲಿ'' ಎಂಬ ಅನುಸಂಧಾನದ ನಿಷೇಧಕ್ಕೆ ನಾನೇ ವಿಷಯ, ಇಂಥ ಶ್ರುತಿಯ ಅಭಿಪ್ರಾಯವನ್ನು ನನ್ನ ಹೊರತು ಯಾರೂ ತಿಳಿಯುವುದಿಲ್ಲ' ಎಂದು ಮೊದಲಾಗಿ ಪ್ರಮಾಣಗಳಿರುವುದರಿಂದ ಎಲ್ಲ ಕಡೆಗಳಲ್ಲಿಯೂ ಭಗವಂತನ ಉಪಾಸನೆಯೇ ಹೇಳಲ್ಪಟ್ಟಿದೆ.

### ಶ್ರೇಷ್ಠನಾದ ಮಹಾವಿಷ್ಣುವೇ ಸರ್ವಶಬ್ದಾರ್ಥ

**ಸತ್ತರ್ಕದೀಪಾವಳಿಃ – ಆದಿಶಬ್ದಾದಿದಂ ತಚ್ಛಿರ ಎಷ ಹ್ಯರ್ವಾಗ್-ಬಿಲಶ್ಚಮಸ ಇತ್ಯಾದಿ। ತದ್ವದೇವ ಸರ್ವೇ ವೇದಘೋಷಾಃ ಸರ್ವದಾ ಯತ್ಪದಮಾಮನಂತಿ ಯಮಿಂದ್ರಮಿತ್ಯಾದಿವಾಕ್ಯೈರಪಿ ಇಂದ್ರಂ ಮಿತ್ರಮಿತ್ಯಾದಿವಾಕ್ಯೈರಪಿ ಜ್ಯೋತಿರಾದಿಕರ್ಮಕ್ರಮಕಾಲಾದಿಪ್ರಸಿದ್ಧಸರ್ವಶಬ್ದಾರ್ಥತ್ವೇನ ಸರ್ವಸ್ಮಾತ್ಪರತ್ವೇನ ಪರಸ್ಯ ಪರಮಾತ್ಮನಃ ಕಲ್ಪನೋಪದೇಶಾತ್ । ನ ಕರ್ಮ ಕ್ರಮಕಾಲಾದ್ಯುಕ್ತ್ಯಾ ಭಗವದ್ವಾಚಕತ್ವವಿರೋಧೋ ಭಗವದುಕ್ತ್ಯಾ ವಾ ಕರ್ಮಕ್ರಮಾದಿವಾಚಕತ್ವವಿರೋಧ ಇತ್ಯರ್ಥಃ ।**

'ಮಧುವಿದ್ಯಾದಿವತ್' ಎಂಬ ಭಾಷ್ಯದಲ್ಲಿ ಆದಿಶಬ್ದವಿದೆ. ಇದರಿಂದ 'ಇದಂ ತಚ್ಛಿರ ಏಷ ಹ್ಯರ್ವಾಗ್-ಬಿಲಶ್ಚಮಸ' ಇತ್ಯಾದಿ ಶ್ರುತಿಯನ್ನೂ ಕೂಡ ವಿವಕ್ಷಿಸಬೇಕು. ಇದರಂತೆ 'ಸಕಲ ಸರ್ವೇ ವೇದಘೋಷಾಃ', 'ಸರ್ವದಾ ಯತ್ಪದಮಾಮನಂತಿ' 'ಯಮಿಂದ್ರಮ್' ಇತ್ಯಾದಿ ವಾಕ್ಯಗಳಿಂದ ಹಾಗೂ 'ಇಂದ್ರಂ ಮಿತ್ರಮ್' ಇತ್ಯಾದಿ ವಾಕ್ಯಗಳಿಂದಲೂ ಜ್ಯೋತಿರಾದಿ ಕರ್ಮಕ್ರಮ ಕಾಲ ಮೊದಲಾದ ಸರ್ವಶಬ್ದಗಳಿಂದ ಸರ್ವಶ್ರೇಷ್ಠನಾಗಿ ಪರಮಾತ್ಮನು ಪ್ರತಿಪಾದ್ಯನಾಗುತ್ತಾನೆ. ಹೀಗೆ ವೇದವು ಹೇಳುತ್ತಿದೆ ಎಂಬ ಅರ್ಥವನ್ನು ಭಾಷ್ಯದ ಮಾತಿಗೆ ತಿಳಿಯಬೇಕು.

ಕರ್ಮಕ್ರಮ ಹಾಗೂ ಕರ್ಮದ ಕಾಲ ಇವುಗಳನ್ನು ಹೇಳಿರುವುದರಿಂದ ಭಗವದ್ವಾಚಕತ್ವಕ್ಕೆ ವಿರೋಧ ಬರುತ್ತದೆ. ಅಥವಾ ಭಗವದುಕ್ತಿಯಿಂದ ಕರ್ಮಕ್ರಮಾದಿವಾಚಕತ್ವದ ವಿರೋಧ ಬರುತ್ತದೆಂದು ತಿಳಿಯಬಾರದು.

ಅನೇಕ ವೃತ್ತಿಪ್ರಭೇದಗಳಿಂದ ವಿರೋಧ ಪರಿಹಾರ

**सत्तर्कदीपावलिः – न हि तिरोवंशादिशब्दानां द्युवाचकत्वे द्यौरेव तिरश्चनिवंशा इत्याद्यौपदेशिककल्पना युज्यते । एवं च रुढरुढयोगादिशब्दवृत्ति भेदाज्जातादिशब्दानां अर्थान्तरेऽपि मुख्यमात्रवृत्तौ सत्यां तत्पूर्वकत्वेन महयोगवृत्या परमेश्वरे ज्योतिरादिसर्वशब्दयुत्पत्तिः शक्यैव ।**

'ತಿರೋವಂಶ' ಮೊದಲಾದ ಶಬ್ದಗಳು 'ದ್ಯು' ಎಂಬ ಲಕ್ಷ್ಮೀಯನ್ನು ಪ್ರತಿಪಾದನೆ ಮಾಡದಿದ್ದರೆ, 'ದ್ಯು' ಎಂಬ ಲಕ್ಷ್ಮೀಯೇ ತಿರೋವಂಶಳಾಗಿದ್ದಾಳೆ ಇತ್ಯಾದಿ ವೇದಗಳಲ್ಲಿ ಹೇಳಿದ್ದು ಯುಕ್ತವಾಗುವುದಿಲ್ಲ. ಆದ್ದರಿಂದ ರೂಢ, ರೂಢಯೋಗ ಇತ್ಯಾದಿ ಅನೇಕ ಶಬ್ದವೃತ್ತಿ - ಗಳಿರುವುದರಿಂದ ಜಾತಾದಿಶಬ್ದಗಳಿಗೆ ಬೇರೆ ಅರ್ಥದಲ್ಲಿ ಮುಖ್ಯವೃತ್ತಿಯನ್ನು ಅಂಗೀಕಾರ ಮಾಡಬೇಕು. ಅದೇ ಸಂದರ್ಭದಲ್ಲಿ ಮಹಾಯೋಗವೃತ್ತಿಯನ್ನು ವಿಷ್ಣುವಿನಲ್ಲೇ ಅಂಗೀಕರಿಸಿ ಜ್ಯೋತಿರಾದಿಶಬ್ದಗಳ ವ್ಯುತ್ಪತ್ತಿಯನ್ನು ಸಂಪಾದನೆ ಮಾಡಬೇಕು.

ಬಾಲರೂಢಿಯಿಲ್ಲದ ಕಾರಣ ಕಲ್ಪನೋಪದೇಶ

**सत्तर्कदीपावलिः – यज्ञो वै विष्णुः अहम् क्रतुरहं यज्ञः त्वं क्रतुस्त्वंहविस्त्वं हुताशः स्वयमित्यादि विद्वद्रूढिदर्शनेपि बालरुढ्यभावादेव कल्पनोपदेशः । अतः प्रतिपदं च भगवद्वाचकत्वं सर्ववेदानामिति सिद्धम् ।**

**।। इति ज्योतिरुपक्रमाधिकरणम् ।।२।।**

'ಯಜ್ಞೋ ವೈ ವಿಷ್ಣುಃ ಅಹಂ ಋತುರಹಂ ಯಜ್ಞಃ ತ್ವಂಕ್ರತುಸ್ತ್ವಂಹವಿಸ್ತ್ವಂ ಹುತಾಶಃ ಸ್ವಯಮ್' ಇತ್ಯಾದಿಯಾದ ವಿದ್ವದ್‌ರೂಢಿಗಳು ವೇದದಲ್ಲಿ ಇರುತ್ತವೆ. ಆದರೆ ಬಾಲರೂಢಿಯು

ಇಲ್ಲದ ಕಾರಣ ಲೋಕಸಿದ್ಧವಾದ ಶಬ್ದವೃತ್ತಿಯನ್ನು ವಿಷ್ಣುವಿನಲ್ಲಿ 'ತಾ ವಾ ಏತಾ' ಎಂಬುದಾಗಿ ಸರ್ವಶಬ್ದವಾಚ್ಯತ್ವವನ್ನು ಉಪದೇಶ ಮಾಡಲಾಗಿದೆ. ಆದ್ದರಿಂದ ವೇದದಲ್ಲಿರುವ ಪ್ರತಿಯೊಂದು ಪದಗಳು ಭಗವದ್ವಾಚಕವಾಗಿದೆ ಎಂಬುದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ಜ್ಯೋತಿರುಪಕ್ರಮಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

### ಕರ್ಮಕ್ರಮಾದಿಗಳ ವಿರೋಧಪರಿಹಾರ

**तत्वप्रदीपः – कर्मक्रमादिविरोधं परिहरति - कल्पनोपदेशाच्च मध्वादिवदविरोधः ।। ''असौ वा आदित्यो देवमधु'' इत्याद्यायां मधुविद्याश्रुतौ यथा मधुशब्दार्थत्वेनाऽऽदित्यस्थो विष्णुः क्लृप्त उपदिश्यते । मधुगुणानां तत्राधिक्यात्तस्यैव च परममुख्यमधुत्वं भवति ।**

ಕರ್ಮಕ್ರಮಾದಿಗಳ ವಿರೋಧವನ್ನು ಪರಿಹರಿಸಲು 'ಕಲ್ಪನೋಪದೇಶಾಚ್ಚ ಮಧ್ವಾದಿವದ-ವಿರೋಧಃ' ಎಂಬ ಸೂತ್ರವು ಹೊರಟಿದೆ. 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿಯಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಆದಿತ್ಯಮಂಡಲದಲ್ಲಿರುವ ವಿಷ್ಣುವೇ ದೇವತೆಗಳಿಗೆ ಮಧು ಎನಿಸಿದ್ದಾನೆ ಎಂದು ಹೇಳಿದೆ. ಜೇನು ಹೇಗೆ ತನ್ನ ಮರಿಗಳಿಗೆ ಮಧುರಸದಿಂದ ತೃಪ್ತಿಯನ್ನು ನೀಡುತ್ತದೋ, ಅದರಂತೆ ಆದಿತ್ಯಮಂಡಲದಲ್ಲಿರುವ ವಿಷ್ಣುವು ತನ್ನ ಕಿರಣಗಳಿಂದ ವಸು ಮೊದಲಾದ ದೇವತೆಗಳಿಗೆ ತೃಪ್ತಿಯನ್ನು ನೀಡುತ್ತಾನೆ. ಆದ್ದರಿಂದಲೇ 'ಮಧು' ಎನಿಸಿದ್ದಾನೆ ಎಂದು ಈ ಶ್ರುತಿ ಹೇಳುತ್ತಿದೆ. ಹೀಗೆ ಮಧುಶಬ್ದಾರ್ಥ ಎನಿಸಿದವನು ಆದಿತ್ಯನಲ್ಲಿರುವ ವಿಷ್ಣುವೇ ಆಗಿದ್ದಾನೆ ಎಂದು ಉಪದೇಶಿಸಲಾಗಿದೆ. ಮಧುವಿನಲ್ಲಿರುವ ಗುಣವು ಅತ್ಯಧಿಕವಾಗಿ ಆ ವಿಷ್ಣುವಿನಲ್ಲೇ ಇರುವುದರಿಂದ ಪರಮಮುಖ್ಯಮಧುತ್ವವು ಅವನಲ್ಲೇ ಬರುತ್ತದೆ.

ಲೌಕಿಕಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯ

**तत्वप्रदीपः – नच तावता प्रसिद्धमधुनि व्यवहारलोपो लोकानां भवति। एवमेव सर्वशब्दानां परममुख्यार्थत्वेन क्लृप्तिर्विष्णौ वेदेनोपदिश्यते । सा च कल्पना प्रबलाऽनादित्वात्, विद्वत्सम्बन्धित्वाच्च । तथाच श्रुतिः ''कश्छन्दसां योगमावेद धीर'' इत्यादिका ।**

ವಿಷ್ಣುವನ್ನು ಮಧುವೆಂದ ಮಾತ್ರಕ್ಕೆ ಈ ಲೌಕಿಕವಾದ ಮಧುವಿನಲ್ಲೇ ವ್ಯವಹಾರಲೋಪಕ್ಕೆ ಅವಕಾಶವಿಲ್ಲ. ಅದರಂತೆ ಸಕಲಶಬ್ದಗಳು ಪರಮಮುಖ್ಯಾರ್ಥತ್ವೇನ ವಿಷ್ಣುವಿನಲ್ಲಿ ವೇದವು ಉಪದೇಶ ಮಾಡುತ್ತಿದೆ. ಹೀಗೆ ವ್ಯಾಖ್ಯಾನ ಮಾಡುವುದು ಅನಾದಿಸಂಪ್ರದಾಯಬದ್ಧವಾಗಿದೆ. ಆದ್ದರಿಂದಲೇ ಪ್ರಬಲವಾಗಿದೆ. ವಿದ್ವತ್‌ಸಂಬಂಧಿಯಾಗಿರುವುದರಿಂದಲೂ ಪ್ರಬಲವಾಗಿದೆ. ಆದ್ದರಿಂದಲೇ ಶ್ರುತಿ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬುದಾಗಿ ಅನಾದಿ-ಸಂಪ್ರದಾಯವನ್ನು ಉಲ್ಲೇಖ ಮಾಡುತ್ತಿದೆ.

ಪರಮಮುಖ್ಯವೃತ್ತಿಯಿಂದ ವಿಷ್ಣುವೇ ಪ್ರತಿಪಾದ್ಯ

**तत्वप्रदीपः – अविद्वदपेक्षया कल्पनेत्युच्यते । मुख्यातिमुख्यवृत्तिभेदेन च वाच्यद्वयसम्भवो न दण्डवारितः । कृष्णादिशब्देषु तद्दर्शनात् । तस्मान्न व्यवहारलोपः ।।**

**।। इति ज्योतिरधिकरणम् ।।**

ಸೂತ್ರದಲ್ಲಿ ಅವಿದ್ವಾಂಸರ ಅರ್ಥವನ್ನು ಉಲ್ಲೇಖ ಮಾಡಲು 'ಕಲ್ಪನಾ' ಎಂಬ ಪದವನ್ನು ಪ್ರಯೋಗ ಮಾಡಲಾಗಿದೆ. 'ಕಲ್ಪನಾ' ಎಂದರೆ 'ಲೋಕದಲ್ಲಿ ಕ್ಲೃಪ್ತವಾದದ್ದು' ಎಂದರ್ಥ. ಒಂದೇ ಶಬ್ದವು ಮುಖ್ಯವೃತ್ತಿಯಿಂದ ಲೌಕಿಕಾರ್ಥವನ್ನು ಹೇಳಿದರೆ ಅತಿಮುಖ್ಯವೃತ್ತಿಯಿಂದ ವಿಷ್ಣುವನ್ನು ಹೇಳುತ್ತದೆ. ಒಂದೇ ಪದಕ್ಕೆ ಮುಖ್ಯ ಮತ್ತು ಅತಿಮುಖ್ಯಭೇದದಿಂದ ಎರಡು ವಾಚ್ಯಗಳು ಸಿದ್ಧವಾಗುತ್ತದೆಂಬುದನ್ನು ಸಮರ್ಥಿಸಿದಂತಾಯಿತು. ಲೋಕದಲ್ಲೂ ಕೂಡ ಕೃಷ್ಣ ಮೊದಲಾದ ಶಬ್ದಗಳನ್ನು ಮನುಷ್ಯರಲ್ಲಿ ಪ್ರಯೋಗ ಮಾಡಲಾಗುತ್ತದೆ. ಮುಖ್ಯವೃತ್ತಿಯಿಂದ

ಪರಮಾತ್ಮನಲ್ಲೂ ಪ್ರಯೋಗ ಮಾಡುವುದು ಕಂಡಿದೆ. ಆದ್ದರಿಂದ ವ್ಯವಹಾರಲೋಪಕ್ಕೆ ಅವಕಾಶವಿಲ್ಲ.

ವಿವರಣೆ - ಛಾಂದೋಗ್ಯೋಪನಿಷತ್ತಿನಲ್ಲಿ ಆದಿತ್ಯನಲ್ಲಿರುವ ವಿಷ್ಣುವನ್ನು 'ಮಧು' ಎಂದು ಕರೆಯಲಾಗಿದೆ. ಅಂದಮಾತ್ರಕ್ಕೆ ಲೌಕಿಕವಾದ ಜೇನನ್ನು ಯಾರೂ ಕೂಡ ಮಧು ಎಂದು ಕರೆಯುವುದಿಲ್ಲ ಎಂದೇನಿಲ್ಲ. ಆದ್ದರಿಂದ ವೈದಿಕಶಬ್ದಗಳಿಂದ ವಿಷ್ಣು ಪರಮಮುಖ್ಯವೃತ್ತಿಯಿಂದ ವಾಚ್ಯನಾಗುತ್ತಾನೆ. ಮುಖ್ಯವೃತ್ತಿಯಿಂದ ಲೌಕಿಕಪದಾರ್ಥಗಳು ಪ್ರತಿಪಾದ್ಯವಾಗುತ್ತವೆ. ಸೂತ್ರದಲ್ಲಿರುವ 'ಕಲ್ಪನಾ' ಎಂಬ ಪದಕ್ಕೆ ಲೋಕದಲ್ಲಿ ಕ್ಲೃಪ್ತವಾದದ್ದು ಎಂದರ್ಥ. ಅಂಥ ಶಬ್ದಗಳನ್ನು ವಿಷ್ಣುವಿನಲ್ಲಿ ಬೃಹದಾರಣ್ಯಕವು 'ಮಧು' ಇತ್ಯಾದಿ ಶಬ್ದಗಳ ಉದಾಹರಣೆಯಿಂದ ಸಮನ್ವಯ ಮಾಡುತ್ತಿದೆ. ಆದ್ದರಿಂದ ಸರ್ವಶಬ್ದವಾಚ್ಯತ್ವಕ್ಕೆ ಯಾವುದೇ ವಿರೋಧವಿಲ್ಲ ಎಂಬುದು ಈ ಸೂತ್ರದ ಅಭಿಪ್ರಾಯ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ
ಜ್ಯೋತಿರುಪಕ್ರಮಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ತ್ವಪ್ರಕಾಶಿಕಾ

ವ್ಯುತ್ಪತ್ತಿಯ ಸಮರ್ಥನೆಗಾಗಿ ಈ ಸೂತ್ರ

**ननु कथं ज्योतिरादिशब्दवाच्यत्वं परमात्मनः सम्भवति ? कर्मक्रमादिविरोधात्, व्युत्पत्त्यसम्भवाच्च, इत्याशङ्कामपनुदत् सूत्रमुपन्यस्य व्याचष्टे – कल्पनेति ।।**

ಪ್ರಶ್ನೆ - ವೇದದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳಿಂದ ಪರಮಾತ್ಮನೊಬ್ಬನೇ ಪ್ರತಿಪಾದ್ಯನಾಗಲು ಹೇಗೆ ಸಾಧ್ಯ? ಹಾಗೇನಾದರೂ ಸಕಲವಿಧ ಶಬ್ದಗಳಿಂದ ಪರಮಾತ್ಮನು ಮಾತ್ರ ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದಾದರೆ ಜ್ಯೋತಿಷ್ಟೋಮಾದಿ ಕರ್ಮಗಳು ಅವುಗಳ ಕ್ರಮಗಳು, ಬೇರೆ ಯಾವುದೇ ಶಬ್ದಗಳಿಂದ ಪ್ರತಿಪಾದ್ಯವಾಗದ ಕಾರಣ ಅವುಗಳಿಗೆ ಲೋಪ ಬರಬೇಕಾದೀತು. ಮತ್ತು ಆಯಾ ಶಬ್ದಗಳ ವ್ಯುತ್ಪತ್ತಿಯನ್ನೂ ಕೂಡ ಪರಮಾತ್ಮನಲ್ಲಿ ಮಾಡಲು

ಸಾಧ್ಯವಾಗುವುದಿಲ್ಲ. ಏಕೆಂದರೆ ಹಿಂದಿನ ಮುಂದಿನ ಪದಗಳೆಲ್ಲವೂ ವಿಷ್ಣು ಎಂಬ ಒಂದೇ ಅರ್ಥವನ್ನು ಹೇಳುವುದಾದರೆ ವ್ಯುತ್ಪತ್ತಿ ಹೇಗೆ ಕೂಡುತ್ತದೆ?

ಉತ್ತರ - ಈ ಆಶಂಕೆಗೆ ಉತ್ತರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಲ್ಪನಾ' ಇತ್ಯಾದಿಯಾಗಿ.

ಕರ್ಮಕ್ರಮದ ವಿರೋಧವೂ ಇಲ್ಲ, ವ್ಯುತ್ಪತ್ತಿಯೂ ಕೂಡುತ್ತದೆ

**ತತ್ವಪ್ರಕಾಶಿಕಾ – सर्वशब्दानां परमात्मवाचित्वेऽपि न कर्मक्रमादिविरोधः, व्युत्पत्त्ययोगो वा ।**

ಎಲ್ಲಾ ವಿಧವಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಒಪ್ಪಿದರೂ ಕೂಡ ಜ್ಯೋತಿಷ್ಟೋಮಾದಿ ಕರ್ಮಗಳ ಹಾಗೂ ಅವುಗಳ ಕ್ರಮಗಳ ವಿರೋಧವೂ ಬರಬೇಕಾದೀತು ಎಂಬ ವಿರೋಧವು ಬರುವುದಿಲ್ಲ. ಮತ್ತು ಶಬ್ದಗಳ ವ್ಯುತ್ಪತ್ತಿಯೂ ಕೂಡ ಅಸಂಭಾವಿತ-ವಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

ಈ ವಿಷಯದಲ್ಲಿ 'ಅಸೌ ವಾ ಆದಿತ್ಯೋ ದೇವಮಧು' ಎಂಬ ಶ್ರುತಿಯ ಉದಾಹರಣೆ

**ತತ್ವಪ್ರಕಾಶಿಕಾ – यथा खलु मधुविद्यायाम् 'असौ वा आदित्यो देवमधु' इत्यादिना मध्वादिपदार्थतया परमात्मोपासनोपदेशेऽपि, न लौकिकमध्वादि-वाचकाभावेन तदभावविरोधः ।**

ಯಾವರೀತಿಯಾಗಿ ಮಧುವಿದ್ಯೆಯಲ್ಲಿ 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿಯಾಗಿ ಆದಿತ್ಯನಲ್ಲಿರುವ ಪರಮಾತ್ಮನು ಮಧುವಾಗಿದ್ದಾನೆ. ಎಲ್ಲಾ ದೇವತೆಗಳಿಗೆ ಆಶ್ರಯನಾಗಿದ್ದಾನೆ ಮತ್ತು ಸುಖಪೂರ್ಣನಾಗಿದ್ದಾನೆಂಬುದಾಗಿ 'ಮಧು' ಮೊದಲಾದ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬ ಉಪಾಸನೆಯನ್ನು ಶ್ರುತಿಯು ಉಪದೇಶಿಸುತ್ತಿದೆ. ಆದರೂ ಕೂಡ ಲೌಕಿಕವಾದ ಮಧುವನ್ನು ಕೂಡ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಲೌಕಿಕವಾದ 'ಮಧು' ಎಂಬ ಪದಾರ್ಥವು ಅಸಿದ್ಧವಾಗುತ್ತದೆಂಬ ವಿರೋಧ ಬರುವುದಿಲ್ಲ.

ಈಶ್ವರನಲ್ಲಿ ಮಹಾಯೋಗವೃತ್ತಿಯಿಂದ ಸಮನ್ವಯ

**तत्वप्रकाशिका – अन्यत्ररूढिमनिवार्यैव महायोगवृत्त्या मध्वादि-शब्दानामीश्वरादौ वृत्त्यभ्युपगमात् ।**

ಏಕೆಂದರೆ ಬೇರೆ ಪದಾರ್ಥಗಳಲ್ಲಿ ರೂಢಿಯನ್ನು ಅಂಗೀಕರಿಸಿಯೇ ಮಹಾಯೋಗವೃತ್ತಿಯಿಂದ ಮಧು ಮೊದಲಾದ ಶಬ್ದಗಳನ್ನು ಈಶ್ವರನಲ್ಲಿ ಮುಖ್ಯವೃತ್ತಿಯಿಂದ ನಾವು ಸಮನ್ವಯ ಮಾಡುತ್ತಿದ್ದೇವೆ.

ಅನೇಕ ಬಗೆಯ ವೃತ್ತಿಗಳು

**तत्वप्रकाशिका – एवं सर्वशब्दवाच्यत्वे परमात्मनोऽभ्युपगतेऽपि न कर्मादिविरोधः । ज्योतिरादिशब्दानामन्यत्ररूढिः, योगः, योगरूढिः, रूढोपचारः, रूढलक्षणा, उपचारः, लक्षणा इति वृत्तीरभ्युपेत्य महायोगवृत्त्येश्वर-वाचित्वाभ्युपगमात् ।**

ಇದರಂತೆ ಪರಮಾತ್ಮನು ಸಕಲವಿಧವಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ಅಂಗೀಕರಿಸಿದರೂ ಕೂಡ ಯಾವುದೇ ಕರ್ಮ, ಕ್ರಮಾದಿಗಳ ವಿರೋಧವು ಬರುವುದಿಲ್ಲ. ಏಕೆಂದರೆ 'ಜ್ಯೋತಿ' ಮೊದಲಾದ ಶಬ್ದಗಳಿಗೆ ಯುಗಾದಿ ಪದಾರ್ಥಗಳಲ್ಲಿ ರೂಢಿ, ಯೋಗ, ಯೋಗರೂಢಿ, ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ. ಇಷ್ಟು ವೃತ್ತಿಗಳಲ್ಲಿ ಯಾವುದೇ ಒಂದು ವೃತ್ತಿಯಿಂದಲೂ ಪ್ರತಿಪಾದನೆ ಮಾಡಬಹುದು. ಆದರೆ ಮಹಾಯೋಗ-ವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದು ನಮ್ಮ ಸಿದ್ಧಾಂತ.

'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಶ್ರುತಿಯ ಆಧಾರ

**तत्वप्रकाशिका – सर्वशब्दवाच्यत्वमीश्वरस्य चोपासनार्थमेव ह्युपदिश्यते 'प्राण ऋच इत्येव विद्यात्' इत्यादेः ॥**

ಸಕಲವಿಧವಾದ ಶಬ್ದಗಳು ಈಶ್ವರನನ್ನು ಉಪಾಸನೆಗೋಸ್ಕರ ಪ್ರತಿಪಾದನೆ ಮಾಡುತ್ತಿದೆ ಎಂಬುದಾಗಿ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಉಪದೇಶವಾಕ್ಯವಿದೆ.

ಕಂಡಿದೆ. ಹೊರತು, ಕೆಲವು ಅರ್ಥಗಳಲ್ಲಿ ಮುಖ್ಯವೃತ್ತಿಯಿಂದ, ಇನ್ನೂ ಕೆಲವು ಅರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಇರುವುದು ಕಂಡಿಲ್ಲವಷ್ಟೇ.

### ಪರಮಾತ್ಮನು ಸಕಲಶಬ್ದವಾಚ್ಯನಾಗಲಾರ

**तत्वप्रकाशिका – अतः सर्वशब्दानां मुख्यवृत्त्या परमात्मैकवाचित्वेऽन्यत्र व्यवहारलोपापातात्; तस्य चानिष्टत्वात्, 'न परमात्मैव मुख्यतः सर्वशब्दवाच्यः' इति (शङ्कार्थः) ।**

ಆದ್ದರಿಂದ ಸಕಲಶಬ್ದಗಳು ಮುಖ್ಯವೃತ್ತಿಯಿಂದ ಪರಮಾತ್ಮನೊಬ್ಬನನ್ನೇ ಪ್ರತಿಪಾದನೆ ಮಾಡುವುದಾದರೆ ಲೋಕದಲ್ಲಿ ಶಬ್ದವ್ಯವಹಾರಗಳೇ ಲೋಪವಾಗುವ ಪ್ರಸಂಗ ಬರುತ್ತದೆ. ಇದು ಸಿದ್ಧಾಂತಿಗಳಿಗೂ ಅನಿಷ್ಟ. ಆದ್ದರಿಂದ ಎಲ್ಲಾ ಶಬ್ದಗಳಿಂದ ಪರಮಾತ್ಮನೊಬ್ಬನೇ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದಾಗಲೀ, ಸಕಲಶಬ್ದವಾಚ್ಯನಾಗಿದ್ದಾನೆಂದಾಗಲೀ ಹೇಳಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

### ಸಿದ್ಧಾಂತ ಸ್ಥಾಪನೆ

**तत्वप्रकाशिका – सिद्धान्तयत् सूत्रमवतार्य व्याचष्टे – अत इति ।।**

ಮೇಲಿನ ಪೂರ್ವಪಕ್ಷವನ್ನು ನಿರಾಕರಿಸಿ ಸಿದ್ಧಾಂತವನ್ನು ಸ್ಥಾಪನೆ ಮಾಡಲು ಹೊರಟಿರುವ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ.

### 'ಸಮಾಕರ್ಷಾತ್' ಎಂಬ ಸೂತ್ರ ವ್ಯಾಖ್ಯಾನ

**तत्वप्रकाशिका – सूत्रं व्याचष्टे – परमात्मेति ।।**

ಭಾಷ್ಯಕಾರರು ಸೂತ್ರವನ್ನು 'ಪರಮಾತ್ಮವಾಚಿನಃ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

### ರೂಢಿವೃತ್ತಿಯಿಂದ ಲೌಕಿಕ ವ್ಯವಹಾರ

**तत्वप्रकाशिका – न परमात्मनो मुख्यतः सर्वशब्दवाच्यत्वेऽन्यत्र व्यवहारलोपः । तत्र रूढ्यादेरभ्युपगमात् । तथा सत्युभयोर्मुख्यवाच्यत्वं प्राप्तम् ? इति चेत् । मैवम् ।**

'ಪರಮಾತ್ಮನು ಮುಖ್ಯವೃತ್ತಿಯಿಂದಲೇ ಸಕಲಶಬ್ದವಾಚ್ಯನಾಗಿದ್ದಾನೆ' ಎಂಬುದೇ ನಮ್ಮ ಸಿದ್ಧಾಂತ. ಹೀಗೆ ಒಪ್ಪುವುದರಿಂದ ಅನ್ಯತ್ರ ವ್ಯವಹಾರವೇ ನಿಂತು ಹೋಗುವ ಪರಿಸ್ಥಿತಿ ಬರುವುದಿಲ್ಲ. ಲೌಕಿಕ ಪದಾರ್ಥಗಳಲ್ಲಿ ಆಯಾ ಶಬ್ದಗಳ ರೂಢಿವೃತ್ತಿಯನ್ನು ಒಪ್ಪಿರುತ್ತೇವೆ.

ಪ್ರಶ್ನೆ - ಹಾಗಾದರೆ ಒಂದೇ ಶಬ್ದಕ್ಕೆ ಎರಡು ಅರ್ಥದಲ್ಲಿ ಮುಖ್ಯವೃತ್ತಿಯನ್ನು ಒಪ್ಪಿದಂತಾಯಿತಲ್ಲವೇ?

### ಮುಖ್ಯವೃತ್ತಿ ಬೇರೆಡೆ ಇಲ್ಲ

**तत्वप्रकाशिका – भवेदेतत् अक्षादिशब्दवदुभयत्रान्योन्यनिरपेक्षा शब्दप्रवृत्तिः । न चैवम्, किन्तु; स्वतो मुख्यवृत्त्या परमात्मैकवाचिनां शब्दानां व्यवहारसिध्यर्थं ततः समाकृष्याऽन्यत्र रूढत्वेन सङ्केतितत्वात् ।**

ಉತ್ತರ - ಇದು ತಪ್ಪು. ಒಂದು ವೇಳೆ 'ಅಕ್ಷ' ಮೊದಲಾದ ಅನೇಕಾರ್ಥದ ಶಬ್ದಗಳಂತೆ ಬೇರೆ ಬೇರೆ ಅರ್ಥಗಳಲ್ಲಿ ಪರಸ್ಪರ ಅಪೇಕ್ಷೆ ಪಡದ ಶಬ್ದಗಳಿಗೆ ಎರಡು ಅರ್ಥಗಳಲ್ಲಿ ಮುಖ್ಯಾರ್ಥತ್ವವನ್ನು ಒಪ್ಪಿದ್ದರೆ ನೀವು ಹೇಳಿದ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು. ಆದರೆ ಅಕ್ಷಾದಿ ಶಬ್ದಗಳಂತೆ ನಾವು ಅನೇಕಾರ್ಥತ್ವನ್ನು ಸಮಾನವಾಗಿ ಹೇಳುತ್ತಿಲ್ಲ. ಹೊರತಾಗಿ ಪರಮಾತ್ಮನೊಬ್ಬನೇ ಪ್ರತಿಯೊಂದು ಶಬ್ದಗಳಿಂದ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಕೇವಲ ವ್ಯವಹಾರದ ಸಿದ್ಧಿಗೋಸ್ಕರ ಆಯಾ ಶಬ್ದಗಳನ್ನು ಸಮಾಕರ್ಷ ಮಾಡಿ, ಬೇರೆ ಪದಾರ್ಥಗಳಲ್ಲಿ ರೂಢಿವೃತ್ತಿಯನ್ನು ಒಪ್ಪಿ ಸಂಕೋಚ ಮಾಡುತ್ತೇವೆ. ಹೊರತು ಮುಖ್ಯವೃತ್ತಿಯನ್ನು ಒಪ್ಪುವುದಿಲ್ಲ.

### ಪರಮಾತ್ಮನಲ್ಲಿರುವ ಮುಖ್ಯವೃತ್ತಿ ಅತ್ಯಧಿಕ

**तत्वप्रकाशिका – अल्पप्रवृत्तिनिमित्तानां च तदधीनत्वादिति भावः ।**

ಯಾವ ಶಬ್ದಗಳು ಲೌಕಿಕಪದಾರ್ಥಗಳಲ್ಲಿ ಯೌಗಿಕವಾಗಿರುತ್ತವೋ, ಅವುಗಳ ಪ್ರವೃತ್ತಿನಿಮಿತ್ತ ಪರಮಾತ್ಮನಲ್ಲಿಯೇ ಅಧಿಕವಾಗಿರುತ್ತದೆ. ಲೌಕಿಕ ಪದಾರ್ಥಗಳಲ್ಲಿರುವ ಪ್ರವೃತ್ತಿನಿಮಿತ್ತವು ಪರಮಾತ್ಮನ ಅಧೀನವಾಗಿರುತ್ತದೆ. ಮತ್ತು ಅಲ್ಪವಾಗಿರುತ್ತದೆ. ಆದ್ದರಿಂದ ಪರಮಾತ್ಮನಲ್ಲಿ ಎಷ್ಟು ಮುಖ್ಯವೃತ್ತಿಯಿಂದ ಶಬ್ದಗಳಿರುತ್ತವೋ ಅಷ್ಟೇ ಮುಖ್ಯವೃತ್ತಿಯಿಂದ ಲೌಕಿಕಪದಾರ್ಥ-ಗಳಲ್ಲಿರುವುದಿಲ್ಲ.

ಅಕ್ಷಾದಿ ಶಬ್ದಗಳು ಉದಾಹರಣೆ ಅಲ್ಲ

**तत्वप्रकाशिका – अन्योन्यनिरपेक्षतयैव कुतो न शब्दवृत्तिरित्यतः स्मृतेरेवेत्याह – परस्येति ।।**

ಪರಮಾತ್ಮ ಹಾಗೂ ಲೌಕಿಕಪದಾರ್ಥಗಳಲ್ಲಿ ಶಬ್ದಗಳು ಅನ್ಯೋನ್ಯನಿರಪೇಕ್ಷವಾಗಿ ಅಕ್ಷಾದಿಶಬ್ದಗಳಂತೆ ಮುಖ್ಯವೃತ್ತಿಯಿಂದಲೇ ಏಕೆ ಕೂಡಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು ಸ್ಮೃತಿವಾಕ್ಯವನ್ನೇ ಆಧಾರವನ್ನಾಗಿ ಹೇಳುತ್ತಿದ್ದಾರೆ 'ಪರಸ್ಯ' ಇತ್ಯಾದಿಯಾಗಿ.

ಅಜ್ಞರೂಢಿಯಿಂದ ಲೋಕವ್ಯವಹಾರ

**तत्वप्रकाशिका – लोकवेदानुसारत इति ।। लौकिकवैदिकव्यवहारसिद्ध्यनुसारतः। नच प्राचीनसूत्रविरोधः । प्रथमसूत्रे स्वातन्त्र्येण वाच्यत्वाभावस्याभिप्रेतत्वात्।**

'ಲೋಕವೇದಾನುಸಾರತಃ' ಎಂದರೆ ಲೌಕಿಕ ಹಾಗೂ ವೈದಿಕ ವ್ಯವಹಾರಗಳ ಸಿದ್ಧಿಗೆ ಅನುಸಾರಿಯಾಗಿ ಎಂದರ್ಥ. ಹಾಗಾದರೆ ಅಜ್ಞರೂಢಿಯಿಂದ ಲೋಕವ್ಯವಹಾರ. ಮುಖ್ಯಾರ್ಥನಾದ ಪರಮಾತ್ಮನ ಸಂಬಂಧದಿಂದ ಲೋಕದಲ್ಲಿ ಅಮುಖ್ಯವ್ಯವಹಾರ, ಇತ್ಯಾದಿಯಾಗಿ ಹಿಂದಿನ ಸೂತ್ರಗಳಲ್ಲಿ ಹೇಳಲಾಗಿದೆ. ಈ ಸೂತ್ರಗಳ ವಿರೋಧ ಬರುತ್ತದಲ್ಲವೇ? ಎಂದು ಆಶಂಕಿಸಬಾರದು. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಮೊದಲನೆಯ ಸೂತ್ರದಲ್ಲಿ ಸ್ವತಂತ್ರವಾಗಿ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಲೋಕದಲ್ಲಿ ಬಳಕೆ ಮಾಡಲಾಗುತ್ತದೆ.

ವಿಶೇಷವಿಚಾರಕ್ಕಾಗಿ ಈ ಸೂತ್ರ

**तत्वप्रकाशिका – द्वितीये परमात्मसम्बन्धोक्त्याऽत्रोक्तस्यैवाभिसंहितत्वात्। तृतीये चाऽविवेचितरुढ्यादिमात्राभ्युपगतेः । अत्र पुनस्तस्यैव विवेचनादिति।।**

'ಆನುಮಾನಿಕಮಪ್ಯೇಕೇಷಾಂ' ಎಂಬ ಎರಡನೆಯ ಸೂತ್ರದಲ್ಲಿ, ಪರಮಾತ್ಮ ಸಂಬಂಧವು ಲೌಕಿಕ ಪದಾರ್ಥಗಳಲ್ಲಿ ಸಮಾಕರ್ಷ ಮಾಡಲು ನಿಮಿತ್ತವಾಗಿದೆಯೆಂದು ಈ 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಹೇಳಿರುವುದು ಅನುಸಂಧಾನ ಮಾಡಿಕೊಳ್ಳಬೇಕು. 'ಕಲ್ಪನೋಪದೇಶಾಚ್ಚ'

ಎಂಬ ಮೂರನೆಯ ಸೂತ್ರದಲ್ಲಿ ರೂಢಿ ಮೊದಲಾದ ವೃತ್ತಿಗಳ ಬಗ್ಗೆ ವಿವೇಚನೆ ಮಾಡದೇ ಸಾಮಾನ್ಯವಾಗಿ ಸಮನ್ವಯ ಮಾಡಿರುತ್ತಾರೆ. ಅದನ್ನೇ ಈ ಸೂತ್ರವೂ ಹೇಳಿದೆ - ಎಲ್ಲಾ ಶಬ್ದಗಳು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ. ಲೋಕದಲ್ಲಿ ರೂಢಿ ಹಾಗೂ ಯೋಗವೃತ್ತಿಗಳಿಂದ ಪ್ರತಿಪಾದನೆ ಮಾಡುತ್ತವೆ. ಹೀಗೆ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಪ್ರಾಪ್ತವಾದ ವಿಚಾರವನ್ನು ಈ ಸೂತ್ರದಲ್ಲಿ ವಿಶೇಷ ವಿಶ್ಲೇಷಣೆ ಮಾಡಿದ್ದರಿಂದ ವಿರೋಧವಿಲ್ಲ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಸಮಾಕರ್ಷಾಧಿಕರಣವು ಪ್ರತ್ಯೇಕವೇ?

**अत्रानुव्याख्याने 'विरोधिसर्वबाहुल्यकारणस्त्रीनिषेधिनाम्' इत्यादिना एतत्पादीयाधिकरणोपाध्युक्त्यनुरोधेन प्राचीनैः समाकर्षादित्यादिसूत्राष्टकस्य पूर्वशेषत्वोक्तावपीह पृथगधिकरणान्तरत्वेन योजनं तु पृथक् न्यायसूचकत्वं दर्शयितुमित्युक्तं चन्द्रिकायाम्।**

ಅನುವ್ಯಾಖ್ಯಾನದಲ್ಲಿ 'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಂ' ಎಂಬ ಈ ಪಾದದ ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಹೇಳುವಾಗ ಹಿಂದಿನ 'ಸಮಾಕರ್ಷಾತ್' ಎಂಟು ಸೂತ್ರಗಳನ್ನು ಸೇರಿಸಿಯೇ ಉಪಾಧಿಯನ್ನು ಹೇಳಿರುತ್ತಾರೆ. ಹೊರತು ಪ್ರತ್ಯೇಕವಾದ ಉಪಾಧಿಯನ್ನು ಈ ಅಧಿಕರಣಕ್ಕೆ ಹೇಳಿರುವುದಿಲ್ಲ. ಆದರೆ ಟೀಕೆಯಲ್ಲಿ ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ. ಇದಕ್ಕೆ ಕಾರಣವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಪ್ರತ್ಯೇಕ ನ್ಯಾಯ ಸೂಚಕವಾದ್ದರಿಂದ ಎಂದು ಸಮರ್ಥಿಸಿದ್ದಾರೆ.

### ಈ ಅಧಿಕರಣಕ್ಕೆ ಅವಸರ ಸಂಗತಿ

**भावदीपः – एवं हरावन्यत्र च मुख्यवृत्तौ सिद्धायामस्य विचारस्यावसर-प्राप्तिमाह – अथेति ।।**

ಶ್ರೀಹರಿಯಲ್ಲಿ ಮತ್ತು ಲೋಕದಲ್ಲಿ ಮುಖ್ಯವೃತ್ತಿಯಿಂದಲೇ ಶಬ್ದಗಳು ಪ್ರವೃತ್ತವಾದಾಗ ಈ ಅಧಿಕರಣದ ವಿಚಾರವು ಅವಸರ ಸಂಗತಿಯಿಂದ ಪ್ರಾಪ್ತವಾಗುತ್ತದೆ. ಆದನ್ನೇ 'ಅಥ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

### ಈ ಅಧಿಕರಣಕ್ಕೆ ಪ್ರತ್ಯೇಕ ಉಪಾಧಿಯಿದೆ

**भावदीपः – प्रकारान्तरेणेति । सर्वमानविरोधकर्मक्रमादिविरोधबहुत्वसङ्ख्यादि-विरोधोत्पत्तिमत्त्वादि विरोधरूपप्रागुक्तप्रकारापेक्षया मुख्यवृत्तेर्हरौ तदन्यत्र च तुल्यतापत्तिरूपान्यप्रकारेणेत्यर्थः ।।**

'ಪ್ರಕಾರಾಂತರೇಣ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಸರ್ವಮಾನವಿರೋಧ, ಕರ್ಮಕ್ರಮಾದಿವಿರೋಧ, ಬಹುತ್ವಸಂಖ್ಯಾದಿವಿರೋಧ, ಉತ್ಪತ್ತಿಮತ್ವಾದಿವಿರೋಧ, ಎಂಬ ಹಿಂದಿನ ಅಧಿಕರಣಗಳ ಉಪಾಧಿಗಳಿಗಿಂತಲೂ ವಿಭಿನ್ನವಾದ ಉಪಾಧಿಯು ಈ ಅಧಿಕರಣಕ್ಕೆ ಇರುತ್ತದೆ. 'ತುಲ್ಯಾತಾಪತ್ತಿ' ಎಂಬ ಉಪಾಧಿನಿಮಿತ್ತಕವಾಗಿ ಶಬ್ದಗಳು ಶ್ರೀಹರಿಯಲ್ಲಿ ಮತ್ತು ಲೋಕದಲ್ಲಿ ಮುಖ್ಯವೃತ್ತಿಯಿಂದಲೇ ಬರುತ್ತವೆ. ಆದ್ದರಿಂದ ಈ ಅಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸುವುದು ತಪ್ಪಾಗುವುದಿಲ್ಲ.

### ಜ್ಯೋತಿರಧಿಕರಣದ ಉಪಾಧಿಯೇ ಇದಕ್ಕೂ ಉಪಾಧಿ

**भावदीपः – सर्वशब्देति ।।** ज्योतिरधिकरणविषयोपाधिरेवास्यापि विषय इति सूचितम् । तेनैव गतार्थमिदमित्यतः प्रकारान्तरेणेत्याद्युक्तम् । अत्र शास्त्रसङ्गत्यादिकमूह्यम् ।

ಜ್ಯೋತಿರಧಿಕರಣದ ವಿಷಯೋಪಾಧಿಯೇ ಈ ಅಧಿಕರಣದ ಉಪಾಧಿಯು ಆಗುತ್ತದೆಂದು ಸೂಚಿಸಿದ್ದಾರೆ. ಜ್ಯೋತಿರುಕ್ರಮಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಗುತ್ತದಲ್ಲವೆ ? ಎಂಬ

ಆಶಂಕೆಗೆ 'ಪ್ರಕಾರಾಂತರೇಣ'. ಇತ್ಯಾದಿಯಾಗಿ ಹೇಳಿರುತ್ತಾರೆ. ಈ ಅಧಿಕರಣದಲ್ಲಿ ಶಾಸ್ತ್ರಸಂಗತಿ ಅಧಿಕರಣ ಸಂಗತಿ ಮೊದಲಾದವನ್ನು ಸ್ವತಃ ಊಹಿಸಿಕೊಳ್ಳಬೇಕು.

### ಪಾಠ ಪ್ರಕ್ಷೇಪದ ಬಗ್ಗೆ

**भावदीपः** – यदा तु अत्र व्यवहारविलोपप्रसङ्गेन अन्यत्रैव प्रसिद्धानां सर्वशब्दानां परमात्मैकवाचित्वसमर्थनादित्यादिना पूर्वोत्तराधिकरणेष्विव शास्त्रादिसङ्गत्याद्युपपदानपरग्रन्थपाठोऽऽप्यत्र नये क्वचित्कोशेषूपलभ्यते तदा तु व्यक्तमेव ।

'ಅತ್ರ ವ್ಯವಹಾರ.... ಎಂಬ ಟೀಕಾ ಪಂಕ್ತಿಯಿಂದ ಪ್ರಾರಂಭಿಸಿ, .... ಪೂರ್ವಪಕ್ಷಯತಿ' ಎಂಬಲ್ಲಿಯ ತನಕ ಇರುವ ಟೀಕಾವಾಕ್ಯಗಳು ಕೆಲವು ಪುಸ್ತಕಗಳಲ್ಲಿ ಕಾಣಿಸುವುದಿಲ್ಲ. ಅದರ ಬದಲು 'ಅತ ಪುನಃ ಪ್ರಕಾರಾಂತರೇಣ ಪರಮಾತ್ಮನಿ ಸರ್ವಶಬ್ದಸಮನ್ವಯಾಸಂಭವಮಾಶಂಕ್ಯ, ತತ್ಪರಿಹಾರತ್ವೇನ ಸೂತ್ರಮ್ ಅವಧಾರಯತಿ ಸರ್ವೇತಿ' ಎಂಬ ಪಾಠವಿದೆ. ಈ ವಾಕ್ಯವನ್ನು ಅವಲಂಬಿಸಿ ಮೇಲೆ ವ್ಯಾಖ್ಯಾನ ಮಾಡಲಾಯಿತು. ಒಂದುವೇಳೆ 'ಅತ್ರ ವ್ಯವಹಾರಲೋಪಪ್ರಸಂಗೇನ ಅನ್ಯತ್ರೈವ ಪ್ರಸಿದ್ಧಾನಾಂ ಸರ್ವಶಬ್ದಾನಾಂ ಪರಮಾತ್ಮೈಕವಾಚಿತ್ವ ಸಮರ್ಥನಾತ್ ಅಸ್ತಿ ಶಾಸ್ತ್ರಾದಿ ಸಂಗತಿಃ' ಇತ್ಯಾದಿಯಾದ ವಾಕ್ಯಗಳಿದ್ದಾಗ ಹಿಂದಿನ - ಮುಂದಿನ ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಶಾಸ್ತ್ರಸಂಗತಿ ಮೊದಲಾದವನ್ನು ತಿಳಿಯಬೇಕು. ಈ ಪಾಠವು ಕೆಲವು ಪುಸ್ತಕಗಳಲ್ಲಿ ಕಾಣಿಸುತ್ತಿದೆ. ಅತ್ಯಂತ ಸ್ಪಷ್ಟವಾಗಿಯೇ ಸಂಗತ್ಯಾದಿಗಳನ್ನು ಹೇಳಿರುವುದರಿಂದ ಪುನಃ ಇದಕ್ಕೆ ವ್ಯಾಖ್ಯಾನ ಮಾಡುವ ಅವಶ್ಯಕತೆಯಿಲ್ಲ.

### ಆಪಾದದಕ್ಕೆ ಅಸಿದ್ಧಿ ಪರಿಹಾರ

**भावदीपः** – भाष्योक्तापादकस्यासिद्धिनिरासाय प्राक्तनं स्मारयन् व्याचष्टे – यदुक्तमिति ।। पूर्वनयैरित्यर्थः ।

ಭಾಷ್ಯದಲ್ಲಿ ಹೇಳಿದ ಆಪಾದಕಕ್ಕೆ ಅಸಿದ್ಧಿಯನ್ನು ಪರಿಹರಿಸಲು ಹಿಂದೆ ಹೇಳಿದ್ದನ್ನು ಸ್ಮರಣೆಗೆ ತಂದುಕೊಡುವ ಮೂಲಕ 'ಯದುಕ್ತಮ್' ಇತ್ಯಾದಿ ಟೀಕೆಯು ಹೊರಟಿದೆ. 'ಯದುಕ್ತಮ್' ಎಂದರೆ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಎಂದರ್ಥ.

'ಸಾಕ್ಷಾದಪಿ' ಎಂಬ ಸೂತ್ರದಿಂದ ಗತಾರ್ಥವಲ್ಲ

**भावदीपः – ननु भाष्ये कथमन्यत्र व्यवहार इति चोद्यमयुक्तम् । 'साक्षादपि' इत्यादि सूत्रैरेवास्य निरस्तत्वादित्यत आह – यदपीति ।।**

ಭಾಷ್ಯದಲ್ಲಿ 'ಕಥಂ ಅನ್ಯತ್ರ ವ್ಯವಹಾರಃ' ಎಂಬ ಆಕ್ಷೇಪವಿದೆ ಇದು ಅಯುಕ್ತ. ಏಕೆಂದರೆ 'ಸಾಕ್ಷಾದಪಿ' ಇತ್ಯಾದಿ ಸೂತ್ರಗಳಿಂದಲೇ ಈ ಆಶಂಕೆಯನ್ನು ನಿರಾಕರಣೆ ಮಾಡಿದ್ದಾಗಿದೆಯಲ್ಲವೆ? ಎಂಬ ಪ್ರಶ್ನೆಗೆ 'ಯದಪಿ' ಇತ್ಯಾದಿ ಟೀಕೆಯು ಹೊರಟಿದೆ.

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಸಮನ್ವಯ ಮಾಡಿದ್ದೇನು?

**भावदीपः – विष्णुवाचकैरेव अनन्यगत्या हानाद्यर्थमन्यत्र व्यवहार इति यदुक्तं लिङ्गपादान्त्यनय इत्यर्थः ।।**

ವಿಷ್ಣುವನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನೇ ಬೇರೆ ಗತಿಯಿಲ್ಲದೆ ಲೋಕದಲ್ಲಿ ಪ್ರಯೋಗ ಮಾಡುತ್ತೇವೆ. ಹೀಗೆ ಲಿಂಗಪಾದದ ಕೊನೆಯ ಅಧಿಕರಣದಲ್ಲಿ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಲ್ಲಿ ಸಮರ್ಥಿಸಲಾಯಿತು ಎಂದು 'ಯದಪಿ' ಇತ್ಯಾದಿ ವಾಕ್ಯದ ಅಭಿಪ್ರಾಯ.

ಅವ್ಯವಸ್ಥಾ ಪದಕ್ಕೆ ಅರ್ಥ

**भावदीपः – अव्यवस्थेति ।। वह्निपदेन जलादिव्यवहारस्याप्यापातादित्यर्थः।।**

ಟೀಕೆಯಲ್ಲಿರುವ ಅವ್ಯವಸ್ಥಾ ಪದಕ್ಕೆ ಹೀಗರ್ಥ - ಯಾವುದೋ ಪದವನ್ನು ಮತ್ತೆಲ್ಲೋ ವ್ಯವಹರಿಸುವುದಾದರೆ ವಹ್ನಿಪದವನ್ನು ಜಲಾದಿಗಳಲ್ಲಿಯೂ ವ್ಯವಹರಿಸಬೇಕಾದೀತು ಎಂದು.

ಅನುಮಾನಿಕಸೂತ್ರದಲ್ಲಿ ಸಮನ್ವಯ ಮಾಡಿದ್ದೇನು ?

**भावदीपः – यदप्यत्रेति ।। आनुमानिकसूत्रे तत्तच्छब्दवाच्येश्वरसम्बन्धात्तत्र तत्र तच्छब्दव्यवहारो गङ्गासम्बन्धाद् गङ्गापदस्य तीर इवेति यदुक्तमत्र चोद्ये समाधानमित्यर्थः ।।**

'ಯದಪ್ಯತ್ರ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - "ಆನುಮಾನಿಕ ಸೂತ್ರದಲ್ಲಿ ಆಯಾಶಬ್ದಗಳಿಂದ ವಾಚ್ಯನಾದ ಈಶ್ವರನ ಸಂಬಂಧವಿರುವ ಪ್ರಯುಕ್ತ ಬೇರೆ ಪದಾರ್ಥಗಳು

ಆಯಾಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆ. ಗಂಗಾಸಂಬಂಧದಿಂದ ತೀರದಲ್ಲಿ ಗಂಗಾಪದವನ್ನು ಪ್ರಯೋಗಿಸಿದಂತೆ ಹೀಗೆ ಸಮರ್ಥಿಸಿದ್ದಾರೆ. ಅದನ್ನು ಇಲ್ಲಿಯೂ ಆಕ್ಷೇಪಿಸಿ ಸಮಾಧಾನವನ್ನು ತಿಳಿಯಬೇಕು''.

### ಪುನರುಕ್ತಿಯ ಪರಿಹಾರ

**ಭಾವದೀಪಃ – रूढ्याद्युपेत्येति ।। अन्यत्रेत्यनुषङ्गः । एतेन प्रसङ्गात् सूत्राणामपौनरुक्त्यं दर्शितम् ।। प्रतिज्ञेति ।। समन्वयसूत्रोक्तप्रतिज्ञेयत्यर्थः ।।**

'ರೂಢ್ಯಾದ್ಯುಪೇತ್ಯತಿ' ಎಂಬಲ್ಲಿ ಅನ್ಯತ್ರಪದವನ್ನು ಅನುಷಂಗ ಮಾಡಿಕೊಳ್ಳಬೇಕು. ಇದರಿಂದ ಪ್ರಾಸಂಗಿಕವಾಗಿ ಪುನರುಕ್ತಿದೋಷವನ್ನು ಪರಿಹರಿಸಿದಂತಾಗುತ್ತದೆ. 'ಪ್ರತಿಜ್ಞಾವ್ಯಾಘಾತಾತ್' ಎಂದರೆ ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞಾ ವ್ಯಾಘಾತದ ದೋಷ ಬರುತ್ತದೆ ಎಂದರ್ಥ.

### 'ಯೋಗರೂಢ್ಯೋರೇವ' ಎಂಬ ಟೀಕಾವಾಕ್ಯಕ್ಕೆ ಪೀಠಿಕೆ

**ಭಾವದೀಪಃ – तत्रोक्तसप्तवृत्तीनामपि मुख्यत्वाभावात् कथमेवमित्यतो व्यनक्ति – योगरूढ्योरेवेति ।।**

ಏಳು ಬಗೆಯ ಶಬ್ದವೃತ್ತಿಗಳಲ್ಲಿ ಯಾವುದೂ ಕೂಡ ಮುಖ್ಯವಾಗದ ಕಾರಣ ಮುಖ್ಯವೃತ್ತಿಯಿಂದ ಶಬ್ದಗಳ ಸಮನ್ವಯವನ್ನು ಹೇಗೆ ಮಾಡುತ್ತೀರಿ ? ಎಂಬ ಪ್ರಶ್ನೆಗೆ 'ಯೋಗರೂಢ್ಯೋರೇವ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

### ಯೋಗರೂಢಿಗಳೆಂದರೆ ಯಾವುದು ?

**ಭಾವದೀಪಃ – योगरूढ्योरत्रोपलक्षणया महायोगविद्वद्रूढ्योरीशे सिद्धान्तभिमतयोर्व्यवच्छेदायैवकारः एवमभिप्रायं वर्णयित्वोपसंहाररूपेण भाष्यं योजयति – अत इति ।।**

ಯೋಗರೂಢಿಗಳನ್ನು ಇಲ್ಲಿ ಉಪಲಕ್ಷಣಯಾ ಸ್ವೀಕರಿಸಬೇಕು. ಮಹಾಯೋಗ ಮತ್ತು ವಿದ್ವದ್ ರೂಢಿಗಳಿಂದ ಶಬ್ದಗಳು ಈಶ್ವರನಲ್ಲಿ ಬಂದಿರುತ್ತವೆಂದು ಸಿದ್ಧಾಂತಿಗಳಿಗೆ ಅಭಿಮತವಾಗಿದೆ. ಅದನ್ನು

ವ್ಯವಚ್ಛೇದ ಮಾಡಲು 'ಏವ'ಕಾರವನ್ನು ಟೀಕೆಯಲ್ಲಿ ಹೇಳಿರುತ್ತಾರೆ. ಹೀಗೆ ಭಾಷ್ಯದ ಅಭಿಪ್ರಾಯವನ್ನು ವ್ಯಾಖ್ಯಾನ ಮಾಡಿ ಪೂರ್ವಪಕ್ಷದ ಉಪಸಂಹಾರರೂಪದಿಂದ ಭಾಷ್ಯವನ್ನು ಯೋಜನೆ ಮಾಡಲು 'ಅಥ' ಇತ್ಯಾದಿ ವಾಕ್ಯವು ಹೊರಟಿದೆ.

### ಮುಖ್ಯವೃತ್ತಿ ಎಂದರೆ ಯಾವುದು ?

**भावदीपः** – योगरूढिव्यतिरिक्तमुख्यवृत्तेरभावादित्यर्थः । मुख्यवृत्त्येति शेषोक्तिः । योगरूढिरूपयेत्यर्थः ।

'ಅತಃ' ಎಂದರೆ ಯೋಗ ಹಾಗೂ ರೂಢಿಗಳಿಂದ ಅತಿರಿಕ್ತವಾದ ಮುಖ್ಯವೃತ್ತಿಯು ಇಲ್ಲದ್ದರಿಂದ ಎಂದರ್ಥ. 'ಮುಖ್ಯವೃತ್ತ್ಯಾ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಯೋಗರೂಢಿಯ ರೂಪವಾದ ಮುಖ್ಯವೃತ್ತಿಯಿಂದ ಎಂದು ಇದರರ್ಥ.

### ಸ್ವಾತಂತ್ರ್ಯ ಹಾಗೂ ತದ್ಗತತ್ವ ಇವೆರಡು ಪ್ರವೃತ್ತಿನಿಮಿತ್ತ

**भावदीपः** – "स्वातन्त्र्यं तद्गतत्वं च शब्दवृत्तेर्हि कारणम् । स्वातन्त्र्यं तत्र मुख्यं स्यात्" इति तदधीनत्वसूत्रानुव्याख्यानोक्त स्वातन्त्र्यनिमित्तकमुख्यवृत्त्या शब्दानामीश्वरवाचित्वे बाधकाभावेऽपि तद्गतत्वनिमित्तकमुख्यवृत्त्येश्वरवाचित्वेऽन्यत्र व्यवहारलोपः स्यादेव । लोके योगरूढिरूपमुख्यवृत्तेरभावस्य प्राप्तत्वादिति भावः ।

"ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ । ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ।" ಎಂಬುದಾಗಿ 'ತದಧೀನತ್ವಾತ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿವೃತ್ತಿನಿಮಿತ್ತದಿಂದ ಶಬ್ದಗಳು ಮುಖ್ಯವಾಗಿ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಯಾವುದೇ ಬಾಧಕಗಳು ಇರುವುದಿಲ್ಲ. ಆದರೆ 'ತದ್‌ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಉದ್ದೇಶಿಸಿ ಮುಖ್ಯವೃತ್ತಿಯಿಂದ ಈಶ್ವರನೇ ಪ್ರತಿಪಾದ್ಯನೆಂದು ಹೇಳುವುದಾದರೆ ಬೇರೆಡೆ ಇರುವ ವ್ಯವಹಾರವು ಲೋಪವಾಗಬೇಕಾಗುತ್ತದೆ. ಏಕೆಂದರೆ ಲೋಕದಲ್ಲಿ ಯೋಗ ಹಾಗು ರೂಢಿಗಳೆಂಬ ಮುಖ್ಯವೃತ್ತಿಯು ಇಲ್ಲವೆಂದು ಹೇಳಿದಂತಾಗುತ್ತದೆ.

ಭಾಷ್ಯಕ್ಕೆ ವ್ಯಾಖ್ಯಾನ

**भावदीपः – उक्ताशङ्कां निषेधन् तत्र परम्पराहेतुत्वेन भाष्यं व्याचष्टे – न परमात्मन इति ।। मुख्यतः योगादिवृत्त्या । तत्र लोके ।।**

ಹಿಂದೆ ಹೇಳಿದ ಆಶಂಕೆಯನ್ನು ನಿರಾಕರಣೆ ಮಾಡುತ್ತಾ ಪರಂಪರಾರೂಪವಾದ ಹೇತುವಿನಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಪರಮಾತ್ಮನಃ' ಇತ್ಯಾದಿ ಟೀಕೆಯು ಹೊರಟಿದೆ. 'ಮುಖ್ಯತಃ' ಎಂದರೆ ಯೋಗಾದಿವೃತ್ತಿಯಿಂದ ಮುಖ್ಯವಾಗಿ ಎಂದರ್ಥ. 'ತತ್ರ' ಎಂಬ ಪದಕ್ಕೆ 'ಲೋಕೇ' ಎಂದರ್ಥ.

'ನಾಮಾನಿ ವಿಶ್ವಾನಿ' ಇತ್ಯಾದಿ ಶ್ರುತಿಗಳ ಆಧಾರ

**भावदीपः – उभयोरिति ।। ब्रह्मतदन्ययोरित्यर्थः । तथा च तत्त्वित्यवधारणायोगो 'नामानि विश्वानि न सन्ति लोके' 'यो देवानां नामधा एक एव' इत्याद्ययोगश्चेति भावः ।।**

'ಉಭಯೋಃ' ಎಂಬ ಪದಕ್ಕೆ ಬ್ರಹ್ಮ ಹಾಗು ಇತರ ಪದಾರ್ಥಗಳಿಗೆ ಎಂದರ್ಥ. ಆದ್ದರಿಂದ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ತು' ಶಬ್ದದಿಂದ ಅವಧಾರಣವನ್ನು ಹೇಳಿದ್ದು ಅಯುಕ್ತವಾಗುತ್ತದೆ. 'ನಾಮಾನಿ ವಿಶ್ವಾನಿ ನ ಸಂತಿ ಲೋಕೇ' 'ಯೋ ದೇವಾನಾಂ ನಾಮಾಧಾ ಏಕ ಏವ' ಇತ್ಯಾದಿ ಶ್ರುತಿಗಳ ಮುಖ್ಯ ತಾತ್ಪರ್ಯವೂ ಕೂಡ ಅಯುಕ್ತವಾಗಬೇಕಾದೀತು ಎಂದು ಅಭಿಪ್ರಾಯ.

ಬೇರೆಡೆ ಇರುವ ಪ್ರವೃತ್ತಿನಿಮಿತ್ತವು ಅತ್ಯಲ್ಪ

**भावदीपः – स्वत इति ।। अनन्यापेक्षयेत्यर्थः । मुख्यवृत्त्या महायोग-विद्वद्रूढिवृत्त्येत्यर्थः ।। व्यवहारेति ।। हानादिव्यवहारेत्यर्थः ।। अल्पेति ।। अन्यत्रेत्यनुषङ्गः । भाष्योक्तिरुपलक्षणमिति भावः ।।**

'ಸ್ವತಃ' ಎಂಬ ಪದಕ್ಕೆ ಮತ್ತೊಂದರ ಅಪೇಕ್ಷೆ ಇಲ್ಲದೆ ಎಂದರ್ಥ. 'ಮುಖ್ಯವೃತ್ತ್ಯಾ' ಎಂಬ ಪದಕ್ಕೆ ಮಹಾಯೋಗ ಮತ್ತು ವಿದ್ವದ್‌ರೂಢಿಯಿಂದ ಎಂದರ್ಥ. ವ್ಯವಹಾರಪದಕ್ಕೆ ಹಾನಾದಿವ್ಯವಹಾರ ಎಂದರ್ಥ. ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಶಬ್ದಗಳ ಗುಣಧರ್ಮಗಳು ಪರಮಾತ್ಮನಲ್ಲಿವೆ. ಅದೇ ರೀತಿಯಾಗಿ ಲೌಕಿಕಪದಾರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಗುಣಧರ್ಮಗಳೂ ಕೂಡ ಲೌಕಿಕ ವಸ್ತುಗಳಲ್ಲೇ ಇರುತ್ತವೆ. ಹೀಗೆ ಉಭಯವಿಧವಾದ ಶಬ್ದಗಳಲ್ಲಿ ಸಾಮ್ಯವಿರುತ್ತದೆ. ಆದ್ದರಿಂದ ಪರಮಾತ್ಮ

ವಾಚಕವಾದ ಶಬ್ದಗಳನ್ನು ಲೋಕದಲ್ಲಿ ಸಮಾಕರ್ಷಣೆ ಮಾಡಿ ವ್ಯವಹರಿಸುತ್ತೇವೆಂದು ಹೇಳಿರುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಲ್ಪ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಅಲ್ಪವಾದ ಪ್ರವೃತ್ತಿನಿಮಿತ್ತಗಳು ಲೌಕಿಕಪದಾರ್ಥಗಳಲ್ಲಿವೆ. ಅದು ಪರಮಾತ್ಮನ ಅಧೀನವಾದ್ದರಿಂದ ಪರಮಾತ್ಮನೇ ಮುಖ್ಯವಾಗಿ ಶಬ್ದಪ್ರತಿಪಾದ್ಯನಾಗುತ್ತಾನೆಂದು ಅಭಿಪ್ರಾಯ. ಪ್ರವೃತ್ತಿನಿಮಿತ್ತಗಳು ಪರಮಾತ್ಮನ ಅಪೇಕ್ಷೆಯಿಲ್ಲದೇ ಲೌಕಿಕ ಪದಾರ್ಥಗಳಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಎರಡೂ ಕಡೆ ಮುಖ್ಯಾರ್ಥವು ಸಮಾನವಾಗುವುದಿಲ್ಲವೆಂದು ತಿಳಿಯಬೇಕು. 'ಅಲ್ಪಪ್ರವೃತ್ತಿನಿಮಿತ್ತಾನಾಮ್' ಎಂಬಲ್ಲಿ 'ಅನ್ಯತ್ರ' ಎಂಬ ಪದವನ್ನು ಅನುಷಂಗ ಮಾಡಿಕೊಳ್ಳಬೇಕು. ಭಾಷ್ಯದಲ್ಲಿ 'ಪರಮಾತ್ಮವಾಚಿನ' ಇತ್ಯಾದಿಯಾಗಿ ಹೇಳಿರುವುದು ಉಪಲಕ್ಷಣವಾಗಿದೆಯೆಂದು ಇದರಿಂದ ತಿಳಿಯುತ್ತದೆ.

### ಹಿಂದಿನ ಸೂತ್ರಗಳಿಂದ ವಿರೋಧವಿಲ್ಲ

**भावदीपः – प्राचीनेति** ।। पूर्वोदाहृतैः साक्षादपीत्यादिसूत्रैर्विरोध इत्यर्थः। द्वितीये आनुमानिकसूत्रे अत्रोक्तस्य मुख्यत्वमात्रस्य । तृतीये कल्पनेतिसूत्रे।।

'ಪ್ರಾಚೀನಸೂತ್ರವಿರೋಧಃ' ಎಂದರೆ ಹಿಂದೆ ಉದಾಹರಿಸಲ್ಪಟ್ಟ 'ಸಾಕ್ಷಾದಪಿ' ಇತ್ಯಾದಿ ಸೂತ್ರಗಳ ವಿರೋಧ ಬರುತ್ತದೆ ಎಂದರ್ಥ. 'ದ್ವಿತೀಯೇ' ಎಂದರೆ ಆನುಮಾನಿಕ ಸೂತ್ರದಲ್ಲಿ ಎಂದರ್ಥ. 'ಅತ್ರೋಕ್ತಸ್ಯ' ಎಂದರೆ ಲೋಕದ ಪದಾರ್ಥಗಳಲ್ಲಿರುವ ಮುಖ್ಯತ್ವಕ್ಕೆ ಎಂದರ್ಥ. 'ತೃತೀಯೇ' ಎಂದರೆ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದಲ್ಲಿ ಎಂದರ್ಥ.

### ಮಹಾಯೋಗ ವಿದ್ವದ್ರೂಢಿಗಳಿಂದ ಪರಮಾತ್ಮನು ಪ್ರತಿಪಾದ್ಯ

**भावदीपः – अविवेचितेति** ।। भगवति महायोगविद्वद्रूढी । अन्यत्र तु रूढ्यादिमात्रमित्येवंरूपेणेत्यर्थः । एतेन पूर्वाधिकरणेषु तत्र तत्र विष्णौ शब्दानां महायोगविद्वद्रूढिभ्यां मुख्यत्वकीर्तनं त्वत्रत्यन्यायानुसन्धानेनेति दर्शितम् । इति शब्दः समासौ ।।१।।

'ಅವಿವೇಚಿತ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ಭಗವಂತನು 'ಮಹಾಯೋಗ' ಹಾಗೂ 'ವಿದ್ವದ್‌ರೂಢಿ'ಗಳಿಂದ ಪ್ರತಿಪಾದ್ಯನಾಗುತ್ತಾನೆ. ಬೇರೆ ಪದಾರ್ಥಗಳು ರೂಢಿ, ಯೋಗ ಮೊದಲಾದ ವೃತ್ತಿಗಳಿಂದ ಪ್ರತಿಪಾದ್ಯವಾಗುತ್ತವೆ. ಇದನ್ನು ತಿಳಿಯದೆ ಎಂದರ್ಥ.

ಹೀಗೆ ಹೇಳಿದ್ದರಿಂದ ಹಿಂದಿನ ಅಧಿಕರಣಗಳಲ್ಲಿ ಆಯಾ ಶಬ್ದಗಳನ್ನು ವಿಷ್ಣುವಿನಲ್ಲಿ ಮಹಾಯೋಗ ಹಾಗೂ ವಿದ್ವದ್‌ರೂಢಿಗಳಿಂದ ಮುಖ್ಯವಾಗಿ ಸಮರ್ಥನೆ ಮಾಡಿದ್ದು ಈ ಅಧಿಕರಣದ ಸಿದ್ಧಾಂತನ್ಯಾಯವನ್ನು ಅನುಸರಿಸಿ ಎಂದು ತಿಳಿಯಬೇಕು. ಕೊನೆಯಲ್ಲಿರುವ 'ಇತಿ' ಶಬ್ದವು ಸಮಾಪ್ತ್ಯರ್ಥದಲ್ಲಿದೆ.

## ಬ್ರಹ್ಮಸೂತ್ರ

### 'ಜಗದ್ವಾಚಿತ್ವಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – ।। जगद्वाचित्वात् ।। २ ।।**

ಸೂತ್ರಾರ್ಥ - ಲೌಕಿಕವಸ್ತುಗಳಲ್ಲೇ ಎಲ್ಲರೂ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಪರಮಾತ್ಮನಲ್ಲಿ ಪ್ರಯೋಗಿಸುವುದಿಲ್ಲ. ಹೀಗೆ ಅಜ್ಞರೂಢಿಯಿಂದ ಶಬ್ದಗಳು ಲೌಕಿಕವಸ್ತುಗಳಲ್ಲಿ ಪ್ರಸಿದ್ಧವಾಗಿವೆ.

ಅರ್ಥ -- ಲೋಕವ್ಯವಹಾರವಿರುವುದರಿಂದ ಶಬ್ದಗಳು 'ಜಗದ್ವಾಚಿತ್ವಾತ್' ಆಯಾ ವಸ್ತುಗಳನ್ನು ಪ್ರತಿಪಾದನೆ ಮಾಡುತ್ತವೆ ಎಂದು ಪ್ರಸಿದ್ಧಿಯಿರುವುದರಿಂದ, ವಿಷ್ಣುಮುಖ್ಯಾರ್ಥನಾಗಿದ್ದರೂ ಬೇರೆ ವಸ್ತುಗಳನ್ನೂ ಕೂಡ ಶಬ್ದಗಳು ಪ್ರತಿಪಾದನೆ ಮಾಡುತ್ತವೆ.

## ಬ್ರಹ್ಮಸೂತ್ರಭಾಷ್ಯ

### ಎಲ್ಲಾ ಶಬ್ದಗಳು ಜಗತ್ತಿನಲ್ಲಿ ಹೇಗೆ ಪ್ರಸಿದ್ಧವಾದವು?

**ब्रह्मसूत्रभाष्यम् – तर्हि कथं तेषां शब्दानां जगति प्रसिद्धिः ?**

ಅನುವಾದ - ಎಲ್ಲಾ ಶಬ್ದಗಳು ಭಗವದ್ವಾಚಕಗಳಾದರೆ, ಜಗತ್ತಿನಲ್ಲಿ ಹೇಗೆ ಪ್ರಸಿದ್ಧವಾಗಿವೆ ?

ಪ್ರತಿಪದಾರ್ಥ -- ಆಶಂಕಿಸುತ್ತಿದ್ದಾರೆ –

ತರ್ಹಿ = ಶಬ್ದಗಳು ಮುಖ್ಯವಾಗಿ ಪರಮಾತ್ಮನ ಪ್ರತಿಪಾದಕಗಳೇ ಆದರೆ, ತೇಷಾಂ = ಆ ಶಬ್ದಗಳಿಗೆ, ಜಗತಿ = ಜಗತ್ತಿನಲ್ಲಿ, ಪ್ರಸಿದ್ಧಿಃ = ಪ್ರಸಿದ್ಧಿಯು, ಕಥಂ = ಹೇಗೆ ತಾನೆ ಬರುತ್ತದೆ?

### ಅಜ್ಞರೂಢಿಯಿಂದ ವ್ಯವಹಾರ

**ब्रह्मसूत्रभाष्यम् – जगतिहि व्यवहारो लोकस्य, न तु परमात्मनि तथा । अतो जगति प्रसिद्धिः शब्दानाम् ।।२।।**

ಅನುವಾದ - ಸಕಲಶಬ್ದಗಳ ಪ್ರಯೋಗವನ್ನು ಮಂದಜನರು ಜಗತ್ತಿನಲ್ಲೇ ಮಾಡುತ್ತಾರೆ. ಹೊರತು, ಪರಮಾತ್ಮನಲ್ಲಿ ಮಾಡುವುದಿಲ್ಲ. ಹೀಗೆ ಅಜ್ಞರೂಢಿಯಿಂದ ಶಬ್ದಗಳು ಜಗತ್ತಿನಲ್ಲಿ ಪ್ರಸಿದ್ಧವಾಗಿವೆ.

ಪ್ರತಿಪದಾರ್ಥ -- ಹಿಂದಿನ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ಲೋಕಸ್ಯ = ಮಂದ ಜನರ, ವ್ಯವಹಾರಃ = ವ್ಯವಹಾರವು, ಜಗತಿ = ಜಗತ್ತಿನಲ್ಲಿ, ಯಥಾ = ಹೇಗೆ ಮುಖ್ಯವಾಗಿದೆಯೋ, ತಥಾ = ಆದರಂತೆ, ಪರಮಾತ್ಮನಿ = ಪರಮಾತ್ಮನಲ್ಲಿ, ನತು = ಇರುವುದಿಲ್ಲ. ಅತ = ಆದ್ದರಿಂದ, ಶಬ್ದಾನಾಮ್ = ಶಬ್ದಗಳಿಗೆ, ಜಗತಿ = ಲೋಕದಲ್ಲಿ, ಪ್ರಸಿದ್ಧಿಃ = ಪ್ರಯೋಗ ಪ್ರಸಿದ್ಧಿಯು ಇರುತ್ತದೆ.

### ಸತ್ತರ್ಕದೀಪಾವಳಿ

ಪ್ರಸಿದ್ಧಿಯ ಅನ್ಯಥಾನುಪಪತ್ತಿಯಿಂದ ಜಗದ್ವಾಚಕತ್ವವನ್ನು ಒಪ್ಪಬೇಕಲ್ಲವೇ?

**सत्तर्कदीपावळिः – ननु यदि परमात्मवचिनां शब्दानां समाकर्षादेव जगति व्यवहारः । न तु तद्वाचकत्वम् । तर्हि तेषां जगति प्रसिद्धिः न स्यात्। अन्यथानुपपत्त्या जगतोऽपि वाचकास्त इत्याशङ्क्याह । तर्हीति ।**

ಒಂದು ವೇಳೆ ಪರಮಾತ್ಮವಾಚಕವಾದ ಶಬ್ದಗಳನ್ನು ಸಮಾಕರ್ಷಣ ಮಾಡಿ, ಜಗತ್ತಿನಲ್ಲಿ ವ್ಯವಹರಿಸಬೇಕು. ಆ ಶಬ್ದಗಳು ಜಗತ್ತಿನಲ್ಲಿರುವ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ ಎಂಬುದಾಗಿ ಒಪ್ಪಬಾರದು ಎನ್ನುತ್ತಿರುವಿರಿ. ಹಾಗಾದಲ್ಲಿ ಶಬ್ದಗಳು ಜಗತ್ತಿನಲ್ಲಿ ಪ್ರಸಿದ್ಧವೇ ಇಲ್ಲದೇ ಇರಬೇಕಾಗುತ್ತದೆ. ಪ್ರಸಿದ್ಧಿಯಿರುವುದರಿಂದ ಅನ್ಯಥಾನುಪಪತ್ತಿ ಪ್ರಮಾಣವನ್ನು

ಅವಲಂಬಿಸಿ ಶಬ್ದಗಳು ಜಗದ್ವಾಚಕವೂ ಆಗುತ್ತವೆ ಎಂದು ಹೇಳಬೇಕಲ್ಲವೇ ? ಈ ಆಶಂಕೆಗೆ ಉತ್ತರಿಸಲು 'ತರ್ಹಿ' ಇತ್ಯಾದಿ ಭಾಷ್ಯವು ಹೊರಟಿದೆ.

ಜಗತ್ತಿನಲ್ಲಿ ಶಬ್ದಗಳು ಹೇಗೆ ಪ್ರಸಿದ್ಧವಾದವು ?

**सत्तर्कदीपावलिः – यः सर्वस्यान्तर्नियामकः तत्तच्छब्दबद्धमुख्यार्थः । यतश्च समाकृष्टाः शब्दाः तस्य स्वव्यवहारागोचरत्वात् । तदनभिज्ञोऽयं जनः तत्तच्छब्दैर्जगद्वाचकैरपि स्वव्यवहारगोचरजगविक्ति । अतस्तेषां जगति प्रसिद्धिरित्यर्थः ।**

ಯಾವ ಪರಮಾತ್ಮನು ಪ್ರತಿಯೊಂದು ಪದಾರ್ಥಗಳ ಅಂತರ್ಯಾಮಿಯಾಗಿದ್ದು ನಿಯಾಮಕನಾಗಿದ್ದಾನೋ, ಅವನೇ ಆಯಾ ಶಬ್ದಗಳ ಮುಖ್ಯಾರ್ಥನಾಗಿದ್ದಾನೆ. ಅವನಲ್ಲಿರುವ ಶಬ್ದಗಳನ್ನೇ ಸಮಾಕರ್ಷಣ ಮಾಡಿ, ಜನರುಗಳು ತಮ್ಮ ವ್ಯವಹಾರಕ್ಕೋಸ್ಕರ ಶಬ್ದಗಳನ್ನು ಉಪಯೋಗಿಸುತ್ತಿದ್ದಾರೆ. ಈ ಪ್ರಮೇಯವನ್ನು ಅರಿಯದ ಅಜ್ಞಾನಿಗಳು ಈ ಘಟ-ಪಟಾದಿ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿರುವುದಿಲ್ಲ. ಈ ಪದಾರ್ಥಗಳೇ ಪ್ರತಿಪಾದ್ಯ-ವಾಗಿವೆಯೆಂದು ತಿಳಿದುಬಿಟ್ಟಿದ್ದಾರೆ. ಆದ್ದರಿಂದಲೇ ಶಬ್ದಗಳು ಜಗತ್ತಿನಲ್ಲಿ ಪ್ರಸಿದ್ಧವಾಗಿವೆ.

## ತತ್ವಪ್ರದೀಪ

### ಅಜ್ಞರೂಢಿಯಿಂದ ಲೋಕವ್ಯವಹಾರ

**तत्वप्रदीपः – कथं तर्हि तेषां जगति वाचकत्वप्रसिद्धिः इत्यत आह - जगत्वाचित्वात् ।।छ।।**

ಎಲ್ಲಾ ಶಬ್ದಗಳು ವಿಷ್ಣುವನ್ನೇ ಪ್ರತಿಪಾದನೆ ಮಾಡುವುದಾದರೆ, ಜಗತ್ತಿನಲ್ಲಿ ಆ ಶಬ್ದಗಳಿಂದ ವ್ಯವಹಾರ ಮಾಡುವುದು ಹೇಗೆ ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಜಗದ್ವಾಚಿತ್ವಾತ್' ಎಂಬ ಸೂತ್ರ ಹೊರಟಿದೆ.

## ತತ್ವಪ್ರಕಾಶಿಕಾ

### ಹರಿಪರವಾದ ಶಬ್ದಗಳಿಗೆ ಲೋಕದಲ್ಲಿ ಸಂಕೇತ ಮಾತ್ರ

**यदि शब्दाः परमात्मन्येव मुख्याः; अन्यत्र तु ततः समाकृष्य सङ्केतितत्वेनाऽमुख्याः, तर्हि तेषां मुख्यार्थे परमात्मन्येव प्रसिद्धिः स्यात्, न त्वमुख्यार्थे जगति । अग्निशब्दस्य माणवके प्रसिद्ध्यदर्शनात् । अस्ति चासौ जगति। अतस्तदन्यथानुपपत्त्याऽन्यस्यैव मुख्यवाच्यत्वमिति भावेनाऽऽशङ्कते – तर्हीति।।**

ಸಕಲಶಬ್ದಗಳು ಪರಮಾತ್ಮನಲ್ಲಿಯೇ ಮುಖ್ಯವೃತ್ತಿಯಿಂದ ಇರುತ್ತವೆ. ಬೇರೆ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಇರುತ್ತವೆ. ಪರಮಾತ್ಮನಲ್ಲಿರುವ ಶಬ್ದಗಳನ್ನೇ ಸಮಾಕರ್ಷ ಮಾಡಿ, ಲೌಕಿಕಪದಾರ್ಥಗಳಲ್ಲಿ ಸಂಕೇತವನ್ನು ಒಪ್ಪಬೇಕು. ಆದ್ದರಿಂದ ಲೌಕಿಕ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದಲೇ ಶಬ್ದಗಳು ಇರುತ್ತವೆಂದು ಇಲ್ಲಿಯ ತನಕ ಸಮರ್ಥನೆ ಮಾಡಿದಿರಿ. ಹಾಗಾದರೆ ಆ ಎಲ್ಲಾ ಶಬ್ದಗಳಿಗೂ ಮುಖ್ಯಾರ್ಥನಾದ ಪರಮಾತ್ಮನಲ್ಲಿಯೇ ಪ್ರಸಿದ್ಧಿಯಿದೆ. ಉಳಿದ ಪದಾರ್ಥಗಳಲ್ಲಿ ಪ್ರಸಿದ್ಧಿಯಿರುವುದಿಲ್ಲ ಎಂದಂತಾಯಿತು. ಹೇಗೆಂದರೆ ಅಗ್ನಿಶಬ್ದಕ್ಕೆ ಮುಖ್ಯಾರ್ಥ 'ಬೆಂಕಿ' ಎಂದು. ಅಮುಖ್ಯಾರ್ಥ 'ಬ್ರಹ್ಮಚಾರಿ' ಎಂದು. ಅಗ್ನಿಶಬ್ದವನ್ನು ಕೇಳಿದಾಗ 'ಬ್ರಹ್ಮಚಾರಿ' ಎಂಬ ಅರಿವು ಯಾರಿಗೂ ಬರುವುದಿಲ್ಲ. ಅದರಂತೆ ಜಗತ್ತಿನ ವಿಷಯದಲ್ಲಿ ಹೇಳಬೇಕು. ಆದರೆ ಯಾವುದೇ ಶಬ್ದಗಳನ್ನು ಪ್ರಯೋಗ ಮಾಡಿದಾಗ ಜಗತ್ತಿನಲ್ಲಿಯೇ ಪ್ರಸಿದ್ಧಿಯಿರುವುದು ಕಂಡಿದೆ. ಶಬ್ದದ ಮುಖ್ಯಾರ್ಥವನ್ನು ಒಪ್ಪದೇ ಲೋಕಪ್ರಸಿದ್ಧಿಯು ಉಪಪನ್ನವಾಗುವುದಿಲ್ಲ. ಹೀಗೆ ಅನ್ಯಥಾನುಪಪತ್ತಿ ಪ್ರಮಾಣದಿಂದ ಶಬ್ದಗಳು ಲೋಕದ ವಸ್ತುಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ತರ್ಹಿ' ಎಂಬ ವಾಕ್ಯದಿಂದ ಆಕ್ಷೇಪ ಮಾಡಿದ್ದಾರೆ.

### ಲೌಕಿಕಾರ್ಥಗಳಲ್ಲಿಯೂ ಮುಖ್ಯಾರ್ಥತ್ವವಿದೆ

**तत्वप्रकाशिका – तत्परिहारत्वेन सूत्रं पठित्वा व्याचष्टे – जगदिति ।। न प्रसिद्ध्यन्यथानुपपत्त्याऽन्यस्यैव मुख्यवाच्यत्वं कल्प्यम् । लोकस्य जगत्येव शब्दव्यवहारेण तत्रैव तच्छ्रोतॄणां व्युत्पत्तेः ।**

ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - 'ಜಗತ್' ಇತ್ಯಾದಿಯಾಗಿ. ಪ್ರಸಿದ್ಧಿಯ ಅನ್ಯಥಾನುಪಪತ್ತಿಯಿಂದ ಬೇರೆ ಪದಾರ್ಥವೇ ಮುಖ್ಯಾರ್ಥವಾಗುತ್ತದೆಂದು ಕಲ್ಪನೆ ಮಾಡಬಾರದು. ಏಕೆಂದರೆ ಎಲ್ಲಾ ಶಬ್ದಗಳ ವ್ಯವಹಾರವು ಜಗತ್ತಿನಲ್ಲೇ ಇರುತ್ತದೆ. ಆದ್ದರಿಂದ ಶ್ರೋತೃಗಳಿಗೆ ಆಯಾ ಶಬ್ದಗಳನ್ನು ಕೇಳಿದಾಗ ಲೌಕಿಕ ಪದಾರ್ಥದಲ್ಲಿಯೇ ವ್ಯುತ್ಪತ್ತಿಯು ಬರುತ್ತದೆ.

'ಅಗ್ನಿರ್ಮಾಣವಕಃ' ಎಂಬ ದೃಷ್ಟಾಂತವು ಸರಿಯಿಲ್ಲ

**तत्वप्रकाशिका – परमात्मनि तथा बहुलव्यवहाराभावेन व्युत्पत्त्यभावाच्च जगति प्रसिद्धेरन्यथोपपत्तेः । 'अग्निर्माणवकः' इति व्यवहारादनवगताग्निशब्द-मुख्यार्थस्य माणवकेऽग्निशब्दव्युत्पत्तिसम्भवादिति भावः ।। २ ।।**

ಪರಮಾತ್ಮನಲ್ಲಿ ಶಬ್ದಗಳ ವ್ಯವಹಾರವು ಬಹಳವಾಗಿ ಇರುವುದಿಲ್ಲ. ಆದ್ದರಿಂದ ಪರಮಾತ್ಮ ತದ್ವಾಚಕವಾದ ಶಬ್ದಗಳಿಗೆ ವಾಚ್ಯ-ವಾಚಕಸಂಬಂಧಜ್ಞಾನವು ಉಂಟಾಗುವುದಿಲ್ಲ. ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಬೇರೆ ರೀತಿಯಲ್ಲಿಯೇ ಕೂಡಿಸಬೇಕು. 'ಅಗ್ನಿಶಬ್ದದ ಮುಖ್ಯಾರ್ಥವನ್ನು ತಿಳಿಯದ ವ್ಯಕ್ತಿಗೆ 'ಅಗ್ನಿರ್ಮಾಣವಕಃ' ಎಂಬ ಪ್ರಯೋಗವನ್ನು ಕೇಳಿದಾಗ ಮಾಣವಕನಲ್ಲಿಯೇ ಅಗ್ನಿಶಬ್ದದ ವ್ಯುತ್ಪತ್ತಿ ಬರುವುದು ಕಂಡಿರುತ್ತದೆ. ಆದ್ದರಿಂದ ಅಗ್ನಿಶಬ್ದವನ್ನು ಕೇಳಿದಾಗ ಮಾಣವಕನಲ್ಲಿ ವ್ಯುತ್ಪತ್ತಿ ಬರುವುದಿಲ್ಲವೆಂಬ ದೃಷ್ಟಾಂತವನ್ನು ನೀಡಿದ್ದೂ ಕೂಡ ಅಸಾಧುವಾಗಿದೆ.

## ಭಾವದೀಪ

ಮುಖ್ಯಶಬ್ದಕ್ಕೆ ಪರಮಮುಖ್ಯವೃತ್ತಿ ಎಂದರ್ಥ

**मुख्या इति ।। परममुख्या इत्यर्थः ।। अमुख्या इति ।।** अपरममुख्या इत्यर्थः । एवमग्रेऽपि ।।

ಟೀಕೆಯಲ್ಲಿರುವ 'ಮುಖ್ಯಾಃ' ಎಂಬ ಪದಕ್ಕೆ ಪರಮಮುಖ್ಯವೃತ್ತಿಯುಳ್ಳ ಶಬ್ದಗಳು ಎಂದರ್ಥ. 'ಅಮುಖ್ಯಾಃ' ಎಂಬ ಪದಕ್ಕೆ ಅಪರಮಮುಖ್ಯವೃತ್ತಿಯಿಂದ ಲೋಕದಲ್ಲಿ ಪ್ರಸಿದ್ಧವಾಗಿರುವ ಎಂದರ್ಥ. ಇದರಂತೆ ಮುಂದೆಯೂ ಕೂಡ ಮುಖ್ಯ ಹಾಗೂ ಅಮುಖ್ಯಪದಗಳ ಅರ್ಥವನ್ನು ತಿಳಿಯಬೇಕು.

### ಹೀನವೃತ್ತಿ ವಿಷಯದಲ್ಲಿ ಮಾಣವಕನ ದೃಷ್ಟಾಂತ

**भावदीपः – अग्नीति ।।** हीनवृत्तिमात्रे दृष्टान्तः । असौ प्रसिद्धिरित्यर्थः। पूर्वशङ्कां निषेधंस्तत्र हेतुत्वेन भाष्यं योजयति – **न प्रसिद्धीति ।।**

ಅಗ್ನಿ ಶಬ್ದದ ಪ್ರಸಿದ್ಧಿಯು ಮಾಣವಕನಲ್ಲಿರುತ್ತದೆ. ಹೀಗೆ ದೃಷ್ಟಾಂತ ನೀಡಿದ್ದು ಕೇವಲ ಹೀನವೃತ್ತಿ ವಿಷಯದಲ್ಲಿ ಎಂದು ತಿಳಿಯಬೇಕು. 'ಅಸೌ' ಎಂಬ ಪದಕ್ಕೆ 'ಪ್ರಸಿದ್ಧಿಃ' ಎಂದರ್ಥ. ಹಿಂದೆ ಮಾಡಿದ ಆಶಂಕೆಯನ್ನು ಪರಿಹರಿಸುತ್ತಾ ಆಶಂಕೆಯ ಪರಿಹಾರದ ವಿಷಯದಲ್ಲಿ ಹೇತುವನ್ನು ಹೇಳುವ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು 'ನ ಪ್ರಸಿದ್ಧಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

### 'ಜಗದ್ವಾಚಿತ್ವಾತ್' ಎಂಬ ಸೂತ್ರಕ್ಕೆ ಅರ್ಥ

**भावदीपः –** भाष्यस्थव्यवहारपदस्यावृत्तिमभ्युपेत्य द्वितीयस्य वाच्यवाचकभावज्ञानरूपव्युत्पत्तिपरत्वं चाभ्युपेत्यार्थमाह – **लोकस्येति ।।** एतेन सूत्रमप्यावृत्या योज्यमिति दर्शितम् । तथापदस्य प्रागुक्तव्यवहारपरामर्शित्वमुपेत्य तदनूद्य व्याचष्टे – **परमात्मनि तथेति ।।**

ಹೀಗೆ ಭಾಷ್ಯವನ್ನು ವ್ಯಾಖ್ಯಾನ ಮಾಡಿದ್ದರಿಂದ 'ಜಗದ್‌ವಾಚಿತ್ವಾತ್' ಎಂಬ ಸೂತ್ರವನ್ನು ಎರಡು ಬಾರಿ ಆವೃತ್ತಿ ಮಾಡಿಕೊಂಡು ಅರ್ಥವನ್ನು ತಿಳಿಯಬೇಕೆಂದು ವ್ಯಾಖ್ಯಾನ ಮಾಡಿದಂತಾಯಿತು. ಭಾಷ್ಯದಲ್ಲಿರುವ 'ತಥಾ' ಎಂಬ ಪದದಿಂದ ಹಿಂದೆ ಪ್ರಸಕ್ತವಾದ ವ್ಯವಹಾರವನ್ನು ಪರಾಮರ್ಶ ಮಾಡಿಕೊಳ್ಳಬೇಕೆಂದು ಒಪ್ಪಿ 'ತಥಾ' ಪದವನ್ನು ಅನುವಾದ ಮಾಡಿಕೊಂಡು 'ಪರಮಾತ್ಮನಿ ತಥಾ' ಎಂಬ ಟೀಕಾವಾಕ್ಯವು ವ್ಯಾಖ್ಯಾನ ಮಾಡುತ್ತಿದೆ.

### ಈ ಶಬ್ದವು ಪ್ರಸಿದ್ಧಾರ್ಥಕ

**भावदीपः –** अत इत्यस्यार्थः पञ्चम्यन्तैर्दर्शितः ।। **अन्यथेति ।।** हरौ मुख्यत्वाज्ञानमूलकत्वेनेत्यर्थः । तत्र प्रसिध्यर्थकहिशब्दसूचितं दृष्टान्तमाह – **अग्निरिति ।।२।।**

'ಅತಃ' ಎಂಬ ಭಾಷ್ಯದಲ್ಲಿರುವ ಪದದ ಅರ್ಥವನ್ನು ಪಂಚಮ್ಯಂತವಾದ 'ವ್ಯತ್ಯಭಾವಾತ್' ಇತ್ಯಾದಿ ಪದಗಳಿಂದ ಹೇಳಿದ್ದಾರೆ. 'ಅನ್ಯಥಾ' ಎಂಬ ಪದಕ್ಕೆ ಶ್ರೀಹರಿಯಲ್ಲಿ ಶಬ್ದಗಳು ಮುಖ್ಯವಾಗಿವೆಯೆಂದು ತಿಳಿಯದಿದ್ದರೂ ಎಂದರ್ಥ. ಭಾಷ್ಯದ 'ಹಿ' ಶಬ್ದವು ಪ್ರಸಿದ್ಧಾರ್ಥದಲ್ಲಿದೆ. ಇದರಿಂದ ಸೂಚಿತವಾದ ದೃಷ್ಟಾಂತವನ್ನು 'ಅಗ್ನಿಃ' ಇತ್ಯಾದಿ ಟೀಕಾವಾಕ್ಯದಿಂದ ತಿಳಿಸಿದ್ದಾರೆ.

## ಬ್ರಹ್ಮಸೂತ್ರ

### 'ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್ ವ್ಯಾಖ್ಯಾತಮ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। जीवमुख्यप्राणलिङ्गादिति चेत् तद् व्याख्यातम् ।।**

ಸೂತ್ರಾರ್ಥ - ಸಮಸ್ತ ಜಗತ್ತು ಭಗವದಧೀನವಾದ್ದರಿಂದ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಉಪನಿಷತ್ತಿನಲ್ಲಿ ಕೆಲವೆಡೆ ಜೀವನ ಅಧೀನವೆಂದು ಇನ್ನು ಕೆಲವೆಡೆ ಮುಖ್ಯಪ್ರಾಣದೇವರ ಅಧೀನವೆಂದು ಹೇಳಲಾಗಿದೆ. ಇಂತಹ ಜೀವ ಹಾಗೂ ಮುಖ್ಯಪ್ರಾಣರೂ ಕೂಡ ಸರ್ವಶಬ್ದವಾಚ್ಯರಾಗಲಿ ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಧರ್ಮಗಳೂ ಕೂಡ ವಿಷ್ಣುಪರವೆಂದು ಈ ಹಿಂದೆ 'ಉಪಾಸಾತ್ರೈವಿಧ್ಯಾತ್' ಎಂಬ ಸೂತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

ಅರ್ಥ -- 'ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತಿ' ಎಂಬ ಸೂತ್ರದಲ್ಲಿ 'ವಾಯುನಾ ಹಿ ಲೋಕಾ ನೇನೀಯಂತೇ' ಎಂಬ ಶ್ರುತಿವಾಕ್ಯದಲ್ಲಿಯೂ ಸಮಸ್ತ ಜಗತ್ತು ಜೀವನ ಅಧೀನವೆಂದು ಮತ್ತು ಮುಖ್ಯಪ್ರಾಣದೇವರ ಅಧೀನವೆಂದು ಹೇಳಲಾಗಿದೆ. ಹೀಗೆ ಜೀವಮುಖ್ಯಪ್ರಾಣಲಿಂಗಾತ್ = ಜೀವ ಹಾಗೂ ಮುಖ್ಯಪ್ರಾಣದೇವರ ಲಿಂಗವೆಂದು ಶ್ರುತವಾದ್ದರಿಂದ ಅವರೂ ಸಹ ಆಯಾ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯರಾಗಲಿ. ಇತಿ ಚೇತ್ ನ = ಹೀಗೆ ಪ್ರಶ್ನಿಸಬಾರದು. ಏಕೆಂದರೆ ತತ್ = ಆ ಶ್ರುತಿವಾಕ್ಯಗಳನ್ನು, ವ್ಯಾಖ್ಯಾತಂ = ಅಂತರ್ಯಾಮಿ ಪರವಾಗಿ ಈ ಹಿಂದೆ 'ಉಪಾಸಾ ತ್ರೈವಿಧ್ಯಾತ್' ಎಂಬಲ್ಲೇ ವ್ಯಾಖ್ಯಾನ ಮಾಡಿದ್ದೇವೆ.

## ಬ್ರಹ್ಮಸೂತ್ರಭಾಷ್ಯ

### ಪರಮಾತ್ಮನು ಮಾತ್ರ ಸರ್ವಶಬ್ದವಾಚ್ಯ

**ब्रह्मसूत्रभाष्यम् – 'तदधीनत्वात् तच्छब्दवाच्यत्वम्' इत्युक्तम् । तद् जीवमुख्यप्राणयोर्लिङ्गम्। 'अथ यां शाखां जीवो जहाति सा शुष्यति' (छां. उ. ६-११-२) 'वायुना हि सर्वे लोका नेनीयन्ते' इत्यादिश्रुतिभ्य इति चेत्**

ಅನುವಾದ - ಯಾವುದೇ ಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನ ಅಧೀನವಾಗಿರುವುದರಿಂದ, ಸಕಲಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಹೇಳಿದ್ದಾಗಿದೆ. ಆದರೆ ಶಬ್ದಪ್ರವೃತ್ತಿನಿಮಿತ್ತವಾದ ತದಧೀನತ್ವವು ಜೀವ ಮತ್ತು ಮುಖ್ಯಪ್ರಾಣರ ಲಿಂಗವಾಗಿದೆ. ಏಕೆಂದರೆ "ಜೀವನು ಯಾವಾಗ ಜಗತ್ತೆಂಬ ವೃಕ್ಷದ ಒಂದು ಶಾಖೆಯನ್ನು ಬಿಡುತ್ತಾನೋ, ಆವಾಗ ಆ ಶಾಖೆಯು ಒಣಗುತ್ತದೆ." ಹೀಗೆ ಶ್ರುತಿಯು ವೃಕ್ಷಾದಿಗಳು ವೃಕ್ಷದಲ್ಲಿರುವ ಜೀವರ ಅಧೀನವೆಂದು ಹೇಳಿದೆ. ಅದರಂತೆ 'ಮುಖ್ಯಪ್ರಾಣನಿಂದಲೇ ಸಮಸ್ತ ಲೋಕವು ತಮ್ಮ ತಮ್ಮ ಕರ್ಮಗಳಲ್ಲಿ ಪ್ರೇರೇಪಿಸಲ್ಪಡುತ್ತದೆ'. ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಜೀವ ಹಾಗೂ ಮುಖ್ಯಪ್ರಾಣನೂ ಕೂಡ ಪರಮಾತ್ಮನಂತೆ ಸರ್ವಶಬ್ದವಾಚ್ಯರಾಗಲಿ. ಇಷ್ಟು ಆಕ್ಷೇಪ.

ಪ್ರತಿಪದಾರ್ಥ -- ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂಬುದನ್ನು ಆಕ್ಷೇಪ ಮಾಡಿ, ಸಮಾಧಾನವನ್ನು ನೀಡಲು, ಮೊದಲು ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ತದಧೀನತ್ವಾತ್ = ಸಮಸ್ತ ಜಗತ್ತು ಭಗವದಧೀನವಾಗಿರುವುದರಿಂದ, ತತ್‌ಶಬ್ದವಾಚ್ಯತ್ವಮ್ = ಭಗವತ್‌ಪ್ರತಿಪಾದಕವಾದ ಶಬ್ದವಾಚ್ಯತ್ವವು ಜಗತ್ತಿನಲ್ಲಿರುತ್ತದೆ. ಇತ್ಯುಕ್ತಂ = ಹೀಗೆ 'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಲ್ಲಿ ಹೇಳಲಾಗಿದೆ. ತತ್ = ಈ ಸರ್ವಶಬ್ದವಾಚ್ಯತ್ವವು, ಜೀವಮುಖ್ಯಪ್ರಾಣಯೋಃ = ಜೀವ ಹಾಗೂ ಮುಖ್ಯಪ್ರಾಣರ, ಲಿಂಗಂ = ಲಿಂಗವಾಗಿದೆ. ಜೀವಃ = ಜೀವನು, ಯಾಂ = ಜಗತ್ತೆಂಬ ವೃಕ್ಷದ ಒಂದು ಶಾಖೆಯನ್ನು, ಜಹಾತಿ = ಬಿಡುತ್ತಾನೋ, ಅಥ = ಆವಾಗ, ಸಾ = ಆ ಶಾಖೆಯು, ಶುಷ್ಯತಿ = ಒಣಗುತ್ತದೆ. ಮತ್ತು ವಾಯುನಾ ಹಿ =

ಮುಖ್ಯಪ್ರಾಣನಿಂದ, ಸರ್ವೇ ಲೋಕಾಃ = ಸಮಸ್ತ ಜನರು, ನೇನಿಯಂತೇ = ತಮ್ಮ ತಮ್ಮ ಕರ್ಮಗಳಲ್ಲಿ ಅತಿಶಯವಾಗಿ ಪ್ರಯೋಗಿಸಲ್ಪಡುತ್ತಾರೆ. ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ ಜೀವ ಹಾಗೂ ಮುಖ್ಯಪ್ರಾಣರೂ ಕೂಡ ಪ್ರತಿಪಾದ್ಯರಾಗಬೇಕಲ್ಲವೇ? ಇತಿ ಚೇತ್ = ಇಷ್ಟು ಆಕ್ಷೇಪ.

### ಮೂರು ಬಗೆಯ ಉಪಾಸನೆ

**ब्रह्मसूत्रभाष्यम् – न 'उपासात्रैविध्यात्' इति व्याख्यातत्वात् ।।३।।**

ಅನುವಾದ - ಇದು ಸರಿಯಲ್ಲ. ಏಕೆಂದರೆ ಒಳಗಡೆ ಇರುವವನು, ಹೊರಗಡೆ ಇರುವವನು, ಮತ್ತು ಸರ್ವಗತನು. ಹೀಗೆ ಮೂರು ವಿಧವಾದ ಉಪಾಸನೆಗಳನ್ನು ತಿಳಿಸಲು ಐತರೇಯದಲ್ಲಿ ಹಾಗೇ ಹೇಳಿದ್ದಾರೆ. ಜೀವ, ಮುಖ್ಯಪ್ರಾಣ ಶಬ್ದದಿಂದಲೂ ವಿಷ್ಣುವೇ ವಾಚ್ಯನಾಗಿದ್ದಾನೆಂದು ಪ್ರಥಮಪಾದದ ಕೊನೆಯಲ್ಲಿ ವ್ಯಾಖ್ಯಾನ ಮಾಡಲಾಗಿದೆ.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡುವ ಮೂಲಕ ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ನ = ಸರಿಯಲ್ಲ. ಉಪಸಾತ್ರೈವಿಧ್ಯಾತ್ = ಅಂತಃ ಬಹಿಃ, ಸರ್ವಗತನೆಂಬ ಮೂರುವಿಧವಾದ ಉಪಾಸನೆಯನ್ನು ತಿಳಿಸಲು ಐತರೇಯದಲ್ಲಿ ಹಾಗೇ ಹೇಳಲಾಗಿದೆ, ಇತಿ = ಎಂಬುದಾಗಿ, ವ್ಯಾಖ್ಯಾತತ್ವಾತ್ = ಪ್ರಥಮಪಾದದ ಕೊನೆಯಲ್ಲಿ ವ್ಯಾಖ್ಯಾನ ಮಾಡಿದ್ದಾಗಿದೆ.

## ಸತ್ತರ್ಕದೀಪಾವಳಿ

### ಜೀವ ಹಾಗೂ ವಾಯುಶಬ್ದಗಳಿಂದಲೂ ವಿಷ್ಣುವೇ ಪ್ರತಿಪಾದ್ಯ

**सत्तर्कदीपावळिः** – ननु भवतु यदधीनमिदं सर्वं तत्रैव शब्दजातं मुख्यं तच्छब्दसमाकर्षश्चास्मिन् । ते तु पृथव्याद्यभिमानिजीवाः तन्मुख्यप्राणो वा । तदधीनत्वश्रुतेः अस्य सर्वत्येत्याशङ्क्य परिहन्तीत्याह – जीवेत्यादिना ।

ಯಾವುದು ಯಾರ ಅಧೀನವಾಗಿದೆಯೋ, ಶಬ್ದಗಳು ಅಂಥ ಸ್ವತಂತ್ರನಾದವನಲ್ಲಿಯೇ ಮುಖ್ಯವಾಗಿ ಅವನಲ್ಲಿಯೇ ಸಮನ್ವಯವಾಗುತ್ತದೆ. ಅವನಲ್ಲಿರುವ ಶಬ್ದವನ್ನೇ ಜಗತ್ತಿನಲ್ಲಿ ಸಮಾಕರ್ಷಣ ಮಾಡಬೇಕು ಎಂಬ ಪ್ರಮೇಯವನ್ನು ಹಿಂದಿನ ಸೂತ್ರದಲ್ಲಿ ಸಮರ್ಥನೆ ಮಾಡಿದಿರಿ. ಇದನ್ನು ಅಂಗೀಕಾರ ಮಾಡೋಣ. ಆದರೆ. ಆ ಸ್ವತಂತ್ರವಾದ ವ್ಯಕ್ತಿ ಪರಮಾತ್ಮನೆಂದು ಒಪ್ಪುವ ಆವಶ್ಯಕತೆಯಿಲ್ಲ. ಪೃಥಿವ್ಯಾದ್ಯಭಿಮಾನಿಚೇತನರು ಅಥವಾ ಮುಖ್ಯಪ್ರಾಣನು ಆ ಸ್ವತಂತ್ರವ್ಯಕ್ತಿಯಾಗಿದ್ದಾನೆಂದು ಒಪ್ಪಬಹುದಲ್ಲವೇ? ಏಕೆಂದರೆ ಸಕಲಪದಾರ್ಥಗಳು ಜೀವರ ಅಧೀನವಾಗಿವೆ ಎಂದು ಶ್ರುತಿ ಹೇಳುತ್ತಿದೆ. ಅದರಂತೆ ಮುಖ್ಯಪ್ರಾಣನ ಅಧೀನವಾಗಿದೆ ಎಂಬುದಾಗಿಯೂ ಕೂಡ ಶ್ರುತಿಯೇ ಹೇಳುತ್ತಿದೆ. ಈ ಆಶಂಕೆಯ ಪರಿಹಾರಕ್ಕೋಸ್ಕರ 'ಜೀವ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

'ಯ ಆತ್ಮಾನಂ ಅಂತರೋ ಯಮಯತಿ' ಇತ್ಯಾದಿ ಶ್ರುತಿಯ ಅಭಿಪ್ರಾಯವನ್ನು ಗಮನಿಸಿದಾಗ ಜೀವಶಬ್ದದಿಂದ ಹಾಗೂ ವಾಯುಶಬ್ದದಿಂದ ಪ್ರತಿಪಾದ್ಯನಾದವನು ಅಂತರ್ಗತನಾದ ಭಗವಂತನೇ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಸಕಲ ಪದಾರ್ಥಗಳ ನಿಯಾಮಕನಾದ ಸ್ವತಂತ್ರನಾದ ವ್ಯಕ್ತಿಯೆಂದರೆ ಭಗವಂತನೇ ಆಗಬೇಕು. ಜೀವ ಹಾಗೂ ಮುಖ್ಯಪ್ರಾಣಾದಿಗಳು ಆಗಲು ಸಾಧ್ಯವೇ ಇಲ್ಲ.

### ಕರ್ಮಾದಿಗಳ ಜ್ಞಾನ ಮೋಕ್ಷಕ್ಕೋಸ್ಕರವಲ್ಲ

**सत्तर्कदीपावलिः – न वयं फलान्तराय मुक्तये वा ज्योतिष्टोमादिकर्मज्ञान-मादिशब्दात् अजशङ्करादिलोकेशज्ञानं च मत्वा भगवद्वाचकवेदशब्दसमाकर्षं ब्रूमो योनोक्तदोषः स्यात् । किं तु परमार्थज्ञानार्थं कुतः विज्ञायमानमेव सर्वमिदं कर्मादिकं यस्मिन् विज्ञाते विज्ञातं भवति अन्यथा न स क इति ।**

ನಾವು ಬೇರೆ ಪ್ರಯೋಜನಕ್ಕೋಸ್ಕರ ಅಥವಾ ಮೋಕ್ಷವೆಂಬ ಪ್ರಯೋಜನಕ್ಕೋಸ್ಕರ ಜ್ಯೋತಿಷ್ಟೋಮಾದಿ ಕರ್ಮಗಳ ಜ್ಞಾನವು ಬೇಕು ಎಂದು ಹೇಳುವುದಿಲ್ಲ. ಅಥವಾ ಆದಿಶಬ್ದದಿಂದ ಚತುರ್ಮುಖಬ್ರಹ್ಮ, ಶಂಕರ ಮೊದಲಾದವರ ಜ್ಞಾನವು ಬೇಕು ಎಂದು ಹೇಳುವುದಿಲ್ಲ. ಭಗವದ್ವಾಚಕವಾದ ವೇದದಲ್ಲಿರುವ ಶಬ್ದಗಳನ್ನು ಈ ಕರ್ಮ ಹಾಗೂ ರುದ್ರಾದಿಗಳಲ್ಲಿ ಸಮಾಕರ್ಷಣವನ್ನು ಮೋಕ್ಷಕೋಸ್ಕರ ಮಾಡಬೇಕೆಂದು ಹೇಳಿದ್ದರೆ ನಿಮ್ಮ

ಆಕ್ಷೇಪವು ಸಮಂಜಸವಾಗುತ್ತಿತ್ತು. ಆದರೆ ಪರಮಾತ್ಮನ ಜ್ಞಾನಕ್ಕೋಸ್ಕರ ಈ ಕರ್ಮದ ಹಾಗೂ ದೇವತೆಗಳ ಜ್ಞಾನವು ಬೇಕು ಎಂದು ಹೇಳುತ್ತಿದ್ದೇವೆ. ಏಕೆಂದರೆ ಶ್ರುತಿಯು ಹೀಗೆಯೇ ಉಪಪಾದನೆ ಮಾಡುತ್ತಿದೆ. ಯಾವ ಪರಮಾತ್ಮನ ಜ್ಞಾನವನ್ನು ಪಡೆಯುವುದರಿಂದ ಈ ಎಲ್ಲಾ ಕರ್ಮಾದಿಗಳೂ ಕೂಡ ವಿಜ್ಞಾತವಾಗುತ್ತವೋ, ಯಾವ ಪರಮಾತ್ಮನನ್ನು ತಿಳಿಯದೇ ಇರುವುದರಿಂದ ಈ ಕರ್ಮಾದಿಗಳೂ ಕೂಡ ತಿಳಿಯುವುದಿಲ್ಲವೋ, ಅಂಥ ಪರಮಾತ್ಮನ ಜ್ಞಾನವನ್ನು ಮೋಕ್ಷಕ್ಕೋಸ್ಕರ ಹೊಂದಬೇಕು ಎನ್ನುತ್ತಿದೆ.

ಯಾವುದನ್ನು ಮುಖ್ಯವಾಗಿ ತಿಳಿಯಬೇಕು ?

**सत्तर्कदीपावळिः – महाशालपदोक्तसर्वकर्मप्रवीणशौनकप्रश्नोत्तरत्वेन ऋगादिसर्ववेदप्रतिपाद्य कर्मादिकं परमतः परमाक्षरे नारायणे विज्ञात एव ज्ञातं भवति । अत एव अपरमपि इदं वेदितव्यमित्यङ्गीकारो व्याख्यानात् । अनेन यदविज्ञाने विज्ञातमप्यविज्ञातं भवति । फलाभावादिति भावेनोक्तं यद्विज्ञानेऽविज्ञातमपि विज्ञातं भवति । तत्फलावाप्तिरिति भावेनाह – कथं त्विति।**

ಮಹಾಶಾಲ ಎಂಬ ಪದದಿಂದ ಪ್ರತಿಪಾದ್ಯರಾದ ಸರ್ವಕರ್ಮಗಳಲ್ಲಿ ಪ್ರವೀಣರಾದ ಶೌನಕರ ಪ್ರಶ್ನೆಗೆ ಉತ್ತರ ರೂಪದಲ್ಲಿ ಪರಾಪರ ವಿದ್ಯೆಗಳ ಬಗ್ಗೆ ಮುಂಡಕೋಪನಿಷತ್ತು ಪರಿಚಯಿಸಿದೆ. ಋಗಾದಿ ಸರ್ವವೇದಗಳಿಂದ ಪ್ರತಿಪಾದ್ಯವಾದ ಪರತತ್ವನೆನಿಸಿದ ಪರಮಾಕ್ಷರನಾದ ನಾರಾಯಣನನ್ನೇ ತಿಳಿಯಬೇಕು. ಇದೇ ಪರವಿದ್ಯೆ ಎನಿಸುತ್ತದೆ. ಇದರಿಂದ ಅಪರವಿದ್ಯೆಯೂ ಕೂಡ ತಿಳಿದಂತಾಗುತ್ತದೆ ಎಂಬುದಾಗಿ 'ಕಸ್ಮಿನ್ನು ಭಗವಃ' ಇತ್ಯಾದಿ ಉಪನಿಷತ್ತಿಗೆ ವ್ಯಾಖ್ಯಾನ ಮಾಡಲಾಗಿದೆ. ಹೀಗೆ ಹೇಳಿದ್ದರಿಂದ ಯಾವುದನ್ನು ತಿಳಿಯದೇ ಇರುವುದರಿಂದ ತಿಳಿದಿದ್ದೂ ಕೂಡ ತಿಳಿಯದಂತಾಗುತ್ತದೋ, ಏಕೆಂದರೆ ಅದಕ್ಕೆ ಪ್ರಯೋಜನವೇ ಇರುವುದಿಲ್ಲ. ಅಂಥ ತತ್ವವನ್ನೇ ಮೊದಲು ತಿಳಿಯಬೇಕು ಎಂಬ ಅಭಿಪ್ರಾಯದಿಂದ ಯಾವುದನ್ನು ತಿಳಿಯುವುದರಿಂದ ತಿಳಿಯದೇ ಇರುವುದೂ ಕೂಡ ತಿಳಿದಂತಾಗುತ್ತದೆ ಎಂಬುದಾಗಿ ಫಲದ ಅವಾಪ್ತಿಯನ್ನು ಹೇಳಿರುವ ಶ್ರುತಿಯನ್ನು 'ಕಥನ್ನು ಭಗವಃ' ಎಂಬುದಾಗಿ ಉಲ್ಲೇಖ ಮಾಡುತ್ತಿದ್ದಾರೆ.

ಮಗನಾದ ಶ್ವೇತಕೇತುವಿಗೆ ಭಗವತ್ತತ್ವದ ಉಪದೇಶ

**सत्तर्कदीपावळिः** – सर्वान्वेदानधीतवानेव केवलं न तु तन्मुख्योद्देश्यं सकलकल्याणगुण करं पृष्टवान्प्रायः । यतः स्तब्धोऽसि । यस्मिन् श्रुते मते विज्ञाते अन्यदश्रुतमस्तमविज्ञातमपि तदधीनत्वेन श्रुतं मतं विज्ञातम् अतिनीचत्वेन विवज्ञायमानं त्वदादिकमित्युक्तः श्वेतकेतुः पितरं पृच्छति । कर्मादिष्वपि वेदैकदेशैरुच्यमानेष्वासमन्तात्स एव सर्ववेदादेशो भवतीति कथं केन प्रकारेण जानीयामिति । तदुत्तरत्वेन यथा घटादिव्युत्पन्न मृदादिशब्दैः पंभिः दृश्यमानमृत्पिण्डादौ मृदादिशब्दार्थत्वेन विज्ञाते पुनर्घटादि-सर्वमृण्मयादिमृत्पिण्डादिसदृशत्वेनेशाविशेषेण ज्ञातं स्यात् । एवं जडजीवव्युत्पन्नसचिदादिशब्दैः पुम्भिः ब्रह्मणि सचिदादिशब्दार्थत्वेन ज्ञाते पुनर्जडजीवात्मकं जगद् ब्रह्मात्यल्पसदृशत्वेन विशेषेण ज्ञायते । नत्वतिसदृशत्वेन ।

ಶ್ವೇತಕೇತುವನ್ನು ಕುರಿತು ಉದ್ದಾಲಕರು ಹೀಗೆ ಹೇಳುತ್ತಾರೆ - ಎಲ್ಲ ವೇದವನ್ನು ನೀನು ಅಧ್ಯಯನ ಮಾಡಿರುವಿ. ಆದರೆ ವೇದದ ಮುಖ್ಯ ಪ್ರತಿಪಾದ್ಯನಾದ ಸಕಲ ಕಲ್ಯಾಣಗುಣಾಕರನಾದ ವನ ಬಗ್ಗೆ ತಿಳಿದೇ ಇಲ್ಲ. ಆದ್ದರಿಂದ ಸ್ತಬ್ಧನಾಗಿ ನಿಂತಿರುವಿ. ಯಾವ ವ್ಯಕ್ತಿಯನ್ನು ಶ್ರವಣ ಮಾಡುವುದರಿಂದ, ಮನನ ಮಾಡುವುದರಿಂದ, ತಿಳಿಯುವುದರಿಂದ ಉಳಿದ ಅಶ್ರುತವಾದದ್ದು, ಅಮತವಾದದ್ದು, ಅವಿಜ್ಞಾತವಾದದ್ದೂ ಕೂಡ ಶ್ರುತವಾಗಿ ಮನನ ಮಾಡಲ್ಪಟ್ಟದ್ದಾಗಿ ತಿಳಿಯಲ್ಪಟ್ಟದ್ದಾಗಿ ಆಗುತ್ತದೋ, ಆ ತತ್ವದ ಬಗ್ಗೆ ನೀನು ತಿಳಿದಿರುವಿಯಾ ? ಏಕೆಂದರೆ ಮುಖ್ಯವಾದ ತತ್ವದ ಮುಂದೆ ಉಳಿದದ್ದೆಲ್ಲವೂ ಅತಿನೀಚವಾಗಿದೆ. ನೀನೂ ಕೂಡ ಅವನ ಮುಂದೆ ಅತ್ಯಂತ ನೀಚನಾಗಿರುವಿ. ಹೀಗೆ ಉದ್ದಾಲಕರು ಶ್ವೇತಕೇತುವಿಗೆ ಹೇಳುತ್ತಾರೆ. ಆಗ ಶ್ವೇತಕೇತು ತಂದೆಯನ್ನು ಪ್ರಶ್ನಿಸುತ್ತಾನೆ.

ವೇದದ ಏಕದೇಶದಿಂದ ಕರ್ಮಾದಿಗಳೂ ಕೂಡ ಪ್ರತಿಪಾದ್ಯವಾಗಿವೆ. ಹೀಗಿರುವಾಗ ಸಕಲ ಕಲ್ಯಾಣಗುಣಾಕರನೊಬ್ಬನೇ ಸಕಲವೇದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ಹೇಳುವಿರಿ? ಹಾಗೇ ನಾನು ತಿಳಿಯುವುದಾದರೂ ಹೇಗೆ ಸಾಧ್ಯ ? ಎಂದು ಇದಕ್ಕೆ ಉತ್ತರವನ್ನು ನೀಡುವಾಗ

ಉದ್ದಾಲಕರು ಹೀಗೆ ಹೇಳುತ್ತಾರೆ - ಯಾವ ರೀತಿಯಾಗಿ ಘಟಾದಿಗಳಲ್ಲಿ ವ್ಯುತ್ಪನ್ನವಾದ ಮೃದಾದಿಶಬ್ದಗಳಿಂದ ಪುರುಷನಿಂದ ದೃಶ್ಯಮಾನವಾದ ಮೃತ್‌ಪಿಂಡಾದಿಗಳಲ್ಲಿ ಮೃದಾದಿ-ಶಬ್ದಾರ್ಥತ್ವವನ್ನು ತಿಳಿದಾಗ ಪುನಃ ಘಟ ಮೊದಲಾದ ಸರ್ವಮೃಣ್ಮಯಾದಿಗಳಲ್ಲಿ ಮೃತ್ಪಿಂಡಾದಿ ಸಾದೃಶ್ಯವಿರುವುದರಿಂದ ಇದೂ ಕೂಡ ಮೃಣ್ಮಯವಾಗಿದೆ ಎಂದು ತಿಳಿಯುತ್ತಾನೋ, ಅದೇ ರೀತಿಯಾಗಿ ಜಡಜೀವಗಳಲ್ಲಿ ವ್ಯುತ್ಪನ್ನನಾದ ಸಚ್ಚಿದಾದಿ ಶಬ್ದಗಳಿಂದ ಬ್ರಹ್ಮನನ್ನು ತಿಳಿಯಲ್ಪಟ್ಟನೋ, ಅದೇ ಸಚ್ಚಿದಾದಿ ಶಬ್ದಾರ್ಥತ್ವೇನ ಬ್ರಹ್ಮನನ್ನು ತಿಳಿದಾಗ ಪುನಃ ಜಡಜೀವಾತ್ಮಕವಾದ ಜಗತ್ತನ್ನು ನೋಡಿ, ಬ್ರಹ್ಮನ ಅಲ್ಪಸಾದೃಶ್ಯವಿರುವುದರಿಂದ ಇವುಗಳನ್ನೂ ಕೂಡ ಸಚ್ಚಿದಾದಿ ಶಬ್ದಗಳಿಂದ ತಿಳಿಯುತ್ತಾರೆ. ಇಲ್ಲಿ ಅತಿಸಾದೃಶ್ಯವನ್ನು ವಿವಕ್ಷಿಸಬಾರದು.

ಯೇನ ವಿಜ್ಞಾತೇನ ಸರ್ವಂ ವಿಜ್ಞಾತಂ ಭವತಿ

**सत्तर्कदीपावळिः – यतो यथा विज्ञाते तथा विशेषैः पुम्भिस्तदन्याधिकम्। तयोर्ज्ञातवद्भिः । विज्ञायमानसुवर्णामरभाषयोः तत्प्रधानत्वेन विज्ञायमानयोः सर्वं लोहमयं प्राकृतवाङ्मयं वाऽप्रधानत्वेन विशेषेण ज्ञातं स्यात् । एवं विज्ञात जडजीवैः पुम्भिः तेषु विचित्रानेकगुणान् ज्ञातवद्भिः विज्ञायमाने स्वतन्त्रशक्ति सकलकल्याणगुणाकरे ब्रह्मणयतिप्रधानत्वेन विज्ञाते पुनरिदं जीवजडात्मकं विश्वं विज्ञातमविज्ञातं च केवलं तदायत्तत्वेन विशेषेण ज्ञायते ।**

ಯಾವ ವಸ್ತುವನ್ನು ಯಾವ ಧರ್ಮವಿಶಿಷ್ಟವಾಗಿ ಪುರುಷನು ತಿಳಿಯುತ್ತಾನೋ, ಅದರಂತೆ ಇರುವ ಬೇರೆ ವಸ್ತುಗಳನ್ನು ಅದೇ ಧರ್ಮಪುರಸ್ಸರವಾಗಿ ತಿಳಿಯುತ್ತಾನೆ. ಬಂಗಾರವೆಂಬ ಪ್ರಧಾನಲೋಹವನ್ನು ತಿಳಿದ ಮೇಲೆ ಇತರ ಲೋಹಗಳನ್ನೂ ಕೂಡ ಲೋಹವೆಂದೇ ತಿಳಿಯುತ್ತಾನೆ. ಮತ್ತು ಸಂಸ್ಕೃತಭಾಷೆಯನ್ನು ತಿಳಿಯುವುದರಿಂದ ಇತರ ಭಾಷೆಗಳನ್ನೂ ಕೂಡ ತಿಳಿಯುತ್ತಾನೆ ಎಂದು ಹೇಳಿದಾಗ ಇಲ್ಲಿ ಸುವರ್ಣ ಹಾಗೂ ಸಂಸ್ಕೃತಭಾಷೆಗಳು ಪ್ರಧಾನವಾಗಿವೆ. ಉಳಿದ ಲೋಹಗಳು ಹಾಗೂ ಉಳಿದ ಭಾಷೆಗಳು ಅಪ್ರಧಾನವಾಗಿವೆ ಎಂದು ತಿಳಿಯಬೇಕು.

ಇದರಂತೆ ಪರಮಾತ್ಮನನ್ನು ಜ್ಞಾನಾನಂದಮಯ ಮೊದಲಾದ ಅನೇಕ ಗುಣಗಳುಳ್ಳವ-ನಾಗಿದ್ದಾನೆಂದು ತಿಳಿಯುತ್ತಾನೆ, ಮತ್ತು ತಾನು ತಿಳಿಯಲ್ಪಟ್ಟ ಜಡಜೀವರುಗಳಿಗಿಂತ ವಿಚಿತ್ರವಾದ ಅನೇಕ ಗುಣಗಳುಳ್ಳವನಾಗಿದ್ದಾನೆಂದು ತಿಳಿಯುತ್ತಾನೆ, ಹಾಗೂ ಸ್ವತಂತ್ರ ಶಕ್ತಿಯುಳ್ಳವನಾಗಿ

ಸಕಲಕಲ್ಯಾಣಗುಣಾಕರನಾಗಿದ್ದಾನೆ ಎಂದು ಬ್ರಹ್ಮನನ್ನೇ ಅತ್ಯಂತ ಪ್ರಧಾನವಾಗಿ ತಿಳಿಯುತ್ತಾನೆ. ಹೀಗೆ ತಿಳಿದಾಗ ಈ ಜೀವಜಡಾತ್ಮಕವಾದ ಜಗತ್ತೂ ಕೂಡ ತಿಳಿದಂತಾಗುತ್ತದೆ. ಅವಿಜ್ಞಾತವಾದ ಈ ಪದಾರ್ಥಗಳೆಲ್ಲವೂ ಈಶ್ವರಾಧೀನವೆಂಬ ವಿಶೇಷಣಜ್ಞಾನದಿಂದಲೇ ಎಲ್ಲವನ್ನೂ ತಿಳಿದಂತಾಗುತ್ತದೆ.

### ಸರ್ವವಿಜ್ಞಾನವು ಏಕವಿಜ್ಞಾನ ಹೇತುವಾದರೂ ಕೂಡ ವಿರೋಧವಿಲ್ಲ

**सत्तर्कदीपावलिः – एवमुक्तप्रकारेण सोम्य(मासोर्ह)मोहार्ह लोकतो वेदतश्च विज्ञायमानस्यैव सर्वस्यापि तज्ज्ञानार्थत्वात् वेदैरादिश्यत इत्यादेशो ।भवतीत्यर्थः । एवं सर्वविज्ञानस्य एकविज्ञानहेतुत्वेऽपि एकविज्ञानेन सर्वं विशेषतो विज्ञायन्त इति अविरोधश्च ।**

ಹೀಗೆ ಇಲ್ಲಿಯ ತನಕ ಹೇಳಿದಂತೆ ಲೋಕದಿಂದ ಹಾಗೂ ವೇದದಿಂದ ತಿಳಿಯಲ್ಪಡುವ ಎಲ್ಲ ಪದಾರ್ಥಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕೋಸ್ಕರ ಉಪಯುಕ್ತವಾಗುತ್ತದೆ. ಹೀಗೆ ವೇದವೇ ಆದೇಶ ಮಾಡಿದೆ. ಅದರಂತೆ ಸಕಲ ಪದಾರ್ಥಗಳ ಜ್ಞಾನವು ಪರಮಾತ್ಮನೆಂಬ ಒಂದೇ ಪದಾರ್ಥದ ಜ್ಞಾನಕ್ಕೆ ಹೇತುವಾಗಿದ್ದರೂ ಕೂಡ ಏಕವಿಜ್ಞಾನದಿಂದ ಸಕಲಪದಾರ್ಥಗಳು ವಿಶೇಷತಃ ತಿಳಿಯಲ್ಪಡುತ್ತದೆ ಎಂಬುದಾಗಿ ವಿರೋಧವನ್ನೂ ಕೂಡ ಪರಿಹರಿಸಿದಂತಾಯಿತು. ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಪರಮಾತ್ಮನನ್ನು ತಿಳಿಯದವರಿಗೂ ಕೂಡ ಜಗತ್ತಿನಲ್ಲಿರುವ ಪದಾರ್ಥದ ಜ್ಞಾನ ಇರುತ್ತದೆ. ಆದರೆ ಪರಮಾತ್ಮನನ್ನು ತಿಳಿದಾಗ ಉಳಿದ ಪದಾರ್ಥಗಳು ಅವನ ಅಧೀನವಾಗಿವೆ ಎಂಬ ಎಚ್ಚರ ಬರುತ್ತದೆ. ಇದಕ್ಕಾಗಿ ಪರಮಾತ್ಮನನ್ನು ತಿಳಿಯಬೇಕು. ಪರಮಾತ್ಮನ ಜ್ಞಾನವೇ ಪ್ರಧಾನವಾಗಿವೆ. ಉಳಿದೆಲ್ಲದರ ಜ್ಞಾನವು ಅಪ್ರಧಾನವಾಗಿವೆ ಎಂಬ ಅರಿವೇ ನಿಜವಾದ ತತ್ವಜ್ಞಾನ. ಆದ್ದರಿಂದ ಸಕಲ ಪದಾರ್ಥಗಳ ಜ್ಞಾನವು ಬ್ರಹ್ಮನ ಜ್ಞಾನಕ್ಕೆ ಹೇತುವಾಗಿದೆ. ಹಾಗೂ ಬ್ರಹ್ಮಜ್ಞಾನದ ಕಾರ್ಯವೂ ಆಗಿದೆ. ಏಕೆಂದರೆ ಮೊದಲು ವಿಶೇಷಜ್ಞಾನವಿರಲಿಲ್ಲ. ಅನಂತರ ವಿಶೇಷಜ್ಞಾನ ಬಂತು ಆದ್ದರಿಂದ ಕಾರ್ಯವೆನಿಸುತ್ತದೆ.

ವಿವರಣೆ - ಛಾಂದೋಗ್ಯದ ಆರನೆಯ ಅಧ್ಯಾಯದಲ್ಲಿ ಬರುವ ಉದ್ದಾಲಕರ ಉಪದೇಶ ಪ್ರಕರಣವನ್ನು ಯಥಾವತ್ತಾಗಿ ಇಲ್ಲಿ ಹೀಗೆ ಸಂಗ್ರಹಿಸಲಾಗಿದೆ. (ಸಂಗ್ರಹ)

ಶ್ವೇತಕೇತುರ್ಹಾರುಣೇಯ ಆಸ । ತಂ ಹ ಪಿತೋವಾಚ 'ಶ್ವೇತಕೇತೋ ವಸ ಬ್ರಹ್ಮಚರ್ಯಮ್ । ನ ವೈ ಸೋಮ್ಯಾಸ್ಮತ್‌ಕುಲೀನೋಽನನೂಚ್ಯ ಬ್ರಹ್ಮಬಂಧುರಿವ ಭವತಿ' ಇತಿ ॥

ಅರುಣನ ಮೊಮ್ಮಗ ಶ್ವೇತಕೇತು ಎಂಬುವನಿದ್ದ. ಅವನ ತಂದೆಯು ಅವನಿಗೆ ಶ್ವೇತಕೇತುವೇ ! ನಮ್ಮ ಕುಲದಲ್ಲಿ ಬಂದವರಾರೂ ವೇದಾಧ್ಯಯನ ಮಾಡದೇ ನಿಂದಿತ ಬ್ರಾಹ್ಮಣರಂತಾದುದಕ್ಕೆ ನಿದರ್ಶನವಿಲ್ಲ. ಆದುದರಿಂದ ವೇದಾಧ್ಯಯನಕ್ಕೋಸ್ಕರ ಗುರುಕುಲವಾಸವನ್ನು ಕೈಗೊಳ್ಳು' ಎಂದರು.

ಸ ಹ ದ್ವಾದಶವರ್ಷ ಉಪೇತ್ಯಚತುರ್ವಿಂಶತಿವರ್ಷಃಸರ್ವಾನ್ ವೇದಾನಧೀತ್ಯ-ಮಹಾಮನಾಃ ಅನೂಚಾನಮಾನೀ ಸ್ತಬ್ಧ ಏಯಾಯ । ತಂ ಹ ಪಿತೋವಾಚ 'ಶ್ವೇತಕೇತೋ ಯನ್ನು ಖಲು ಸೋಮ್ಯೇದಂ ಮಹಾಮನಾ ಅನೂಚಾನಮಾನೀಸ್ತಬ್ಧೋಽಸಿ । ಉತ ತಮಾದೇಶಮಪ್ರಾಕ್ಷ್ಯಃ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್' ಇತಿ ॥

ಹನ್ನೆರಡು ವರ್ಷ ವಯಸ್ಸಿನ ಆ ಶ್ವೇತಕೇತುವು ಗುರುಕುಲಕ್ಕೆ ಹೋಗಿ ತನ್ನ ಇಪ್ಪತ್ನಾಲ್ಕು ವಯಸ್ಸಿನ ತನಕ ಎಲ್ಲಾ ವೇದಗಳನ್ನು ಅಧ್ಯಯನ ಮಾಡಿ, ತಾನು ಷಡಂಗ ವೇದಾಧ್ಯಯನ ಮಾಡಿದವನೆಂದೂ, ಬಹಳ ಶ್ರೇಷ್ಠನೆಂದೂ ಅಹಂಕಾರವುಳ್ಳವನಾಗಿ ಅವಿನೀತನಾಗಿ ಮನೆಗೆ ಮರಳಿದನು.

ಆ ಶ್ವೇತಕೇತುವನ್ನು ನೋಡಿ ವಿಷಣ್ಣನಾದ ತಂದೆಯು, ಸರ್ವನಿಯಾಮಕನಾಗಿ ಸರ್ವೋತ್ತಮನಾಗಿರುವ ಪರಮಾತ್ಮನ ಅರಿವಿಲ್ಲದಿರುವುದರಿಂದಲೇ ಮಗನ ಈ ಅಹಂಕಾರ ಎಂದರಿತು 'ಶ್ವೇತಕೇತುವೇ! ಈ ರೀತಿಯಲ್ಲಿ ಸಾಂಗವೇದಾಧ್ಯಯನ ಮಾಡಿರುವನೆಂದು ಅಭಿಮಾನದಿಂದತಾನೇಶ್ರೇಷ್ಠನೆಂದುತಿಳಿದುಕೊಂಡವನಾಗಿಅವಿನೀತನಾಗಿರುವೆಯಷ್ಟೆ. ಯಾವ ಪರಮ ಪ್ರಮೇಯವನ್ನು ಉಪದೇಶ ಪಡೆದರೆ ಎಲ್ಲವನ್ನೂ ಉಪದೇಶ ಪಡೆದಂತಾಗುತ್ತದೋ, ಯಾವುದನ್ನು ಮನನ ಮಾಡಿದರೆ ಎಲ್ಲವನ್ನೂ ಮನನ ಮಾಡಿದಂತಾಗುವುದೋ, ಯಾವುದನ್ನು ವಿಶೇಷವಾಗಿ ಅರಿತರೆ ಬೇರೆಲ್ಲವನ್ನೂ ವಿಶೇಷವಾಗಿ ಅರಿತಂತಾಗುವುದೋ ಅಂತಹ ವೇದಾಧ್ಯಯನದ ಮುಖ್ಯ ಉದ್ದೇಶವಾಗಿರುವ ಪರಮಾತ್ಮತತ್ತ್ವವನ್ನು ಕೇಳಿ ತಿಳಿದುಕೊಂಡಿರುವಿಯೇನು?' ಎಂದು ಕೇಳಿದನು.

ಅಧೀತ್ಯಬ್ದದ್ವಾದಶತ್ವಾತ್ ದ್ವಾದಶಾಬ್ದ ಇತೀರಿತಃ । ಶ್ವೇತಕೇತುರ್ಭಾರತೇ ತು ನೋತ್ಪತ್ತಿದ್ವಾದಶತ್ವತಃ ॥ ಇತಿ ವಾಕ್ಯನಿರ್ಣಯೇ ॥

'ಶ್ವೇತಕೇತುವಿನ ಗುರುಕುಲಾಧ್ಯಯನದ ಅವಧಿಯು ಹನ್ನೆರಡು ವರ್ಷಗಳಾದುದರಿಂದ,

ಮನೆಗೆ ಮರಳಿದ ಶ್ವೇತಕೇತುವು ಅಧ್ಯಯನಾವಧಿ ವಿವಕ್ಷೆಯಿಂದ ಹನ್ನೆರಡು ವರ್ಷದವನೆಂದು ಮಹಾಭಾರತದಲ್ಲಿ ಹೇಳಲ್ಪಟ್ಟಿದ್ದಾನೆ. ಹುಟ್ಟಿದಂದಿನಿಂದ ಹನ್ನೆರಡು ವರ್ಷದವನೆಂದು ಅದರ ಅಭಿಪ್ರಾಯವಲ್ಲ' ಎಂದು ವಾಕ್ಯನಿರ್ಣಯ ಎಂಬ ಗ್ರಂಥದಲ್ಲಿದೆ.

**'ಕಥಂ ನು ಭಗವಃ ಸ ಆದೇಶೋ ಭವತ' ಇತಿ ॥**

'ಪೂಜ್ಯರೇ! ಒಂದು ವಸ್ತುವನ್ನು ಶ್ರವಣ ಮನನ ಹಾಗೂ ಧ್ಯಾನದಿಂದ ಅರಿತುಕೊಂಡಾಗ ಬೇರೆ ಎಲ್ಲಾ ವಸ್ತುಗಳ ಶ್ರವಣ ಮನನ ಧ್ಯಾನಗಳನ್ನು ಮಾಡಿದಂತಾಗುತ್ತದೆ ಎಂಬ ಈ ಉಪದೇಶವು ಹೇಗೆ ಯುಕ್ತವಾದೀತು?' ಎಂದು ಶ್ವೇತಕೇತುವು ತಂದೆಯನ್ನು ಕೇಳಿದನು.

'ಯಥಾ ಸೋಮ್ಯೈಕೇನ ಮೃತ್ ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ, ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥

ಮಗನ ಪ್ರಶ್ನೆಗೆ ಉತ್ತರವಾಗಿ ಉದ್ದಾಲಕರು 'ಎಲೋ ಮಂಗಳ ಸ್ವರೂಪನೇ, ಒಂದು ಮಣ್ಣಿನ ಮುದ್ದೆಯನ್ನು ತಿಳಿದುಕೊಂಡರೆ, ಮಣ್ಣಿನಿಂದಾದ ಇತರ ಎಲ್ಲಾ ವಸ್ತುಗಳೂ ಮಣ್ಣೇ ಎಂದು ಹೇಗೆ ತಿಳಿಯಲ್ಪಡುತ್ತದೆಯೋ ಹಾಗೆಯೇ, ಪರಮಾತ್ಮನನ್ನು ಸತ್ಯ ಎಂದರಿತುಕೊಂಡರೆ, ಅವನಂತಯೇ ಪ್ರಾಮಾಣಿಕವಾದ ಜಗತ್ತು ಸತ್ಯ ಎಂದು ತಿಳಿಯಲ್ಪಡುತ್ತವೆ.

ಸಂಸ್ಕೃತಭಾಷೆಗಿಂತ ಇತರವಾದ ಎಲ್ಲಾ ಭಾಷೆಗಳಲ್ಲಿ ಮಣ್ಣು ಮೊದಲಾದ ಶಬ್ದಗಳನ್ನು ವಾಗಿಂದ್ರಿಯದಿಂದ ನಾನಾ ಪ್ರಕಾರವಾಗಿ ಉಚ್ಚಾರಣೆ ಮಾಡುವುದು. ಆ ಶಬ್ದಗಳ ಉತ್ಪತ್ತಿಯೇ ಆಗಿದೆ. ಮೃತ್ತಿಕಾ ಮೊದಲಾದ ಸಂಸ್ಕೃತ ಶಬ್ದಗಳಂತೆ ಮೊದಲೇ ಇರುವವುಗಳ ಅಭಿವ್ಯಕ್ತಿಯಲ್ಲ. ಆದುದರಿಂದ ಆ ಶಬ್ದಗಳೆಲ್ಲಾ ಅನಿತ್ಯ. ಮೃತ್ತಿಕಾ ಮೊದಲಾದ ಸಂಸ್ಕೃತ ನಾಮಧೇಯಗಳು ನಿತ್ಯ. ಹೀಗೆ ಸಂಸ್ಕೃತಪದಗಳು ಪ್ರಧಾನ. ಸಂಸ್ಕೃತೇತರ ಭಾಷೆಗಳಲ್ಲಿರುವ ಪದಗಳು ಅಪ್ರಧಾನ. ಹೇಗೆ ಪ್ರಧಾನವಾದ ಸಂಸ್ಕೃತಪದಗಳನ್ನು ಅರಿತುಕೊಂಡ ಮಾತ್ರದಿಂದ ಇತರ ಭಾಷೆಗಳನ್ನು ಅರಿತುಕೊಂಡಿದ್ದರಿಂದ ಸಿಗಬಹುದಾದ ಕೀರ್ತಿ, ಪ್ರತಿಷ್ಠೆ ಮೊದಲಾದ ಪ್ರಯೋಜನವು ಸಿದ್ಧಿಸುತ್ತದೋ, ಹಾಗೆಯೇ ಪ್ರಧಾನವಾದ ಪರಮಾತ್ಮನನ್ನು ಅರಿತುಕೊಂಡರೆ ಕರ್ಮ, ದೇವತೆ ಇವೇ ಮೊದಲಾದ ಜಗತ್ತನ್ನು ಅರಿತುಕೊಂಡದ್ದರಿಂದ ಸಿಗುವ ಸ್ವರ್ಗಾದಿ ಫಲವೆಲ್ಲವೂ ಲಭಿಸುತ್ತವೆ.

ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ, ನಾಮಧೇಯಂ । ಲೋಹಮಣಿರಿತ್ಯೇವ ಸತ್ಯಮ್ ।

ಲೋಹಗಳಲ್ಲೆಲ್ಲಾ ಪ್ರಧಾನವಾಗಿದ್ದು ಲೋಹಮಣಿ(ಲೋಹಶ್ರೇಷ್ಠ) ಎನಿಸಿಕೊಂಡಿರುವ ಸುವರ್ಣವನ್ನು ಲೋಹವೆಂದು ಅರಿತರೆ, ಇತರ ಎಲ್ಲಾ ಲೋಹಮಯವಾದ ವಸ್ತುಗಳು

ಲೋಹವೆಂದು ಸುಲಭವಾಗಿ ತಿಳಿಯಬಹುದು. ಹಾಗೆಯೇ ಪರಮಾತ್ಮನನ್ನು ಜ್ಞಾನಾನಂದ ರೂಪನೆಂದು ಅರಿತರೆ, ಅವನಂತೆ ಚೇತನರಾದ ಜೀವರನ್ನೂ ಹಾಗೇ ತಿಳಿಯಬಹುದು.

ವಾಗಿಂದ್ರಿಯದಿಂದ ಸಂಸ್ಕೃತೇತರ ಭಾಷಾಶಬ್ದಗಳ ಉಚ್ಚಾರಣೆಯು ನಾನಾ ಪ್ರಕಾರವಾಗಿ ಮಾಡಲ್ಪಡುತ್ತಿರುವ ಕಾರಣ ಅಂತಹ ಶಬ್ದಗಳು ಅನಿತ್ಯ. ಲೋಹಮಣಿ ಎಂದು ಮುಂತಾದ ಸಂಸ್ಕೃತ ನಾಮಧೇಯಗಳು ನಿತ್ಯ. ಹೀಗೆ ನಿತ್ಯವಾಗಿದ್ದು ಪ್ರಧಾನವಾಗಿರುವ ಸಂಸ್ಕೃತ ಭಾಷೆಯನ್ನರಿತುಕೊಂಡ ಮಾತ್ರದಿಂದ, ಅನಿತ್ಯವಾಗಿದ್ದು ಅಪ್ರಧಾನವಾಗಿರುವ ಇತರ ಭಾಷಾ ಪರಿಜ್ಞಾನದಿಂದ ದೊರಕಬಹುದಾದ ಸಂಪತ್ತು ಮನ್ನಣೆಯೇ ಮೊದಲಾದ ಫಲಗಳು ದೊರೆಯುತ್ತವೆ. ಹಾಗೆಯೇ ಪರಮಾತ್ಮನು ಇತರ ಪ್ರಪಂಚಕ್ಕಿಂತ ಪ್ರಧಾನನಾದ ಕಾರಣ ಅವನನ್ನು ಅರಿತುಕೊಂಡರೆ ಅಷ್ಟರಿಂದಲೇ ಅಪ್ರಧಾನವಾದ ಕರ್ಮ, ದೇವತೆಗಳೇ ಮೊದಲಾದ ಜಗತ್ತಿನ ಪರಿಜ್ಞಾನದಿಂದ ಸಿಗಬಹುದಾದ ಸ್ವರ್ಗಾದಿ ಪ್ರಯೋಜನವು ಕೈಗೂಡುತ್ತದೆ.

'ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್। ವಾಚಾರಂಭಣಂ ವಿಕಾರೋ, ನಾಮಧೇಯಂ ಕಾರ್ಷ್ಣಾಯಸಮಿತ್ಯೇವ ಸತ್ಯಮ್ । ಏವಂ ಸೋಮ್ಯ ಸ ಆದೇಶೋ ಭವತಿ' ಇತಿ ॥

ಅಲ್ಪವಾದ ಕಬ್ಬಿಣದಿಂದ ನಿರ್ಮಿತವಾದ ಒಂದು ಉಗುರುಕತ್ತಿಯನ್ನು, ಇದು ಕಬ್ಬಿಣ ಎಂದು ಪರಿಚಯ ಮಾಡಿಕೊಂಡರೆ, ಅದಕ್ಕೆ ಸದೃಶವಾಗಿರುವುದರಿಂದಾಗಿ ಕಬ್ಬಿಣದಿಂದ ನಿರ್ಮಿತವಾದ ವಸ್ತುಗಳನ್ನೆಲ್ಲಾ ಕಬ್ಬಿಣವೆಂದು ತಿಳಿದುಕೊಂಡಂತಾಗುತ್ತದೆ ಎಂದ ಮೇಲೆ ಶ್ರೇಷ್ಠನಾದ ಪರಮಾತ್ಮನನ್ನು ಸತ್ಯ ಎಂದು ಅರಿತುಕೊಂಡರೆ, ಅವನಂತೆ ಪ್ರಾಮಾಣಿಕವಾಗಿದ್ದು ಅವನಿಗೆ ಸದೃಶವಾದ ಅಲ್ಪವಾದ ಜಗತ್ತನ್ನು ಸತ್ಯವೆಂದು ಅರಿತಂತಾಗುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ.

ವಾಗಿಂದ್ರಿಯದಿಂದ ಕಬ್ಬಿಣ ಎಂದು ಮೊದಲಾದ ಸಂಸ್ಕೃತೇತರ ಶಬ್ದಗಳ ಅನಿತ್ಯ ಉಚ್ಚಾರಣೆಯು ನಾನಾ ವಿಧವಾಗಿ ಮಾಡಲ್ಪಡುತ್ತಿರುವ ಕಾರಣ ಆ ಶಬ್ದಗಳು ಅನಿತ್ಯ. ಕಾರ್ಷ್ಣಾಯಸ ಮೊದಲಾದ ಸಂಸ್ಕೃತ ಪದಗಳ ಉಚ್ಚಾರಣೆಯು ಅವುಗಳ ಉತ್ಪತ್ತಿಯಾಗಿರದೆ ಅಭಿವ್ಯಕ್ತಿ ಮಾತ್ರವೇ ಆಗಿರುವುದರಿಂದ ಅವು ನಿತ್ಯ. ಹೀಗೆ ನಿತ್ಯವಾಗಿದ್ದು ಪ್ರಧಾನವಾಗಿರುವ ಸಂಸ್ಕೃತ ಭಾಷೆಯನ್ನರಿತುಕೊಂಡ ಮಾತ್ರದಿಂದಲೇ ಅಪ್ರಧಾನವಾದ ಇತರ ಭಾಷೆಗಳ ಅರಿವಿನಿಂದ ದೊರಕಬಹುದಾದ ಪ್ರಯೋಜನವೆಲ್ಲಾ ಸಿದ್ಧಿಸುತ್ತದೆ. ಹಾಗೆಯೇ ಜಗತ್ತಿಗಿಂತ ಪರಮಾತ್ಮ ಪ್ರಧಾನವಾಗಿರುವ ಕಾರಣ ಪರಮಾತ್ಮನನ್ನು ಅರಿತುಕೊಂಡರೆ ಅಪ್ರಧಾನವಾದ ಜಗತ್ತನ್ನು ಅರಿತುಕೊಳ್ಳಲು ಪ್ರಯಾಸ ಪಡದಿದ್ದರೂ ಅದರ ಅರಿವಿನಿಂದ ಲಭಿಸಬಹುದಾದ ಪ್ರಯೋಜನವು ಲಭಿಸುತ್ತದೆ.

ಯಥಾ ಮೃತ್ಪಿಂಡ ವಿಜ್ಞಾನಾತ್ ಸಾದೃಶ್ಯಾದೇವ ಮೃಣ್ಮಯಾಃ।
ವಿಜ್ಞಾಯಂತೇ ತಥಾ ವಿಷ್ಣೋಃಸಾದೃಶ್ಯಾತ್ ಜಗದೇವ ಚ।
ಯಥಾ ಸ್ವರ್ಣಸ್ಯ ವಿಜ್ಞಾನಾತ್ ಸರ್ವೇ ಲೋಹಮಯಾಸ್ತಥಾ।

ಪ್ರಾಧಾನ್ಯಾದ್ ವಿಷ್ಣುವಿಜ್ಞಾನಾತ್ ವಿಜ್ಞಾತಂಸ್ಯಾಜ್ಜಗತ್ ಸದಾ।
ಅತ್ಯಲ್ಪೇಽಪಿ ಹಿ ವಿಜ್ಞಾತೇ ಸದೃಶೇ ತಾದೃಶಂ ಬಹು।
ಜ್ಞಾಯತೇ ನಖನಿಕೃಂತನ್ಯಾ ಯಥಾ ಸರ್ವಮಯೋಮಯಂ!
ಕಿಮು ವಿಷ್ಣೋರ್ಬಹೋರ್ಜ್ಞಾನಾತ್ ಅತ್ಯಲ್ಪಂ ಜಗದೀದೃಶಂ।

ಅನನ್ಯಾಧೀನ ವಿಜ್ಞಾನಾತ್ ಅನ್ಯಾಧೀನಂ ತಥೈವ ಚ।
ಮೃದಯೋಲೋಹನಾಮ್ನಾಂ ಹಿ ಜ್ಞಾನಾತ್ ಸಾಂಕೇತಿಕಂ ಯಥಾ ಇತ್ಯಾದಿ
ಸಾಮಸಂಹಿತಾಯಾಂ॥

ಸ್ವರ್ಣಂಲೋಹಮಣಿಶ್ಚೈವ ಪುರಟಂ ಚಾಭಿಧೀಯತೇ॥ ಇತಿ ಶಬ್ದನಿರ್ಣಯೇ।

ಮಣ್ಣಿನ ಮುದ್ದೆಯ ಪರಿಚಯದಿಂದ ಅದಕ್ಕೆ ಕೇವಲ ಸದೃಶವಾದ ಮಣ್ಣಿನ ಮಡಿಕೆ ಮೊದಲಾದವುಗಳೂ ಹೇಗೆ ಪರಿಚಿತವಾಗುವವೋ, ಹಾಗೆಯೇ ಸತ್ಯನೆಂದು ಪರಮಾತ್ಮನನ್ನು ಅರಿತುಕೊಂಡಾಗ ಪರಮಾತ್ಮನಂತೆಯೇ ಪ್ರಾಮಾಣಿಕವಾಗಿರುವುದರಿಂದ, ಪರಮಾತ್ಮನಿಗೆ ಕೇವಲ ಸದೃಶವಾದ ಜಗತ್ತು ಸತ್ಯ ಎಂದುದರ ಅರಿವುಂಟಾಗುತ್ತದೆ. ಲೋಹಗಳಲ್ಲಿ ಪ್ರಧಾನವಾದ ಚಿನ್ನವನ್ನು ಲೋಹವೆಂದರಿತುಕೊಂಡರೆ ಅಪ್ರಧಾನವಾದ ಇತರ ಲೋಹಗಳನ್ನೂ ಲೋಹವೆಂದು ಅರಿಯಲು ಸಾಧ್ಯವಾಗುತ್ತದೆ. ಹಾಗೆಯೇ ಪ್ರಧಾನವಾದ ವಿಷ್ಣುವನ್ನು ಜ್ಞಾನಾನಂದಸ್ವರೂಪನೆಂದು ಅರಿತುಕೊಂಡರೆ ಅವನಂತೆ ಚೇತನರಾದ ಜೀವರೂ ಜ್ಞಾನಾನಂದಸ್ವರೂಪರೆಂದು ಅನುಮಾನದಿಂದ ತಿಳಿಯಲು ಸಾಧ್ಯ. ಒಂದು ಚಿಕ್ಕದಾದ ಉಗುರುಕತ್ತಿಯ ಪರಿಚಯವಾದಾಗಲೂ, ಅದರಂತೆಯೇ ಕಬ್ಬಿಣದ ನಿರ್ಮಿತವಾದ ಇತರ ಎಲ್ಲಾ ದೊಡ್ಡ ವಸ್ತುಗಳ ಪರಿಚಯ ಅನಾಯಾಸವಾಗಿ ಉಂಟಾಗುತ್ತದೆ. ಪರಮಾತ್ಮನು ಜಗತ್ತಿಗೆ ಸದೃಶನಷ್ಟೇ ಆಗಿರದೆ, ಜಗತ್ತಿಗಿಂತ ಎಲ್ಲಾ ದೃಷ್ಟಿಯಿಂದಲೂ ಶ್ರೇಷ್ಠನಾಗಿರುವನು. ಅಲ್ಪವಾದ ವಸ್ತುವಿನ ಜ್ಞಾನದಿಂದ ಅದಕ್ಕೆ ಸದೃಶವಾದ ಇತರ ದೊಡ್ಡ ವಸ್ತುಗಳ ಜ್ಞಾನವುಂಟಾಗುವುದಾದರೆ, ಶ್ರೇಷ್ಠನಾದ ವಿಷ್ಣುವಿನ ಜ್ಞಾನದಿಂದ ಅವನಿಗೆ ಸದೃಶವಾದ ಅಲ್ಪವಾದ ಜಗತ್ತಿನ ಜ್ಞಾನ ಉಂಟಾಗಲಾರದೆ? ಮೃತ್ತಿಕಾ ಲೋಹಮಣಿ ಕೃಷ್ಣಾಯಸ ಮೊದಲಾದ ಸಂಸ್ಕೃತ ಶಬ್ದಗಳೆಲ್ಲಾ ನಿತ್ಯವಾಗಿದ್ದು ಅನ್ಯಭಾಷಾಧೀನವಲ್ಲ. ಇತರ ಭಾಷೆಗಳಲ್ಲಿರುವ ಇದೇ ಅರ್ಥ ಬರುವ ಶಬ್ದಗಳೆಲ್ಲಾ ಸಂಸ್ಕೃತ ಭಾಷೆಯನ್ನವಲಂಬಿಸಿಕೊಂಡಿವೆ. ಹೀಗೆ ಅನ್ಯ ಭಾಷಾಧೀನವಾಗದೆ ಇರುವ ಸಂಸ್ಕೃತ ಭಾಷಾ ಪದಗಳು ಪ್ರಧಾನ. ಅವನ್ನವಲಂಬಿಸಿಕೊಂಡಿರುವ ಇತರ ಭಾಷಾ ಪದಗಳು

ಅಪ್ರಧಾನ. ಪ್ರಧಾನವಾಗಿರುವ ಸಂಸ್ಕೃತ ಪದಗಳನ್ನರಿತುಕೊಂಡರೆ, ಅಪ್ರಧಾನವಾದ ಇತರ ಭಾಷಾ ಶಬ್ದಗಳ ಅರಿವಿನ ಪ್ರಯೋಜನ ಸ್ವತಃ ಸಿದ್ಧಿಸುತ್ತದೆ. ಹೀಗೆಯೇ ಅನನ್ಯಾಧೀನನಾಗಿದ್ದು ಪ್ರಧಾನನಾಗಿರುವ ವಿಷ್ಣುವಿನ ಅರಿವಿನಿಂದ ಅವನನ್ನು ಆಶ್ರಯಿಸಿಕೊಂಡಿರುವ ಅಪ್ರಧಾನವಾದ ಜಗತ್ತಿನ ಅರಿವಿನ ಪ್ರಯೋಜನ ಉಂಟಾಗುತ್ತದೆ ಎಂದು ಸಾಮಸಂಹಿತೆಯಲ್ಲಿದೆ.

ಬಂಗಾರವೇ ಲೋಹಮಣಿ ಎಂದೂ ಪುರಟ ಎಂದೂ ಪ್ರಸಿದ್ಧವಾಗಿದೆ ಎಂದು ಶಬ್ದನಿರ್ಣಯ ಹೇಳುತ್ತಿದೆ..

ವಿಕಾರತ್ವವಿವಕ್ಷಾಯಾಂ ಏಕಪಿಂಡಮಣಿಶಬ್ದಾಃ ವ್ಯರ್ಥಾಃ ಸ್ಯುಃ।

'ಯಥಾ ಸೋಮ್ಯ' ಎಂದು ಮುಂತಾದ ಮೂರು ದೃಷ್ಟಾಂತ ವಾಕ್ಯಗಳಲ್ಲಿ ಮೃತ್ ಮೃಣ್ಮಯಗಳಿಗೂ, ಲೋಹಲೋಹಮಯಗಳಿಗೂ, ಕೃಷ್ಣಾಯಸಹಾಗೂಕಾರ್ಷ್ಣಾಯಸಗಳಿಗೂ ಉಪಾದಾನ ಉಪಾದೇಯಭಾವವನ್ನು ಹೇಳುವುದು ಉದ್ದೇಶವಾಗಿದ್ದಲ್ಲಿ, ಇಲ್ಲಿ ಹೇಳಿರುವ ಪಿಂಡ ಮಣಿ ನಖನಿಕೃಂತನ ಸರ್ವ ಶಬ್ದಗಳು ನಿರರ್ಥಕವಾಗುವವು. ಏಕ, ಸರ್ವ ಶಬ್ದಗಳು ಪರಸ್ಪರ ವಿರುದ್ಧಾರ್ಥವುಳ್ಳವುಗಳೂ ಆಗುವುವು.

'ಮೃತ್ತಿಕೇತಿ' 'ಲೋಹಮಣಿರಿತಿ' 'ಕಾರ್ಷ್ಣಾಯಸಮಿತಿ' ಅತ್ರ 'ಇತಿ' ಶಬ್ದಾಃ ನಾಮಧೇಯಶಬ್ದಾಶ್ಚವ್ಯರ್ಥಾಸ್ಯುಃ। ವಿಕಾರಮಿಥ್ಯಾತ್ವವಿವಕ್ಷಯಾಂ ಮೃತ್ತಿಕೈವ ಸತ್ಯಂ, ಲೋಹ ಏವ ಸತ್ಯಂ, ಕಾರ್ಷ್ಣಾಯಸಮೇವ ಸತ್ಯಮಿ'ತ್ಯೇವ ಸ್ಯಾತ್ । ನ ತು ನಾಮಧೇಯಾದಿಶಬ್ದಾಃ।

'ವಾಚಾರಂಭಣಂ ವಿಕಾರೋ ನಾಮಧೇಯಂ' ಎಂದು ಆರಂಭಗೊಳ್ಳುವ ಮೂರು ದೃಷ್ಟಾಂತವಾಕ್ಯಗಳ ಉದ್ದೇಶ. ವಿಕಾರಗಳ ಅಸತ್ಯತೆಯನ್ನು ತಿಳಿಸುವುದೇ ಆಗಿದೆ ಎಂದಿಟ್ಟುಕೊಂಡಲ್ಲಿ ಮೃತ್ತಿಕೇತಿ, ಮಣಿರಿತಿ, ಕಾರ್ಷ್ಣಾಯಸಮಿತಿ ಎಂದು ಹೇಳಿರುವ ಮೂರು'ಇತಿ' ಶಬ್ದಗಳೂ, ಈ ವಾಕ್ಯಗಳಲ್ಲಿ ಹೇಳಿರುವ 'ನಾಮಧೇಯ' ಮುಂತಾದ ಶಬ್ದಗಳೂ ವ್ಯರ್ಥವೆನಿಸುತ್ತವೆ. ಮೃತ್ತಿಕೈವ ಸತ್ಯಂ, ಲೋಹಮೇವ ಸತ್ಯಂ, ಕಾರ್ಷ್ಣಾಯಸಮೇವ ಸತ್ಯಂ ಎಂದೇ ಹೇಳಬೇಕಾಗಿತ್ತು. 'ಇತಿ' ಶಬ್ದ, 'ನಾಮಧೇಯ' ಶಬ್ದಗಳನ್ನು ಸೇರಿಸಬಾರದಿತ್ತು.

'ನ ಚ ವಾಚಾರಂಭಣಮಾತ್ರಮ್' ಇತಿ ಮಾತ್ರಶಬ್ದೋಽಸ್ತಿ । ನ ಚಾರಭ್ಯಸ್ಯಾರಂಭಣಮಿತಿ ಯುಜ್ಯತೇ ಶಬ್ದಃ ಕ್ರಿಯಾ ಹ್ಯಾರಂಭಣಮ್।

'ವಾಚಾರಂಭಣಮಾತ್ರಂ' ಎಂಬುದಾಗಿ ಉಪನಿಷತ್ತಿನಲ್ಲಿ ಮಾತ್ರ ಶಬ್ದವೇನೂ ಇಲ್ಲ. ಆರಂಭಣ ಎಂಬುದೊಂದು ಕ್ರಿಯೆ. ಅದರ ಕರ್ಮವಾದ ಆರಂಭಿಸಲ್ಪಡತಕ್ಕ ವಸ್ತುವನ್ನು ಹೇಳಲು ಆರಂಭಣ ಎಂಬ ಶಬ್ದದ ಪ್ರಯೋಗವೂ ಅನುಚಿತವಾಗಿದೆ.

ಅತೋ 'ವಾಚಾ ನಾಮ್ನಾಂ ಆರಂಭಣಂ ವಿಕಾರೋ ವಿವಿಧಾಕಾರೋ ವಿಕ್ರಿಯಮಾಣಃ । ಸತ್ಯಂ ನಾಮಧೇಯಂ, ಸರ್ವದಾ ವಿದ್ಯಮಾನಂ ನಾಮಧೇಯಂ ಮೃತ್ತಿಕೇತ್ಯಾದಯ' ಇತ್ಯರ್ಥಃ । ಸತ್ತ್ವೇನ ಕಾಲತಃತತಂ ಜ್ಞಾಯತೇ ವಿದ್ವದ್ಭಿರಿತಿ ನಿತ್ಯತ್ವೇನ ಪ್ರಸಿದ್ಧಮೇವ ಸತ್ಯಮಿತ್ಯತ್ರ ವಿವಕ್ಷಿತಮ್ ।

ಮಾಯಾವಾದಿಗಳ ವ್ಯಾಖ್ಯಾನವು ಹೀಗೆ ಅಯುಕ್ತವಾದುದರಿಂದ 'ವಾಚಾರಂಭಣಂ' ಎಂಬ ವಾಕ್ಯವನ್ನು ಹೀಗೆ ಅರ್ಥೈಸಬೇಕು - ವಾಗಿಂದ್ರಿಯದಿಂದ ಸಂಸ್ಕೃತೇತರ ಭಾಷಾಪದಗಳ ಉಚ್ಚಾರಣವು, ವಿಕಾರಃ = ವಿವಿಧಾಕಾರ ಅಂದರೆ ನಾನಾ ರೀತಿಯಲ್ಲಿ ಮಾಡಲ್ಪಡುವಂತಹುದು. ಆದುದರಿಂದ ಅಂತಹ ಶಬ್ದಗಳು ಶಾಶ್ವತವಲ್ಲ. ಸತ್ಯಂ = ಯಾವತ್ತೂ ಶಾಶ್ವತವಾಗಿರುವ, ನಾಮಧೇಯಂ = ಶಬ್ದವೆಂದರೆ, ಮೃತ್ತಿಕೇತಿ = ಮೃತ್ತಿಕಾ ಮೊದಲಾದ ಸಂಸ್ಕೃತಶಬ್ದಗಳೇ, ಸದ್ರೂಪದಿಂದ ಕಾಲವನ್ನು ವ್ಯಾಪಿಸಿದೆ ಎಂದು ಜ್ಞಾನಿಗಳಿಂದ ತಿಳಿಯಲ್ಪಡುವಂಥಹುದು ಎಂಬ ವ್ಯುತ್ಪತ್ತಿಯಿಂದ ನಿತ್ಯವೆಂದು ಪ್ರಸಿದ್ಧವಾದ ವಸ್ತುವೇ ಉಪನಿಷತ್ತಿನಲ್ಲಿ ಸತ್ಯಶಬ್ದದಿಂದ ವಿವಕ್ಷಿತವಾಗಿದೆ.

ಸಂಕೇತೇನ ಕ್ರಿಯಾಮಾಣಾನಿ ಹ್ಯನ್ಯಾನಿ ನಾಮಾನಿ । ಅತೋ ವಿಕಾರ ರೂಪಾಣಿ । ವಿಕಾರ ಶಬ್ದಸ್ಯ ನಿಯತ ಪುಲ್ಲಿಂಗತ್ವಾತ್ 'ಆರಂಭಣಂ ವಿಕಾರಃ' ಇತಿ 'ವೇದಾಃ ಪ್ರಮಾಣಂ' ಇತಿವತ್ ಯುಜ್ಯತೇ।

ಸಂಸ್ಕೃತೇತರವಾದ ಮಣ್ಣು ಮೊದಲಾದ ಶಬ್ದಗಳು ಆಯಾಯ ಭಾಷೆಯನ್ನು ಮಾತನಾಡುವ ಜನರ ಇಚ್ಛಾನುಸಾರ ಪ್ರಯುಕ್ತವಾಗಿವೆ. ಆದುದರಿಂದಲೇ ಜನರ ಇಚ್ಛೆಯಲ್ಲಿ ವಿಭಿನ್ನತೆ ಇರುವ ಕಾರಣ ಈ ಶಬ್ದಗಳ ಪ್ರಯೋಜನವೂ ನಾನಾ ರೀತಿಯಾಗಿದೆ. ಹೀಗೆ ಜನರಿಂದ ಇಚ್ಛಾನುಸಾರ ಪ್ರಯುಕ್ತವಾಗಿರುವ ಕಾರಣ ಅವು ಅನಿತ್ಯ. 'ವಾಚಾರಂಭಣಂ ವಿಕಾರಃ' ಎಂಬಲ್ಲಿ ವಾಚಾರಂಭಣಶಬ್ದವು ವಿಶೇಷ್ಯವಾಗಿದ್ದು ನಪುಂಸಕಲಿಂಗದಲ್ಲಿದ್ದರೂ, ವಿಕಾರಶಬ್ದವು ನಿತ್ಯಪುಲ್ಲಿಂಗ ಶಬ್ದವಾದ ಕಾರಣ 'ವೇದಾಃಪ್ರಮಾಣಂ' ಎಂಬ ಪ್ರಯೋಗದಂತೆ, 'ವಾಚಾರಂಭಣಂ ವಿಕಾರಃ' ಎಂದು ವಿಶೇಷಣ-ವಿಶೇಷ್ಯಭಾವ ಯುಕ್ತವೇ ಆಗಿದೆ. ಅನಿಯತ ಲಿಂಗಶಬ್ದಗಳಿಗೆ ಸಮಾನಲಿಂಗತ್ವವಿದ್ದರೆ ಮಾತ್ರ ವಿಶೇಷಣ - ವಿಶೇಷ್ಯಭಾವವೆಂದು ನಿಯಮ. ನಿಯತಲಿಂಗವಾದ ವಿಕಾರಶಬ್ದಕ್ಕೆ ಈ ನಿಯಮ ಅನ್ವಯಿಸುವುದಿಲ್ಲ.

ನ ಚ ಮೃತ್ತಿಕಾದಿನಾಮವಿಕಾರಃ ಸಾಂಕೇತಿಕಂ ನಾಮ। ಪ್ರಧಾನ್ಯಮೇವಾತ್ರ ಮೃತ್ತಿಕಾದಿ ನಾಮವತ್ ಭಗವತೋ ವಿವಕ್ಷಿತಂ. ಸೃಷ್ಟಿಶ್ಚ ಪ್ರಾಧಾನ್ಯಾರ್ಥಮೇವಾತ್ರೋಚ್ಯತೇ।

'ಮೃತ್ತಿಕಾ' ಎಂದು ಮುಂತಾಗಿ ಸಂಸ್ಕೃತಶಬ್ದಗಳ ಪರಿಣಾಮವೇ 'ಮಣ್ಣು' ಮುಂತಾದ ಪ್ರಾಕೃತಶಬ್ದಗಳಲ್ಲ. 'ವಾಚಾರಂಭಣಂ' ಇತ್ಯಾದಿ ದೃಷ್ಟಾಂತ ವಾಕ್ಯದಿಂದ ಇತರ

ಅಪ್ರಧಾನ. ಪ್ರಧಾನವಾಗಿರುವ ಸಂಸ್ಕೃತ ಪದಗಳನ್ನರಿತುಕೊಂಡರೆ, ಅಪ್ರಧಾನವಾದ ಇತರ ಭಾಷಾ ಶಬ್ದಗಳ ಅರಿವಿನ ಪ್ರಯೋಜನ ಸ್ವತಃ ಸಿದ್ಧಿಸುತ್ತದೆ. ಹೀಗೆಯೇ ಅನನ್ಯಾಧೀನನಾಗಿದ್ದು ಪ್ರಧಾನನಾಗಿರುವ ವಿಷ್ಣುವಿನ ಅರಿವಿನಿಂದ ಅವನನ್ನು ಆಶ್ರಯಿಸಿಕೊಂಡಿರುವ ಅಪ್ರಧಾನವಾದ ಜಗತ್ತಿನ ಅರಿವಿನ ಪ್ರಯೋಜನ ಉಂಟಾಗುತ್ತದೆ ಎಂದು ಸಾಮಸಂಹಿತೆಯಲ್ಲಿದೆ.

ಬಂಗಾರವೇ ಲೋಹಮಣಿ ಎಂದೂ ಪುರಟ ಎಂದೂ ಪ್ರಸಿದ್ಧವಾಗಿದೆ ಎಂದು ಶಬ್ದನಿರ್ಣಯ ಹೇಳುತ್ತಿದೆ..

ವಿಕಾರತ್ವವಿವಕ್ಷಾಯಾಂ ಏಕಪಿಂಡಮಣಿಶಬ್ದಾಃ ವ್ಯರ್ಥಾಃ ಸ್ಯುಃ।

'ಯಥಾ ಸೋಮ್ಯ' ಎಂದು ಮುಂತಾದ ಮೂರು ದೃಷ್ಟಾಂತ ವಾಕ್ಯಗಳಲ್ಲಿ ಮೃತ್ ಮೃಣ್ಮಯಗಳಿಗೂ, ಲೋಹಲೋಹಮಯಗಳಿಗೂ, ಕೃಷ್ಣಾಯಸಹಾಗೂಕಾರ್ಷ್ಣಾಯಸಗಳಿಗೂ ಉಪಾದಾನ ಉಪಾದೇಯಭಾವವನ್ನು ಹೇಳುವುದು ಉದ್ದೇಶವಾಗಿದ್ದಲ್ಲಿ, ಇಲ್ಲಿ ಹೇಳಿರುವ ಪಿಂಡ ಮಣಿ ನಖನಿಕೃಂತನ ಸರ್ವ ಶಬ್ದಗಳು ನಿರರ್ಥಕವಾಗುವವು. ಏಕ, ಸರ್ವ ಶಬ್ದಗಳು ಪರಸ್ಪರ ವಿರುದ್ಧಾರ್ಥವುಳ್ಳವುಗಳೂ ಆಗುವುವು.

'ಮೃತ್ತಿಕೇತಿ' 'ಲೋಹಮಣಿರಿತಿ' 'ಕಾರ್ಷ್ಣಾಯಸಮಿತಿ' ಅತ್ರ 'ಇತಿ' ಶಬ್ದಾಃ ನಾಮಧೇಯಶಬ್ದಾಶ್ಚವ್ಯರ್ಥಾಸ್ಯುಃ। ವಿಕಾರಮಿಥ್ಯಾತ್ವವಿವಕ್ಷಯಾಂ ಮೃತ್ತಿಕೈವ ಸತ್ಯಂ, ಲೋಹ ಏವ ಸತ್ಯಂ, ಕಾರ್ಷ್ಣಾಯಸಮೇವ ಸತ್ಯಮಿ'ತ್ಯೇವ ಸ್ಯಾತ್ । ನ ತು ನಾಮಧೇಯಾದಿಶಬ್ದಾಃ।

'ವಾಚಾರಂಭಣಂ ವಿಕಾರೋ ನಾಮಧೇಯಂ' ಎಂದು ಆರಂಭಗೊಳ್ಳುವ ಮೂರು ದೃಷ್ಟಾಂತವಾಕ್ಯಗಳ ಉದ್ದೇಶ. ವಿಕಾರಗಳ ಅಸತ್ಯತೆಯನ್ನು ತಿಳಿಸುವುದೇ ಆಗಿದೆ ಎಂದಿಟ್ಟುಕೊಂಡಲ್ಲಿ ಮೃತ್ತಿಕೇತಿ, ಮಣಿರಿತಿ, ಕಾರ್ಷ್ಣಾಯಸಮಿತಿ ಎಂದು ಹೇಳಿರುವ ಮೂರು'ಇತಿ' ಶಬ್ದಗಳೂ, ಈ ವಾಕ್ಯಗಳಲ್ಲಿ ಹೇಳಿರುವ 'ನಾಮಧೇಯ' ಮುಂತಾದ ಶಬ್ದಗಳೂ ವ್ಯರ್ಥವೆನಿಸುತ್ತವೆ. ಮೃತ್ತಿಕೈವ ಸತ್ಯಂ, ಲೋಹಮೇವ ಸತ್ಯಂ, ಕಾರ್ಷ್ಣಾಯಸಮೇವ ಸತ್ಯಂ ಎಂದೇ ಹೇಳಬೇಕಾಗಿತ್ತು. 'ಇತಿ' ಶಬ್ದ, 'ನಾಮಧೇಯ' ಶಬ್ದಗಳನ್ನು ಸೇರಿಸಬಾರದಿತ್ತು.

'ನ ಚ ವಾಚಾರಂಭಣಮಾತ್ರಮ್' ಇತಿ ಮಾತ್ರಶಬ್ದೋಽಸ್ತಿ । ನ ಚಾರಭ್ಯಸ್ಯಾರಂಭಣಮಿತಿ ಯುಜ್ಯತೇ ಶಬ್ದಃ ಕ್ರಿಯಾ ಹ್ಯಾರಂಭಣಮ್ ।

'ವಾಚಾರಂಭಣಮಾತ್ರಂ' ಎಂಬುದಾಗಿ ಉಪನಿಷತ್ತಿನಲ್ಲಿ ಮಾತ್ರ ಶಬ್ದವೇನೂ ಇಲ್ಲ. ಆರಂಭಣ ಎಂಬುದೊಂದು ಕ್ರಿಯೆ. ಆದರ ಕರ್ಮವಾದ ಆರಂಭಿಸಲ್ಪಡತಕ್ಕ ವಸ್ತುವನ್ನು ಹೇಳಲು ಆರಂಭಣ ಎಂಬ ಶಬ್ದದ ಪ್ರಯೋಗವೂ ಅನುಚಿತವಾಗಿದೆ.

ಅತೋ 'ವಾಚಾ ನಾಮ್ನಾಂ ಆರಂಭಣಂ ವಿಕಾರೋ ವಿವಿಧಾಕಾರೋ ವಿಕ್ರಿಯಮಾಣಃ । ಸತ್ಯಂ ನಾಮಧೇಯಂ, ಸರ್ವದಾ ವಿದ್ಯಮಾನಂ ನಾಮಧೇಯಂ ಮೃತ್ತಿಕೇತ್ಯಾದಯ' ಇತ್ಯರ್ಥಃ । ಸತ್ತ್ವೇನ ಕಾಲತತತಂ ಜ್ಞಾಯತೇ ವಿದ್ವದ್ಭಿರಿತಿ ನಿತ್ಯತ್ವೇನ ಪ್ರಸಿದ್ಧಮೇವ ಸತ್ಯಮಿತ್ಯತ್ರ ವಿವಕ್ಷಿತಮ್ ।

ಮಾಯಾವಾದಿಗಳ ವ್ಯಾಖ್ಯಾನವು ಹೀಗೆ ಅಯುಕ್ತವಾದುದರಿಂದ 'ವಾಚಾರಂಭಣಂ' ಎಂಬ ವಾಕ್ಯವನ್ನು ಹೀಗೆ ಅರ್ಥೈಸಬೇಕು - ವಾಗಿಂದ್ರಿಯದಿಂದ ಸಂಸ್ಕೃತೇತರ ಭಾಷಾಪದಗಳ ಉಚ್ಚಾರಣವು, ವಿಕಾರಃ = ವಿವಿಧಾಕಾರ ಅಂದರೆ ನಾನಾ ರೀತಿಯಲ್ಲಿ ಮಾಡಲ್ಪಡುವಂತಹುದು. ಆದುದರಿಂದ ಅಂತಹ ಶಬ್ದಗಳು ಶಾಶ್ವತವಲ್ಲ. ಸತ್ಯಂ = ಯಾವತ್ತೂ ಶಾಶ್ವತವಾಗಿರುವ, ನಾಮಧೇಯಂ = ಶಬ್ದವೆಂದರೆ, ಮೃತ್ತಿಕೇತಿ = ಮೃತ್ತಿಕಾ ಮೊದಲಾದ ಸಂಸ್ಕೃತಶಬ್ದಗಳೇ, ಸದ್ರೂಪದಿಂದ ಕಾಲವನ್ನು ವ್ಯಾಪಿಸಿದೆ ಎಂದು ಜ್ಞಾನಿಗಳಿಂದ ತಿಳಿಯಲ್ಪಡುವಂಥಹುದು ಎಂಬ ವ್ಯುತ್ಪತ್ತಿಯಿಂದ ನಿತ್ಯವೆಂದು ಪ್ರಸಿದ್ಧವಾದ ವಸ್ತುವೇ ಉಪನಿಷತ್ತಿನಲ್ಲಿ ಸತ್ಯಶಬ್ದದಿಂದ ವಿವಕ್ಷಿತವಾಗಿದೆ.

ಸಂಕೇತೇನ ಕ್ರಿಯಾಮಾಣಾನಿ ಹ್ಯನ್ಯಾನಿ ನಾಮಾನಿ । ಅತೋ ವಿಕಾರ ರೂಪಾಣಿ । ವಿಕಾರ ಶಬ್ದಸ್ಯ ನಿಯತ ಪುಲ್ಲಿಂಗತ್ವಾತ್ 'ಆರಂಭಣಂ ವಿಕಾರಃ' ಇತಿ 'ವೇದಾಃ ಪ್ರಮಾಣಂ' ಇತಿವತ್ ಯುಜ್ಯತೇ।

ಸಂಸ್ಕೃತೇತರವಾದ ಮಣ್ಣು ಮೊದಲಾದ ಶಬ್ದಗಳು ಆಯಾಯ ಭಾಷೆಯನ್ನು ಮಾತನಾಡುವ ಜನರ ಇಚ್ಛಾನುಸಾರ ಪ್ರಯುಕ್ತವಾಗಿವೆ. ಆದುದರಿಂದಲೇ ಜನರ ಇಚ್ಛೆಯಲ್ಲಿ ವಿಭಿನ್ನತೆ ಇರುವ ಕಾರಣ ಈ ಶಬ್ದಗಳ ಪ್ರಯೋಜನವೂ ನಾನಾ ರೀತಿಯಾಗಿದೆ. ಹೀಗೆ ಜನರಿಂದ ಇಚ್ಛಾನುಸಾರ ಪ್ರಯುಕ್ತವಾಗಿರುವ ಕಾರಣ ಅವು ಅನಿತ್ಯ. 'ವಾಚಾರಂಭಣಂ ವಿಕಾರಃ' ಎಂಬಲ್ಲಿ ವಾಚಾರಂಭಣಶಬ್ದವು ವಿಶೇಷ್ಯವಾಗಿದ್ದು ನಪುಂಸಕಲಿಂಗದಲ್ಲಿದ್ದರೂ, ವಿಕಾರಶಬ್ದವು ನಿತ್ಯಪುಲ್ಲಿಂಗ ಶಬ್ದವಾದ ಕಾರಣ 'ವೇದಾಃಪ್ರಮಾಣಂ' ಎಂಬ ಪ್ರಯೋಗದಂತೆ, 'ವಾಚಾರಂಭಣಂ ವಿಕಾರಃ' ಎಂದು ವಿಶೇಷಣ-ವಿಶೇಷ್ಯಭಾವ ಯುಕ್ತವೇ ಆಗಿದೆ. ಅನಿಯತ ಲಿಂಗಶಬ್ದಗಳಿಗೆ ಸಮಾನಲಿಂಗತ್ವವಿದ್ದರೆ ಮಾತ್ರ ವಿಶೇಷಣ - ವಿಶೇಷ್ಯಭಾವವೆಂದು ನಿಯಮ. ನಿಯತಲಿಂಗವಾದ ವಿಕಾರಶಬ್ದಕ್ಕೆ ಈ ನಿಯಮ ಅನ್ವಯಿಸುವುದಿಲ್ಲ.

ನ ಚ ಮೃತ್ತಿಕಾದಿನಾಮವಿಕಾರಃ ಸಾಂಕೇತಿಕಂ ನಾಮ । ಪ್ರಧಾನ್ಯಮೇವಾತ್ರ ಮೃತ್ತಿಕಾದಿ ನಾಮವತ್ ಭಗವತೋ ವಿವಕ್ಷಿತಂ. ಸೃಷ್ಟಿಶ್ಚ ಪ್ರಾಧಾನ್ಯಾರ್ಥಮೇವಾತ್ರೋಚ್ಯತೇ ।

'ಮೃತ್ತಿಕಾ' ಎಂದು ಮುಂತಾಗಿ ಸಂಸ್ಕೃತಶಬ್ದಗಳ ಪರಿಣಾಮವೇ 'ಮಣ್ಣು' ಮುಂತಾದ ಪ್ರಾಕೃತಶಬ್ದಗಳಲ್ಲ. 'ವಾಚಾರಂಭಣಂ' ಇತ್ಯಾದಿ ದೃಷ್ಟಾಂತ ವಾಕ್ಯದಿಂದ ಇತರ

ಭಾಷಾಶಬ್ದಗಳಿಗಿಂತ ಸಂಸ್ಕೃತಶಬ್ದಗಳಿಗೆ ಪ್ರಾಧಾನ್ಯವಿರುವಂತೆ ಜಗತ್ತಿಗಿಂತ ಪರಮಾತ್ಮನಿಗೆ ಪ್ರಾಧಾನ್ಯವಿದೆ ಎಂದು ಹೇಳುವುದೇ ವಿವಕ್ಷಿತ. ಪರಮಾತ್ಮನಿಗಿರುವ ಈ ಪ್ರಾಧಾನ್ಯವನ್ನು ಸಮರ್ಥಿಸುವುದಕ್ಕಾಗಿಯೇ ಮುಂದೆ ಜಗತ್‌ಸೃಷ್ಟಿಯೂ ಹೇಳಲ್ಪಡುತ್ತಿದೆ.

'ನ ವೈ ನೂನಂ ಭಗವಂತಸ್ತೇ ಏತದವೇದಿಷುಃ । ಯದ್ಯೇತದವೇದಿಷ್ಯನ್ ಕಥಂ ಮೇ ನಾವಕ್ಷ್ಯನ್' ಇತಿ । ಭಗವಾಂಸ್ತ್ವೇವ ಮೇ ತದ್‌ಬ್ರವೀತು' ಇತಿ । 'ತಥಾ ಸೋಮ್ಯ' ಇತಿಹೋವಾಚ ॥

ಪರಮಾತ್ಮನ ಜ್ಞಾನದಿಂದ ಇತರ ಎಲ್ಲಾ ಜಗತ್ತಿನ ಜ್ಞಾನವುಂಟಾಗುತ್ತದೆ ಎಂಬೀ ಪ್ರಮೇಯವನ್ನು ಪೂಜ್ಯರಾದ ಗುರುಗಳು ನಿಶ್ಚಯವಾಗಿ ತಿಳಿದಿರಲಾರರು. ಒಂದು ವೇಳೆ ತಿಳಿದಿದ್ದರೆ ಏಕೆ ಹೇಳದೆ ಇರುತ್ತಿದ್ದರು? ಪೂಜ್ಯರಾದ ತಾವೇ ಈ ಪ್ರಮೇಯವನ್ನು ನನಗೆ ವಿಶದವಾಗಿ ತಿಳಿಸಿಕೊಡಿ' ಎಂದು ಶ್ವೇತಕೇತುವು ತನ್ನ ತಂದೆಯನ್ನು ಪ್ರಾರ್ಥಿಸಿದನು. ಅದಕ್ಕೆ ಉತ್ತರವಾಗಿ ತಂದೆಯು 'ಹಾಗೆಯೇ ಆಗಲಿ' ಎಂದರು.

ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ । ತದ್ಧೈಕ ಆಹುಃ 'ಅಸದೇವೇದಮಗ್ರ ಆಸೀದೇಕಮೇವಾದ್ವಿತೀಯಮ್ । ತಸ್ಮಾದಸತಃ ಸಜ್ಜಾಯತ' ಇತಿ । 'ಕುತಸ್ತು ಖಲು ಸೋಮ್ಯೈವಂ ಸ್ಯಾತ್?' ಇತಿ ಹೋವಾಚ 'ಕಥಂ ಅಸತಃ ಸಜ್ಜಾಯೇತ? ಇತಿ। ಸತ್ ತ್ವೇವಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ।

ಸೃಷ್ಟಿಯ ಮೊದಲು ಪ್ರಳಯಕಾಲದಲ್ಲಿ ಸರ್ವೋತ್ತಮನಾದುದರಿಂದ 'ಸತ್' ಎಂಬ ಹೆಸರುಳ್ಳ ಪರಮಾತ್ಮನು ಮಾತ್ರ ಇದ್ದನು. ಈ ಪರಮಾತ್ಮನು ತನ್ನ ಅವಯವ ಗುಣಕ್ರಿಯೆ ಇವುಗಳಿಂದ ಅತ್ಯಂತ ಅಭಿನ್ನನಾಗಿರುವನು. ಅವನಿಗೆ ಸಮಾನರು ಯಾರೂ ಇಲ್ಲ. ಅಧಿಕರು ಇನ್ನೆಲ್ಲಿ?

ಜಗತ್ತಿನ ಸೃಷ್ಟಿ ಕಾರಣದ ವಿಷಯದಲ್ಲಿ ಶೂನ್ಯವಾದಿಗಳಾದ ಬೌದ್ಧರು 'ಜಗತ್ತಿನ ಸೃಷ್ಟಿಗಿಂತ ಮೊದಲು ಪ್ರಳಯಕಾಲದಲ್ಲಿ ಶೂನ್ಯ ಒಂದೇ ಇತ್ತು. ಕಾರ್ಯ ಪ್ರಪಂಚವೂ ಇರಲಿಲ್ಲ. ಸಹಕಾರಿ ಕಾರಣವಾಗಬಲ್ಲ ಇನ್ನೊಂದು ವಸ್ತುವೂ ಇರಲಿಲ್ಲ. ಆ ಶೂನ್ಯದಿಂದ ಪ್ರಪಂಚ ಹುಟ್ಟಿತು' ಎಂದು ಅನ್ನುತ್ತಾರೆ.

ಪ್ರಳಯಕಾಲದಲ್ಲಿ ಅಸತ್ ಆಗಿರುವ ಶೂನ್ಯವಿತ್ತು ಎಂಬುದು ಹೇಗೆ ತಾನೆ ಯುಕ್ತವಾದೀತು? ಅಸತ್ತು ಇರುವುದೆಂದರೆ ಸ್ವವ್ಯಾಹತ ಮತ್ತು ಅಪ್ರಾಮಾಣಿಕ. ಅಸತ್ ಆದ ಶೂನ್ಯದಿಂದ ಜಗತ್ತು ಹುಟ್ಟುವುದು ಹೇಗೆ ತಾನೆ ಸಾಧ್ಯ ? ಅಸತ್ತು ಕಾರಣವಾಗುವುದು ಎಲ್ಲಿಯೂ ದೃಷ್ಟವಾಗಿಲ್ಲ. ಆದುದರಿಂದ ಪ್ರಳಯಕಾಲದಲ್ಲಿ ತನ್ನ ಅವಯವಾದಿಗಳಿಗಿಂತ

ಅತ್ಯಂತ ಅಭಿನ್ನನೂ, ತನಗೆ ಸಮಾನವಾದ ಹಾಗೂ ತನಗಿಂತ ಅಧಿಕವಾದ ಬೇರೆ ವಸ್ತು ಇಲ್ಲದವನೂ ಆದ ಸದ್ರೂಪನಾದ ಪರಮಾತ್ಮನೇ ಇದ್ದನು ಎಂಬುದು ಸಿದ್ಧವಾಗುತ್ತದೆ.

ಏಕಮೇವಾದ್ವಿತೀಯಂ ಸ್ವಗತಭೇದವರ್ಜಿತಂ ಸಮಾನವರ್ಜಿತಂ ಚ । ಏಕಮೇವಾದ್ವಿತೀಯಂ ಸತ್ ಸಮಾಭ್ಯಧಿಕ ವರ್ಜನಾತ್ । ಸ್ವಗತಾನಾಂ ಚ ಭೇದಾನಾಮಭಾವಾತ್ ಬ್ರಹ್ಮಶಾಶ್ವತಂ। ಇತಿ ಪ್ರವೃತ್ತೇ।

ಭೇದಾಭೇದನಿವೃತ್ಯರ್ಥಮೇವಶಬ್ದೋಽವಧಾರಕಃ। ಸಮಾಧಿಕನಿವೃತ್ತ್ಯರ್ಥಮದ್ವಿತೀಯ-ಪದಂ ತಥಾ ॥

ಭೇದಾಭೇದೇಽಪ್ಯೇಕಶಬ್ದೋ ಯತೋಽವಯವಿನಿಷ್ಠಿತಃ । ಏಕಮೇವೇತ್ಯತಃ ಪ್ರಾಹ ನಾರಾಯಣಮಿಯಂ ಶ್ರುತಿಃ। ಸಮೇ ದ್ವಿತೀಯಶಬ್ದಃ ಸ್ಯಾದದ್ವಿತೀಯೋಽಸಮತ್ವತಃ। ಸಾಧಿಕಃ ಕುತ ಏವ ಸ್ಯಾದಿತ್ಯಾಹ ಪರಮಾ ಶ್ರುತಿಃ। ಇತಿ ಸಾಮಸಂಹಿತಾಯಾಮ್॥

'ಏಕಮೇವಾದ್ವಿತೀಯಂ' ಎಂಬ ವಾಕ್ಯದಲ್ಲಿರುವ 'ಏಕಮೇವ' ಎಂಬ ಪದದಿಂದ ಪರಮಾತ್ಮನು ತನ್ನ ಅವಯವ ಗುಣ ಕರ್ಮಗಳಿಂದ ಭೇದರಹಿತನೆಂದೂ, ಅದ್ವಿತೀಯ ಎಂಬ ಶಬ್ದದಿಂದ ತನಗೆ ಸಮಾನವಾದ ಎರಡನೆಯ ವಸ್ತು ಇಲ್ಲದವನೆಂದೂ ಹೇಳಲ್ಪಡುತ್ತಿದ್ದಾನೆ.

ಪ್ರವೃತ್ತ ಎಂಬ ಗ್ರಂಥದಲ್ಲಿ 'ತನ್ನಲ್ಲಿರುವ ಗುಣಾದಿಗಳಿಂದ ಭೇದ ಇಲ್ಲದೇ ಇರುವುದರಿಂದ ಶಾಶ್ವತನಾದ ಪರಮಾತ್ಮನು ಏಕಮೇವ ಎಂದೂ, ತನ್ನ ಸಮಾನರು ಹಾಗೂ ತನಗಿಂತ ಉತ್ತಮರು ಇಲ್ಲದಿರುವುದರಿಂದ ಅದ್ವಿತೀಯ ಎಂದೂ ನಿರೂಪಿತನಾಗಿದ್ದಾನೆ' ಎಂದು ವಿವರಣೆ ಇದೆ.

ಪರಮಾತ್ಮ ಮತ್ತು ಅವನ ಅವಯವಾದಿಗಳಿಗೆ ಭೇದಾಭೇದವು ಇಲ್ಲ. ಅತ್ಯಂತ ಅಭೇದವೇ ಇದೆ ಎಂಬ ಅಭಿಪ್ರಾಯದಿಂದ ಏಕಮೇವ ಎಂಬಲ್ಲಿ ಅವಧಾರಣಾರ್ಥದಲ್ಲಿ ಏವ ಶಬ್ದ ಪ್ರಯೋಗ. ಅವನಿಗೆ ಸಮನೂ, ಅವನಿಗಿಂತ ಅಧಿಕನೂ ಇಲ್ಲ ಎಂಬ ಅಭಿಪ್ರಾಯದಿಂದ ಅದ್ವಿತೀಯ ಎಂಬ ಪದವೂ ಪ್ರಯೋಗಿಸಲ್ಪಟ್ಟಿದೆ. ತನ್ನ ಅವಯವಗಳಾದ ನೂಲುಗಳಿಂದ ಭೇದಾಭೇದ ಉಳ್ಳ ಪಟವನ್ನೂ ಏಕಃ ಪಟಃ ಎಂದು ವ್ಯವಹರಿಸುವ ರೂಢಿ ಇದೆ. ಆದ್ದರಿಂದ ಏಕಶಬ್ದ ಅಭೇದವನ್ನು ಹೇಳುತ್ತದೆ ಹೊರತು ಭೇದನಿಷೇಧ ಮಾಡಲಾರದು. ಪ್ರಕೃತ ಪರಮಾತ್ಮನ ವಿಷಯದಲ್ಲಿ ಏಕಂ ಎಂದಿಷ್ಟೇ ಹೇಳುತ್ತಿದ್ದರೆ, ಅವನಿಗೂ ತನ್ನ ಅವಯವಗಳಿಂದ ಭೇದಾಭೇದವೇನೋ ಎಂದು ಸಂಶಯ ಬಂದೀತು. ಹಾಗಾಗದಿರಲಿ ಎಂದು ಅಭೇದ ಒಂದೇ ಇದೆ. ಭೇದವಿಲ್ಲ ಎಂದು ಭೇದ ನಿಷೇಧ ಮಾಡುವುದಕ್ಕಾಗಿ ಉಪನಿಷತ್ತು ಪರಮಾತ್ಮನನ್ನು ಏಕಂ ಎಂದಷ್ಟೇ ಅನ್ನದೆ, ಏಕಮೇವ ಅನ್ನುತ್ತಿದೆ. ಸಮನಾದ ಎರಡನೆಯ ವಸ್ತುವನ್ನೇ 'ಅಸ್ಯಗೋಃ

ಮೊದಲಾದ ಸ್ತ್ರೀಲಿಂಗಶಬ್ದಗಳ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಇರುತ್ತದೆ ಎನ್ನಲು ಯಾವುದೇ ನಿಯಾಮಕ ಪ್ರಮಾಣಗಳು ಇರುವುದಿಲ್ಲ. ಹೀಗೆ 'ಅತ್ತೃತ್ವೇಃ' ಇತ್ಯಾದಿ ಎರಡು ಸೂತ್ರಗಳಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ ಹೇಳಿರುತ್ತಾರೆ.

'ತದಧೀನತ್ವ' ಸೂತ್ರದಿಂದ ಈ ಆಕ್ಷೇಪವು ಗತಾರ್ಥವಾಗಿದೆಯಲ್ಲವೇ? ಎಂಬ ಆಶಂಕೆಯನ್ನು 'ನಚಾಽಸ್ತ್ರೀಭೂತಸ್ಯಾಪಿ' ಎಂಬ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

### 'ನಚಾಽಸ್ತ್ರೀಭೂತಸ್ಯಾಪಿ' ಎಂಬ ವಾಕ್ಯಕ್ಕೆ ಎರಡು ವ್ಯಾಖ್ಯಾನ

**भावदीपः – एतद्वाक्यं पूर्ववद्द्वेधा व्याख्येयम् ।। उक्तेति ।। स्त्रीलिङ्गायोगरूपन्यायेनेत्यर्थः ।। अत इति साधकभावादित्यर्थः ।**

'ನಚಾಽಸ್ತ್ರೀಭೂತಸ್ಯಾಪಿ' ಎಂಬ ವಾಕ್ಯವನ್ನು ಹಿಂದಿನಂತೆ ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡಿಕೊಳ್ಳಬೇಕು. 'ಉಕ್ತ' ಎಂದರೆ ಸ್ತ್ರೀಲಿಂಗವು ಅಯುಕ್ತವಾಗುತ್ತದೆಂಬ ನ್ಯಾಯದಿಂದ ಎಂದರ್ಥ. 'ಅತಃ' ಎಂದರೆ ಸಾಧಕಪ್ರಮಾಣ ಇಲ್ಲದಿರುವುದರಿಂದ ಎಂದರ್ಥ.

### ಪೂರ್ವಪಕ್ಷದ ಫಲ

**भावदीपः – पूर्वपक्षफलमाह – नेति ।। हरौ स्त्रीशब्दप्रवृत्त्युक्तेरसाङ्गत्यनिरासाय भाष्यार्थमाह – एवमिति ।। आकाङ्क्षाक्रमेण भाष्यं व्याचष्टे ।। प्रकृत्यादीति।।**

ಪೂರ್ವಪಕ್ಷದ ಫಲವನ್ನು 'ನ' ಇತ್ಯಾದಿಯಾಗಿ ಹೇಳಿರುತ್ತಾರೆ. ಶ್ರೀಹರಿಯಲ್ಲಿ ಸ್ತ್ರೀಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳುವುದರಿಂದ ಅಸಂಗತಿಯು ಬರುವುದಿಲ್ಲ ಎಂಬುದಾಗಿ ತಿಳಿಸಲು ಭಾಷ್ಯದ ಅರ್ಥವನ್ನು 'ಏವಂ' ಎಂಬುದರಿಂದ ನಿರೂಪಣೆ ಮಾಡಿದ್ದಾರೆ. ಆಕಾಂಕ್ಷಾಕ್ರಮದಿಂದ ಭಾಷ್ಯವನ್ನು 'ಪ್ರಕೃತ್ಯಾದಿ' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಪುಲ್ಲಿಂಗ ಶಬ್ದಗಳಿಂದಷ್ಟೇ ಪರಮಾತ್ಮನು ಪ್ರತಿಪಾದ್ಯನಲ್ಲ

**भावदीपः** – सूत्रभाष्ययोः प्रकृतिशब्दस्तस्तदादिस्त्रीलिङ्गशब्दमात्रोपलक्षणमित्यग्रे व्यक्तत्वादादिपदम् ।। **वाच्यश्चेति** ।। न केवलं प्रागुक्तपुलिङ्गशब्दवाच्यश्चेति सौत्रचशब्दार्थोक्तिपरभाष्यस्थापि शब्दार्थो दर्शितः ।

ಸೂತ್ರ ಹಾಗೂ ಭಾಷ್ಯಗಳಲ್ಲಿ ಉಲ್ಲೇಖ ಮಾಡಲ್ಪಟ್ಟ ಪ್ರಕೃತಿ ಶಬ್ದವು ಉಳಿದ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾಗಿದೆ ಎಂಬುದಾಗಿ ಮುಂದೆ ಸ್ಪಷ್ಟಪಡಿಸುತ್ತಾರೆ. ಆದಕ್ಕಾಗಿ ಇಲ್ಲಿ 'ಪ್ರಕೃತ್ಯಾದಿ' ಎಂಬುದಾಗಿ 'ಆದಿ' ಪದವನ್ನು ಉಲ್ಲೇಖಿಸಿದ್ದಾರೆ.

'ವಾಚ್ಯಶ್ಚ' ಎಂಬಲ್ಲಿರುವ ಚ ಶಬ್ದವು ಭಾಷ್ಯದಲ್ಲಿರುವ 'ಅಪಿ' ಶಬ್ದದ ವ್ಯಾಖ್ಯಾನವಾಗಿದೆ. ಕೇವಲ ಹಿಂದೆ ಹೇಳಲ್ಪಟ್ಟ ಪುಲ್ಲಿಂಗ ಶಬ್ದಗಳಿಂದಷ್ಟೇ ಪರಮಾತ್ಮನು ಪ್ರತಿಪಾದ್ಯನಲ್ಲ. ಸ್ತ್ರೀಲಿಂಗ ಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ. ಇದನ್ನು ಸೂತ್ರದಲ್ಲಿರುವ 'ಚ' ಶಬ್ದವು ನಿರೂಪಣೆ ಮಾಡುತ್ತಿದೆ.

### ಎಲ್ಲಾ ಸ್ತ್ರೀಲಿಂಗಶಬ್ದಗಳೂ ಕೂಡ ಪರಮಾತ್ಮನಲ್ಲೇ ಮುಖ್ಯ

**भावदीपः – ननु सर्वस्त्रीशब्दसमुच्चायकश्चशब्द इति तत्वप्रदीपोक्तेरत्र पुनः सर्वपुल्लिङ्गशब्दसमुच्चायकत्वोक्तौ कथं सर्वस्त्रीशब्दलाभ इत्यतोऽस्मिन् व्याख्याने तल्लाभप्रकारमाह – प्रकृतिपदमिति ।। एतेन स्त्रीशब्दा अपीति सम्बन्धभाष्यमुपपादितमिति ध्येयम् ।।१।।**

ಪ್ರಶ್ನೆ - ಸಕಲ ಸ್ತ್ರೀಶಬ್ದಗಳ ಸಮುಚ್ಚಯಕ್ಕಾಗಿ 'ಚ' ಶಬ್ದವನ್ನು ಸೂತ್ರದಲ್ಲಿ ಹೇಳಲಾಗಿದೆ ಎಂಬುದಾಗಿ ತತ್ವಪ್ರದೀಪದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ನೀವು ಹಿಂದೆ ಹೇಳಲ್ಪಟ್ಟ ಪುಲ್ಲಿಂಗ ಶಬ್ದಗಳ ಸಮುಚ್ಚಯಕ್ಕಾಗಿ 'ಚ' ಶಬ್ದ ಹೇಳಲಾಗಿದೆಯೆಂದು ವ್ಯಾಖ್ಯಾನ ಮಾಡುತ್ತಿದ್ದೀರಿ. ಇದರಿಂದ ಸಕಲ ಸ್ತ್ರೀಶಬ್ದಗಳ ಸಂಗ್ರಹವನ್ನು ಹೇಗೆ ಮಾಡಿದಂತಾಗುತ್ತದೆ?

ಉತ್ತರ - ಈ ವ್ಯಾಖ್ಯಾನದಲ್ಲಿಯೂ ಸಕಲ ಸ್ತ್ರೀಲಿಂಗಶಬ್ದಗಳ ಸಂಗ್ರಹವೂ ಆಗುತ್ತದೆಂದು 'ಪ್ರಕೃತಿ ಪದಂ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ. ಇದರಿಂದ 'ಸ್ತ್ರೀಶಬ್ದಾ ಅಪಿ' ಎಂಬ ಸಂಬಂಧ ಭಾಷ್ಯವನ್ನೂ ಕೂಡ ವ್ಯಾಖ್ಯಾನ ಮಾಡಿದಂತಾಯಿತು.

## ಬ್ರಹ್ಮಸೂತ್ರ

### 'ಅಭಿಧ್ಯೋಪದೇಶಾಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – ।। अभिध्योपदेशाच्च ।। २ ।।**

ಸೂತ್ರಾರ್ಥ - ಭಗವಂತನ ಇಚ್ಛೆಗೆ ಪ್ರಕೃತಿ, ವಾಸನಾ, ಮಾಯಾ ಇತ್ಯಾದಿ ಅನೇಕ ಹೆಸರುಗಳಿವೆ ಎಂದು ಪ್ರಮಾಣವಿರುವುದರಿಂದ, ವಿಷ್ಣುವಿನ ಇಚ್ಛೆಯೇ ಪ್ರಕೃತಿಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಅವನ ಇಚ್ಛೆಯೇ ಅವನ ಸ್ವರೂಪವಾದ್ದರಿಂದ, ಪ್ರಕೃತಿಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು.

ಅರ್ಥ -- ಅಭಿಧ್ಯಾಯಾಃ = ಈಶ್ವರನ ಇಚ್ಛೆಯನ್ನು, ಉಪದೇಶಾತ್ = 'ಮಾಯಾಂ ತು ಪ್ರಕೃತಿಂ ವಿದ್ಧಿ' ಇತ್ಯಾದಿ ಶ್ರುತಿಗಳಲ್ಲಿ ಪ್ರಕೃತಿ ಶಬ್ದವಾಚ್ಯವೆಂದು ಹೇಳಿದ್ದರಿಂದ, ಈಶ್ವರನ ಇಚ್ಛೆಯು ಈಶ್ವರನ ಸ್ವರೂಪವಾದ್ದರಿಂದ, ಪ್ರಕೃತಿ ಶಬ್ದದಿಂದ ಈಶ್ವರನೇ ಪ್ರತಿಪಾದ್ಯನಾಗುತ್ತಾನೆ.

## ಬ್ರಹ್ಮಸೂತ್ರಭಾಷ್ಯ

### ಮಾಯೆ, ಪ್ರಕೃತಿ, ವಾಸನಾ, ವಿಕೃತಿ ಇವೆಲ್ಲವೂ ಶ್ರೀಹರಿಯ ಹೆಸರುಗಳು

**ब्रह्मसूत्रभाष्यम् – ।। अभिध्योपदेशाच्च ।।**

**'मायां तु प्रकृतिं विद्यान्मायिनं तु महेश्वरम्' (श्वे.उ. ४-१०) ।**

**'महामायेत्यविद्येति नियतिर्मोहिनीति च ।**
**प्रकृतिर्वासनेत्येवं तवेच्छाऽनन्त कथ्यते' ।। इति**

**वचनात्तदभिध्यैव प्रकृतिशब्देनोच्यते ।**

ಅನುವಾದ - ಪರಮಾತ್ಮನು ಮಾಯಿ ಎಂದು, ಪ್ರಕೃತಿಯು ಮಾಯಾ ಎಂದು ತಿಳಿ. ಹೀಗೆ ಶ್ವೇತಾಶ್ವೇತರೋಪನಿಷತ್ತು ಹೇಳುತ್ತಿದೆ.

ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಇವುಗಳೆಲ್ಲವೂ ಅನಂತ ಎನಿಸಿಕೊಂಡ ಶ್ರೀಹರಿಯ ಇಚ್ಛೆಯ ಹೆಸರುಗಳು. ಹೀಗೆ ಪ್ರಮಾಣವಚನವಿರುವುದರಿಂದ ವಿಷ್ಣುವಿನ ಇಚ್ಛೆ ಪ್ರಕೃತಿಶಬ್ದದಿಂದ ಕರೆಸಿಕೊಳ್ಳುತ್ತದೆ.

ಪ್ರತಿಪದಾರ್ಥ -- ಹೀಗೆ ಸಾಮಾನ್ಯ ವಚನದಿಂದ ಪ್ರಕೃತ್ಯಾದಿ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆಂದುಹೇಳಿದ್ದಾಯಿತು. ಈಗ ಸಕಲವಿಧವಾದ ಸ್ತ್ರೀಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿಶಬ್ದ-ವಾಚ್ಯತ್ವವಿಷಯದಲ್ಲಿ ವಿಶೇಷವಾದ ಪ್ರಮಾಣವನ್ನು ಪ್ರತಿಪಾದನೆ ಮಾಡುತ್ತಾ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ–

ಮಾಯಾಂತು = ಭಗವದಿಚ್ಛೆಯನ್ನೇ, ಪ್ರಕೃತಿಂ = ಪ್ರಕೃತಿ ಪದವಾಚ್ಯವನ್ನಾಗಿ, ವಿದ್ಯಾತ್ = ತಿಳಿ. ಮಾಯಿನಂ ತು = ಮಾಯಿಪದವಾಚ್ಯನನ್ನಾಗಿ, ಮಹೇಶ್ವರಂ = ಮಹೇಶ್ವರನನ್ನು ತಿಳಿ. ಹೀಗೆ ಶ್ವೇತಾಶ್ವೇತರೋಪನಿಷತ್ತು ಹೇಳಿದೆ.

ಹೇ ಅನಂತ = ಎಲೈ ಅನಂತನೇ, ತವೇಚ್ಛಾ = ನಿನ್ನ ಇಚ್ಛೆಯೇ, ಮಹಾಮಾಯೇತಿ = ಮಹಾಮಾಯೆ ಎಂದು, ಅವಿದ್ಯೇತಿ = ಅವಿದ್ಯೆಯೆಂದು, ನಿಯತಿಃ = ನಿಯತಿ ಎಂದೂ, ಮೋಹಿನಿತಿ ಚ = ಮೋಹಿನಿ ಎಂದು, ಪ್ರಕೃತಿಃ = ಪ್ರಕೃತಿಯೆಂದು, ವಾಸನೇತಿ ಚ = ವಾಸನಾ ಎಂದೂ ಕೂಡ, ಏವಂ = ಹೀಗೆ ಅನೇಕ ಶಬ್ದಗಳಿಂದ, ಕಥ್ಯತೇ = ಕರೆಯಲ್ಪಡುತ್ತದೆ, ಇತಿ ವಚನಾತ್ = ಹೀಗೆ ಶ್ರುತಿವಾಕ್ಯದ ಆಧಾರವಿರುವುದರಿಂದ, ಅಭಿಧ್ಯೈವ = ಭಗವದಿಚ್ಛೆಯೇ, ಪ್ರಕೃತಿಶಬ್ದೇನ = ಪ್ರಕೃತಿ ಎಂಬ ಶಬ್ದದಿಂದ, ಉಚ್ಯತೇ = ಕರೆಸಿಕೊಳ್ಳುತ್ತದೆ.

### ಪರಮಾತ್ಮನ ಇಚ್ಛೆಗೆ ಪ್ರಕೃತಿ ಎನ್ನುವರು

**ब्रह्मसूत्रभाष्यम् – 'सोऽभिध्या स जूतिः स प्रज्ञा स आनन्दः' इति श्रुतेरभिध्या च स्वरूपमेव ।**

**'ध्यायति ध्यानरूपोऽसौ सुखी सुखमतीव च ।**
**परमैश्वर्ययोगेन विरुद्धार्थतयेष्यते' ।। इति ब्रह्माण्डे ।।२।।**

ಅನುವಾದ - ಪರಮಾತ್ಮನೇ ಇಚ್ಛಾರೂಪನಾಗಿದ್ದಾನೆ. ಪ್ರೇರಣೆ ಎಂಬ ಕ್ರಿಯಾರೂಪನಾಗಿದ್ದಾನೆ. ಜ್ಞಾನರೂಪನಾಗಿದ್ದಾನೆ, ಆನಂದರೂಪನಾಗಿದ್ದಾನೆ ಹೀಗೆ ಶ್ರುತಿ ಪ್ರಮಾಣವಿರುವುದರಿಂದ ಅವನ ಇಚ್ಛೆಯು ಭಗವಂತನ ಸ್ವರೂಪವೇ ಆಗಿದೆ.

ಅವನು ಧ್ಯಾನರೂಪನಾದ್ದರಿಂದ ಧ್ಯಾನ ಮಾಡುತ್ತಾನೆ. ನಿರವಧಿಕ ಸುಖಸ್ವರೂಪನಾದ್ದರಿಂದ, ದುಃಖಿಯೆನಿಸುತ್ತಾನೆ. ಅತ್ಯಂತ ವಿಲಕ್ಷಣವಾದ ಸಾಮರ್ಥ್ಯವನ್ನು ಹೊಂದಿರುವುದರಿಂದ ವಿರುದ್ಧವಾದ ಧರ್ಮವುಳ್ಳವನಾಗಿ ಜ್ಞಾನಿಗಳಿಂದ ಕರೆಸಿಕೊಳ್ಳುತ್ತಾನೆ. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಲ್ಪಟ್ಟಿದೆ.

ಪ್ರತಿಪದಾರ್ಥ -- ಇಚ್ಛೆಯು ಪ್ರಕೃತಿಶಬ್ದದಿಂದ ವಾಚ್ಯವಾದರೂ, ಪರಮಾತ್ಮನು ಹೇಗೆ ಸ್ತ್ರೀಲಿಂಗದಿಂದ ಪ್ರತಿಪಾದ್ಯನಾಗುತ್ತಾನೆ. ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ

ಸಃ = ಪರಮಾತ್ಮನು, ಜೂತಿಃ = ಪ್ರೇರಣಾರೂಪನಾಗಿದ್ದಾನೆ. ಸಃ = ಪರಮಾತ್ಮನು, ಪ್ರಜ್ಞಾ = ಜ್ಞಾನರೂಪನು. ಸಃ = ಪರಮಾತ್ಮನು, ಆನಂದಃ = ಆನಂದರೂಪನು, ಇತಿ ಶ್ರುತೇಃ = ಹೀಗೆ ಶ್ರುತಿ ಪ್ರಮಾಣವಿರುವುದರಿಂದ, ಅಭಿಧ್ಯಾಚ = ಅವನ ಇಚ್ಛೆಯೂ ಕೂಡ, ಸ್ವರೂಪಮೇವ = ಭಗವಂತನ ಸ್ವರೂಪವೇ ಆಗಿದೆ. ಅಸೌ = ಈ ಶ್ರೀಹರಿಯು, ಧ್ಯಾನರೂಪಃ = ಧ್ಯಾನರೂಪನಾದ್ದರಿಂದ, ಧ್ಯಾಯತಿ = ಧ್ಯಾನ ಕರ್ತೃ ಎನಿಸುತ್ತಾನೆ. ಅತೀವ = ಅತ್ಯಂತವಾಗಿ, ಸುಖಂ = ಸುಖಸ್ವರೂಪನಾದ್ದರಿಂದ, ಸುಖೀ = ಸುಖವುಳ್ಳವನೆನಿಸುತ್ತಾನೆ. ಪರಮೈಶ್ವರ್ಯಯೋಗೇನ = ಅತ್ಯಂತ ಶ್ರೇಷ್ಠವಾದ ಐಶ್ವರ್ಯ ಸ್ವರೂಪನಾಗಿರುವುದರಿಂದ, ವಿರುದ್ಧಾರ್ಥತಯಾ = ಸುಖಸ್ವರೂಪ-ನಾಗಿದ್ದರೂ, ಸುಖಕ್ಕೆ ಆಶ್ರಯನಾಗಿದ್ದಾನೆಂಬ ವಿರುದ್ಧ ಸ್ವಭಾವವು, ಇಷ್ಯತೇ = ವಿರುದ್ಧವಾದರೂ ಜ್ಞಾನಿಸಮ್ಮತವಾಗಿದೆ. ಇತಿ ಬ್ರಹ್ಮಾಂಡೇ = ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ.

## ಸತ್ತರ್ಕದೀಪಾವಳಿ

### ಸ್ವತಃ ತಾನೂ ಪ್ರಕೃತಿ

**सत्तर्कदीपावळिः – न च केवलमिच्छाद्वारैव प्रकृतित्वमाहागमो भगवतः किं तर्हीत्यत आह – साक्षाच्चेति ।**

**स्त्रियादौ विश्वस्मिन् रूपाण्यस्येति स्त्रियादेः विश्वस्य रूपमिव रूपमसस्येति वा विश्वरूपः ।**

ಕೇವಲ ಇಚ್ಛೆಯ ಮೂಲಕ ಪರಮಾತ್ಮನನ್ನು ಪ್ರಕೃತಿಯೆಂದು ಆಗಮವು ಹೇಳುತ್ತಿಲ್ಲ. ನೇರವಾಗಿಯೇ ಪ್ರಕೃತಿ ಎಂದು ಪರಮಾತ್ಮನನ್ನು ಕುರಿತು ಆಗಮವು ಹೇಳುತ್ತಿದೆ. ಇದನ್ನು ಉಪಪಾದನೆ ಮಾಡುವುದಕ್ಕಾಗಿ 'ಸಾಕ್ಷಾಚ್ಚೋಭಯಮ್ನಾನಾತ್' ಎಂಬ ಸೂತ್ರವು ಹೊರಟಿದೆ. 'ಏಷ ಸ್ತ್ರೀ' ಎಂಬ ಶ್ರುತಿಯಲ್ಲಿ 'ವಿಶ್ವರೂಪ' ಎಂಬ ಪದವಿದೆ. ಇದಕ್ಕೆ ಎರಡು ರೀತಿಯಲ್ಲಿ ನಿಷ್ಪತ್ತಿ ಮಾಡಬೇಕು - ೧. 'ಸ್ತ್ರಿಯಾದೌ ವಿಶ್ವಸ್ಮಿನ್ ರೂಪಾಣಿ ಅಸ್ಯ ಇತಿ ವಿಶ್ವರೂಪಃ' ೨. 'ಸ್ತ್ರೀಯಾದೇಃ ವಿಶ್ವಸ್ಯ ರೂಪಮಿವ ರೂಪಮಸ್ಯೇತಿ ವಾ ವಿಶ್ವರೂಪಃ' ಸ್ತ್ರೀ ಮೊದಲಾದ ಸಕಲ ರೂಪಗಳು ಇವನಿಗೆ ಇದೆ ಎಂದು, ಅಥವಾ ಜಗತ್ತಿನಲ್ಲಿ ಹೇಗೆ ಸ್ತ್ರೀಯರು ಹಾಗೂ ಪುರುಷರು ಇದ್ದಾರೋ, ಅದರಂತೆ ಪರಮಾತ್ಮನಿಗೂ ಕೂಡ ಎಲ್ಲಾ ಬಗೆಯ ರೂಪಗಳಿವೆ ಎಂಬುದು ಮತ್ತೊಂದು ಅರ್ಥ.

## ತತ್ವಪ್ರದೀಪ

### ಸೂತ್ರಕ್ಕೆ ಎರಡು ಅರ್ಥ

**तत्वप्रदीपः – अभिध्योपदेशाच्च ।। अभिध्यायाः प्रकृतित्वोपदेशात्स्वरूपत्वोपदेशाच्च प्रकृतिशब्दवाच्यत्वं विष्णोर्युक्तम् । जूतिः प्रेरणा । युज्यते च सुखसुख्यादिभाव ईश्वरस्य, स्वरूपस्वरूपिभाववत्प्रदेशप्रदेशिभाववच्च ।**

ಭಗವದಿಚ್ಛೆಯನ್ನು ಪ್ರಕೃತಿಯೆಂದು ಹೇಳಿರುವುದರಿಂದ ಅಥವಾ ಭಗವಂತನೇ ಇಚ್ಛಾರೂಪನೆಂದು ಹೇಳಿರುವುದರಿಂದ ಪ್ರಕೃತಿಶಬ್ದವಾಚ್ಯತ್ವವು ವಿಷ್ಣುವಿಗೆ ಯುಕ್ತವಾಗುತ್ತದೆ.

'ಸೋಭಿದ್ಯಾ ಸಜೂತಿಃ' ಎಂಬ ಶ್ರುತಿಯಲ್ಲಿರುವ 'ಜೂತಿ' ಎಂಬ ಪದಕ್ಕೆ 'ಪ್ರೇರಣೆ' ಎಂದರ್ಥ. ಈಶ್ವರನಿಗೆ ಇಚ್ಛೆಯು ಪರಮಾತ್ಮನ ಸ್ವರೂಪವಾದರೂ ಕೂಡ ಇಚ್ಛೆಯುಳ್ಳವನು ಎಂದು ಹೇಳಲು ಬಾಧಕವಿಲ್ಲ. ಅದರಂತೆ ಅವನು ಸುಖಸ್ವರೂಪನು ಆದರೂ ಕೂಡ

ಸುಖವುಳ್ಳವನು ಎಂದು ಹೇಳಲೂ ಕೂಡ ಬಾಧಕವಿಲ್ಲ. ಹೇಗೆಂದರೆ ಸ್ವರೂಪ-ಸ್ವರೂಪಿ-ಭಾವದಂತೆ ಅಥವಾ ಪ್ರದೇಶ-ಪ್ರದೇಶಭಾವದಂತೆ.

**ವಿವರಣೆ** - ಸೂತ್ರಕ್ಕೆ 'ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್' ಎಂದರ್ಥ. ಭಗವದಿಚ್ಛೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಅಥವಾ 'ಅಭಿಧ್ಯಾತ್ವೋಪದೇಶಾತ್' ಎಂದು ವ್ಯಾಖ್ಯಾನ ಮಾಡಿದಾಗ ಭಗವಂತನೇ ಇಚ್ಛಾರೂಪನೆಂದು ಹೇಳಿದಂತಾಗುತ್ತದೆ. ಇಚ್ಛೆಯನ್ನೇ ಪ್ರಕೃತಿಯೆಂಬುದಾಗಿ ಶ್ರುತಿ ಹೇಳುತ್ತದೆ. ಆದ್ದರಿಂದ ಭಗವಂತನು ಪ್ರಕೃತಿಶಬ್ದದಿಂದ ವಾಚ್ಯನಾಗುತ್ತಾನೆ ಎಂಬುದು ಸೂತ್ರದ ಅಭಿಪ್ರಾಯ.

### ಈಶ್ವರನು ಪ್ರದೇಶನೂ ಹೌದು, ಪ್ರದೇಶಿಯೂ ಹೌದು !

**तत्वप्रदीपः – यथाहीश्वरः परमाणुना सम्बध्यमानस्तादृशेनैव प्रदेशेन सम्बध्यते, नभसा सम्बध्यमानस्तु तादृशेनैव स्वरूपेण । नच तयोः प्रदेशप्रदेशिनोः परस्परभेदः । तत्स्वरूपस्याव्याप्तिप्रसक्तेः । अत एकस्यैवोभयात्मकत्वमिति ।**

ಒಬ್ಬನೇ ಈಶ್ವರನಲ್ಲಿ ಪ್ರದೇಶ-ಪ್ರದೇಶಿಭಾವವು ಯುಕ್ತವಾಗುತ್ತದೆ. ಅದು ಹೀಗೆ - ಪರಮಾಣುವಿನ ಜೊತೆ ಸಂಬಂಧವನ್ನು ಹೊಂದಿದಾಗ ಈಶ್ವರನು ಪರಮಾಣುವಿನಷ್ಟೇ ಪ್ರದೇಶದ ಸ್ವರೂಪವುಳ್ಳವನಾಗಿ ಸಂಬಂಧವನ್ನು ಹೊಂದುತ್ತಾನೆ. ಆಕಾಶದ ಜೊತೆ ಸಂಬಂಧವನ್ನು ಹೊಂದುವಾಗ ಅಷ್ಟೇ ಪ್ರದೇಶವುಳ್ಳ ಪ್ರದೇಶದಿಂದ ಸಂಬಂಧವನ್ನು ಹೊಂದುತ್ತಾನೆ. ಈಶ್ವರಾತ್ಮಕವಾದ ಪ್ರದೇಶ ಹಾಗೂ ಪ್ರದೇಶಿಗಳಿಗೆ ಪರಸ್ಪರ ಭೇದವನ್ನು ಸರ್ವಥಾ ಹೇಳಬಾರದು. ಹಾಗೇನಾದರು ಹೇಳಿದರೆ ಈಶ್ವರನ ಸ್ವರೂಪವು ಎಲ್ಲೆಡೆಯೂ ವ್ಯಾಪ್ತವಾಗಿಲ್ಲ ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಒಬ್ಬನೇ ಈಶ್ವರನಿಗೆ ಪ್ರದೇಶ- ಪ್ರದೇಶಿಭಾವವು ಯುಕ್ತವಾಗುತ್ತದೆ.

### ಅವಯವವಿರುವುದರಿಂದ ಅನಿತ್ಯನಾಗಿರಬೇಕೆಂಬ ಮತದ ನಿರಾಕರಣೆ

**तत्वप्रदीपः – एतेनैतदपास्तम् । यदास्माकीनमीश्वरमनीश्वराः सेश्वराश्च समयिनः सावयवत्वादनित्यमव्यापिनमुपपादयन्ति । सप्रदेशस्येव सावयवस्यापि तस्य नित्यत्वव्यापित्वोपपत्तेः । कथं नु खल्विमे**

**प्रदेशविशेषाननन्तानात्मनस्संवदमाना नावयवान् संवदेरन् । नहि वयमपि भिन्नावयवानीश्वरस्य ब्रूमः । प्रदेशविशेषवत् स्वरूपभूतानेवेति ।।छ।।**

ಹೀಗೆ ಹೇಳಿದ್ದರಿಂದ ಕೆಲವರ ಅಭಿಪ್ರಾಯವನ್ನು ನಿರಾಕರಣೆ ಮಾಡಿದಂತಾಯಿತು. ನಮ್ಮ ಈಶ್ವರನ ಬಗ್ಗೆ ಅನೀಶ್ವರಸಮಯಿಗಳು ಹಾಗೂ ಸೇಶ್ವರಸಮಯಿಗಳು ಸಾವಯವತ್ವ-ವಿರುವುದರಿಂದ ಅನಿತ್ಯರೆಂದು ವ್ಯಾಪ್ತನಲ್ಲವೆಂದು ಉಪಪಾದನೆ ಮಾಡುತ್ತಾರೆ.

ಇದು ತಪ್ಪು. ಈಶ್ವರನು ಹೇಗೆ ಪ್ರದೇಶಗಳುಳ್ಳವನಾದರೂ ಕೂಡ ನಿತ್ಯನೇ ಆಗಿದ್ದಾನೋ, ಅದರಂತೆ ಅವಯವಗಳುಳ್ಳವನಾದರೂ ಕೂಡ ನಿತ್ಯನೇ ಆಗುತ್ತಾನೆ. ಪ್ರದೇಶದ ಇರುವಿಕೆಯು ನಿತ್ಯತ್ವವ್ಯಾಪಿಯಾಗುವಂತೆ ಅವಯವಗಳ ಇರುವಿಕೆಯೂ ಕೂಡ ನಿತ್ಯತ್ವವ್ಯಾಪಿಯಾಗುತ್ತದೆ. ಆದ್ದರಿಂದ ಅವಯವಗಳುಳ್ಳವನಾಗಿರುವುದರಿಂದ ಅನಿತ್ಯನಾಗಬೇಕಾಗುತ್ತದೆ ಎಂಬ ಉಪಪಾದನೆಯು ಅಯುಕ್ತವಾಯಿತು. ಹೀಗೆ ಹೇಳುವ ಪ್ರತಿವಾದಿಗಳು ಪ್ರದೇಶ-ವಿಶೇಷಗಳು ಅನಂತವಾಗಿವೆ ಎಂಬುದನ್ನು ಒಪ್ಪುತ್ತಾರೆ. ಆದರೆ ಅವಯವಗಳಿವೆಯೆಂಬುದನ್ನು ಒಪ್ಪುವುದಿಲ್ಲ. ಎರಡು ಸಮಾನವಾಗಿರುವಾಗ ಒಂದನ್ನು ಒಪ್ಪಿ, ಮತ್ತೊಂದನ್ನು ಒಪ್ಪದೇ ಇರಲು ಏನು ಕಾರಣ?

ನಾವೂ ಕೂಡ ಈಶ್ವರನಿಗೆ ಭಿನ್ನವಾದ ಅವಯವಗಳಿದೆ ಎಂದು ಒಪ್ಪುವುದಿಲ್ಲ. ಹೇಗೆ ಪ್ರದೇಶವಿಶೇಷವು ಈಶ್ವರನ ಸ್ವರೂಪಭೂತವೇ ಆಗಿದೆ ಎಂದು ಒಪ್ಪುತ್ತೇವೋ, ಹಾಗೇ ಅವಯವಗಳೂ ಕೂಡ ಈಶ್ವರನ ಸ್ವರೂಪಭೂತವೇ ಆಗಿವೆ. ಆದರೂ ಕೂಡ ವಿಶೇಷಬಲದಿಂದ ಅವಯವ-ಅವಯವಿಭಾವವು ಪ್ರದೇಶಪ್ರದೇಶಿಭಾವವು ಯುಕ್ತವಾಗುತ್ತದೆ.

## ತತ್ವಪ್ರಕಾಶಿಕಾ

### ಪರಮಾತ್ಮನು ಸ್ತ್ರೀ ಕೂಡ ಆಗಿದ್ದಾನೆನ್ನಲು ಮತ್ತೊಂದು ಹೇತು

**युक्त्यन्तरेण हरेः प्रकृतिशब्दवाच्यतां प्रतिपादयत्सूत्रमुपन्यस्य व्याचष्टे ।। अभियेति ।।**

ಶ್ರೀಹರಿಯು ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದನ್ನು ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡಲು ಹೊರಟಿರುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ -'ಅಭಿಧ್ಯೋಪದೇಶಾಚ್ಚ' ಇತ್ಯಾದಿಯಾಗಿ.

### ಇಚ್ಛೆಯು ಪ್ರಕೃತಿಯಾದ್ದರಿಂದ ತಾನೂ ಪ್ರಕೃತಿ

**तत्वप्रकाशिका – 'मायां तु प्रकृतिं विद्यात्' इति श्रुतौ 'प्रकृतिर्वासनेत्येवं तवेच्छाऽनन्त कथ्यते' इति स्मृतौ च परमेश्वरेच्छायाः प्रकृतिशब्द वाच्यत्वोपदेशाद्यासौ प्रकृतिशब्दवाच्यो भवति ।**

'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬ ಶ್ರುತಿಯಲ್ಲಿ 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾऽನಂತ ಕಥ್ಯತೇ' ಎಂಬ ಸ್ಮೃತಿಯಲ್ಲಿಯೂ ಕೂಡ ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ. ಈ ಉಪದೇಶ ವಾಕ್ಯದ ಬಲದಿಂದ ಪರಮಾತ್ಮನೇ ಪ್ರಕೃತಿ ಎಂದು ಕರೆಸಿಕೊಳ್ಳುತ್ತಾನೆ.

### ಮಾಯೆಯು ಪ್ರಕೃತಿಯಲ್ಲ

**तत्वप्रकाशिका – न च वाच्यं 'श्रुतौ मायाया एव प्रकृतिशब्दवाच्यत्वं ज्ञायते नेच्छायाः' इति । महामायेति स्मृतौ मायाशब्दस्यापीच्छावाचकत्वोक्तेः।**

ಪ್ರಶ್ನೆ - ಶ್ರುತಿಯಲ್ಲಿ ಮಾಯೆಯನ್ನು ಪ್ರಕೃತಿಯೆಂದು ಕರೆಯಲಾಗಿದೆ ಹೊರತು, ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಕರೆದಿಲ್ಲವಲ್ಲ ?

ಉತ್ತರ - ಹೌದು ! ಆದರೆ 'ಮಹಾಮಾಯಾ' ಇತ್ಯಾದಿ ಸ್ಮೃತಿವಾಕ್ಯದಲ್ಲಿ ಈ ಮಾಯೆಯನ್ನೇ ಇಚ್ಛೆಯೆಂದು ಕರೆಯಲಾಗಿದೆ. ಆದ್ದರಿಂದ ಪರಮಾತ್ಮನ ಇಚ್ಛೆಯನ್ನು ಪ್ರಕೃತಿಯೆಂದು ಹೇಳಿದ್ದು ತಪ್ಪಲ್ಲ.

### ಸ್ಮೃತಿ ವಾಕ್ಯವು ಔಪಚಾರಿಕವಲ್ಲ

**तत्वप्रकाशिका – न चात्रोपचारः शङ्कनीयः । श्रुतिस्मृत्योरनुशानरूपत्वादिति भावः ।**

ಪ್ರಶ್ನೆ - ಸ್ಮೃತಿಯ ವಾಕ್ಯವನ್ನು ಔಪಚಾರಿಕವೆಂದು ಏಕೆ ಪರಿಗಣಿಸಬಾರದು?

ಉತ್ತರ - ಶ್ರುತಿ-ಸ್ಮೃತಿಗಳು ಅನುಶಾಸನ ರೂಪವಾಗಿರುವುದರಿಂದ ಔಪಚಾರಿಕ ಪ್ರಯೋಗವೆಂದು ಪರಿಗಣಿಸಬಾರದು.

ಪರಮಾತ್ಮನೇಕೆ ಪ್ರಕೃತಿಯಾಗಬೇಕು ?

**तत्वप्रकाशिका – इच्छायाः प्रकृतिशब्दवाच्यत्वेऽपि कुतः परमात्मनस्तदित्यत आह – स इति।।**

ಪ್ರಶ್ನೆ - ಇಚ್ಛೆಯು ಪ್ರಕೃತಿಶಬ್ದವಾಚ್ಯವೆಂದು ಒಪ್ಪೋಣ. ಅಂದ ಮಾತ್ರಕ್ಕೆ ಪರಮಾತ್ಮನು ಏಕೆ ಪ್ರಕೃತಿಶಬ್ದ ವಾಚ್ಯನಾಗಬೇಕು ?

ಉತ್ತರ - ಈ ಪ್ರಶ್ನೆಗೆ 'ಸಃ' ಇತ್ಯಾದಿ ಪ್ರಮಾಣವಾಕ್ಯವನ್ನು ಉದಾಹರಿಸಿ ಉತ್ತರಿಸುತ್ತಿದ್ದಾರೆ.

ಇಚ್ಛೆಗೂ ಪರಮಾತ್ಮನಿಗೂ ಭೇದವಿಲ್ಲ

**तत्वप्रकाशिका – जूतिः प्रेरणा ।। नेच्छा भगवत्स्वरूपम्, मायिनं तवेच्छेति तत्सम्बन्धोपदेशादित्यत आह – घ्यायतीति ।।२।।**

ಈ 'ಸೋऽಭಿಧ್ಯಾ ಸ ಜೂತಿಃ' ಎಂಬ ಪ್ರಮಾಣವಾಕ್ಯದಲ್ಲಿರುವ 'ಜೂತಿ' ಶಬ್ದಕ್ಕೆ ಪ್ರೇರಣೆ ಎಂದರ್ಥ.

ಪ್ರಶ್ನೆ - ಇಚ್ಛೆಯು ಭಗವತ್ ಸ್ವರೂಪವಲ್ಲ. ಏಕೆಂದರೆ 'ಮಾಯಿನಂ ತವೇಚ್ಛಾ' ಎಂಬುದಾಗಿ ಮಾಯೆವುಳ್ಳ ನಿನ್ನ ಇಚ್ಛೆ ಎಂದು ಎರಡರಲ್ಲಿಯೂ ಸಂಬಂಧವನ್ನು ಉಪದೇಶ ಮಾಡಲಾಗಿದೆ. ಇದನ್ನು ಕೂಡಿಸಬೇಕೆಂದರೆ ಇಚ್ಛೆಯೇ ಬೇರೆ. ಪರಮಾತ್ಮನೇ ಬೇರೆ ಎಂದು ಹೇಳಬೇಕಲ್ಲವೇ?

ಉತ್ತರ - ಈ ಆಶಂಕೆಗೆ 'ಧ್ಯಾಯತಿ' ಎಂಬ ಶ್ರುತಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪರಮಾತ್ಮನು ಇಚ್ಛೆಯುಳ್ಳವನಾಗಿದ್ದರೂ ಇಚ್ಛಾಸ್ವರೂಪನೂ ಆಗಿರುತ್ತಾನೆ ಆದ್ದರಿಂದ ವಿರೋಧವಿಲ್ಲ ಎಂಬುದಾಗಿ ಬ್ರಹ್ಮಾಂಡ ಪುರಾಣದ ವಾಕ್ಯವು ಸ್ಪಷ್ಟಪಡಿಸುತ್ತಿದೆ.

## ಭಾವದೀಪ

### 'ಪ್ರತಿಜ್ಞಾದೃಷ್ಟಾಂತಾನುಪರೋಧಮ್' ಎಂಬುದಷ್ಟೇ ಯುಕ್ತಿಯಲ್ಲ

**युक्त्यन्तरेणेति ।। न केवलं प्रतिज्ञादृष्टान्तोक्तिरूपयुक्त्येत्यर्थः ।**

ಹಿಂದಿನ ಸೂತ್ರದಲ್ಲಿ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚಮಾಡಿ ಪರಮಾತ್ಮನು ಪ್ರಕೃತಿಶಬ್ದದಿಂದ ವಾಚ್ಯನಲ್ಲವೆಂದು ಹೇಳಿದರೆ ಶ್ರುತಿಯಲ್ಲಿರುವ ಪ್ರತಿಜ್ಞೆ ಹಾಗೂ ದೃಷ್ಟಾಂತಗಳ ವಿರೋಧ ಬರುತ್ತದೆ. ಸರ್ವಶಬ್ದಕ್ಕೆ ಸಂಕೋಚ ಮಾಡದೇ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಿದರೆ ಪ್ರಕೃತಿ ಹಾಗೂ ದೃಷ್ಟಾಂತಗಳಿಗೆ ವಿರೋಧ ಬರುವುದಿಲ್ಲ ಎಂಬ ಯುಕ್ತಿಯನ್ನು ಹೇಳಲಾಯಿತು. ಪ್ರಕೃತ ಈ ಸೂತ್ರದಲ್ಲಿ ಪರಮಾತ್ಮನ ಇಚ್ಛೆಯನ್ನು ಶ್ರುತಿ-ಸ್ಮೃತಿಗಳಲ್ಲಿ ಪ್ರಕೃತಿಶಬ್ದಪ್ರತಿಪಾದ್ಯವೆಂದು ಹೇಳಿರುವುದರಿಂದ 'ಅಭಿಧ್ಯೋಪದೇಶಾತ್' ಎಂಬ ಮತ್ತೊಂದು ಯುಕ್ತಿಯಿಂದ ಪರಮಾತ್ಮನಲ್ಲಿ ಸ್ತ್ರೀಲಿಂಗಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ.

### ಹಿಂದಿನ ಆಕ್ಷೇಪಕ್ಕೆ ಪರಿಹಾರ

**भावदीपः – तथाच नियामकविशेषाभावेनेति प्रागुक्तं प्रत्युक्तमिति भावः ।।**

ಹಿಂದಿನ ಸೂತ್ರದಲ್ಲಿ ಪರಮಾತ್ಮನು ಸ್ತ್ರೀಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆನ್ನಲು ಯಾವುದೇ ನಿಯಾಮಕಪ್ರಮಾಣಗಳಿರುವುದಿಲ್ಲವೆಂದು ಆಕ್ಷೇಪ ಮಾಡಲಾಗಿತ್ತು. 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿರುವುದರಿಂದ ಹಿಂದಿನ ಆಕ್ಷೇಪವನ್ನು ಈಗ ಪರಿಹರಿಸಿದಂತಾಗಿದೆ.

### ಸಾಧಾರಣ ಶ್ರುತಿಯೂ ಕೂಡ ಪ್ರಮಾಣ

**भावदीपः – प्रकृतिशब्देति ।। तदुपलक्षितस्त्रीशब्दमात्रवाचितायां तु प्रागुक्तं सामान्यरूपमेकं साक्षाच्चेत्यत्र वक्ष्यमाणसाधारणश्रुतिश्च नियामकप्रमाणमिति भावः।**

ಪರಮಾತ್ಮನು ಪ್ರಕೃತಿಶಬ್ದದಿಂದ ವಾಚ್ಯನಾಗಿದ್ದಾನೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಉಪಲಕ್ಷಣವಾಗಿದೆ. ಬೇರೆ ಸ್ತ್ರೀಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ವಿವಕ್ಷಿಸಬೇಕು. ಈ

ವಿಷಯದಲ್ಲಿ 'ಪ್ರಕೃತಿಶ್ಚ' ಇತ್ಯಾದಿ ಸೂತ್ರದಲ್ಲಿ 'ಹಂತೈತಮೇವ' ಎಂಬುದಾಗಿ ಸಾಮಾನ್ಯರೂಪವಾದ ವಾಕ್ಯವನ್ನು ಪ್ರಮಾಣವನ್ನಾಗಿ ಹೇಳಿದರು. ಮುಂದಿನ 'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಸೂತ್ರದಲ್ಲಿ 'ಏಷ ಸ್ತ್ರೈಷಃ' ಇತ್ಯಾದಿಯಾಗಿ ಸಾಧಾರಣ ಶ್ರುತಿಯನ್ನೂ ಕೂಡ ಪ್ರಮಾಣವನ್ನಾಗಿ ಹೇಳುತ್ತಾರೆ. ಆದ್ದರಿಂದ ಸ್ತ್ರೀಲಿಂಗಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆನ್ನಲು ಈ ಶ್ರುತಿಗಳೆಲ್ಲವೂ ನಿಯಾಮಕಪ್ರಮಾಣಗಳಿವೆ ಎಂದು ತಿಳಿಯಬೇಕು.

### 'ಪ್ರಕೃತಿರ್ವಾಸನಾ' ಎಂಬ ಶ್ರುತಿಯ ಉಲ್ಲೇಖ

**भावदीपः – भाष्ये इति वचनादित्युक्त्या सर्वमेकमिति प्रतीयते । तदपि किं श्रुतिरूपमुतस्मृतिरूपमिति न ज्ञायतेऽतस्तद्विवेचयन्नभिध्यैव चेत्यादिभाष्यवाक्येन च सूत्रे अभिध्यायाः प्रकृतित्वोपदेशाच्चेत्यर्थो विवृत इति भावेन सूत्रार्थमाह – मायां त्विति ।।**

ಭಾಷ್ಯದಲ್ಲಿ 'ಇತಿ ವಚನಾತ್' ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ 'ಮಾಯಾಂತು' ಎಂಬಲ್ಲಿಂದ ಪ್ರಾರಂಭಿಸಿ 'ಕಥ್ಯತೇ' ಅಲ್ಲಿಯತನಕ ಒಂದೇ ವಾಕ್ಯವೆಂಬ ಭ್ರಾಂತಿ ಬರುತ್ತದೆ. ಮತ್ತೆ ಈ ಸಂಪೂರ್ಣವಾಕ್ಯವು ಶ್ರುತಿಯೋ ಅಥವಾ ಸ್ಮೃತಿಯೋ ಎಂದೂ ಕೂಡ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದ ಟೀಕೆಯಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬುದು ಶ್ರುತಿಯೆಂದು, 'ಪ್ರಕೃತಿರ್ವಾಸನಾ' ಇತ್ಯಾದಿಯು ಸ್ಮೃತಿಯೆಂದು ಸ್ಪಷ್ಟವಾಗಿ ವಿವೇಚನೆ ಮಾಡಿ ತಿಳಿಸಿದ್ದಾರೆ. ಮತ್ತು 'ಅಭಿಧ್ಯೋಪದೇಶಾಚ್ಚ' ಎಂಬ ಸೂತ್ರವನ್ನು ಭಾಷ್ಯದ ವಾಕ್ಯದಲ್ಲಿ ಹೇಗೆ ವ್ಯಾಖ್ಯಾನಿಸಿದ್ದಾರೆ ಎಂಬುದನ್ನೂ ಕೂಡ ಸ್ಪಷ್ಟಪಡಿಸಿದ್ದಾರೆ. 'ಅಭಿಧ್ಯಾಯಾಯಾಃ' ಎಂಬ ಪದಕ್ಕೆ ಪರಮೇಶ್ವರನ ಇಚ್ಛೆಗೆ 'ಉಪದೇಶಾತ್' ಎಂದರೆ ಪ್ರಕೃತಿಶಬ್ದವಾಚ್ಯತ್ವವನ್ನು ಉಪದೇಶಿಸಿರುವುದರಿಂದ ಎಂದು ವಿವರಿಸಿದಂತಾಯಿತು. ಈ ಎಲ್ಲಾ ಅಭಿಪ್ರಾಯದಿಂದ 'ಮಾಯಾಂ ತು' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

### ಶ್ರುತಿಯಷ್ಟೇ ಅಲ್ಲ ಸ್ಮೃತಿಯೂ ಪ್ರಮಾಣ

**भावदीपः – स्मृतौ महामायेति पूर्वार्धोक्तेरुपयोगं शङ्कापूर्वं व्यनक्ति ।। न चेति ।। स्पष्टत्वाय स्मृतेरपि भाषणमिति भावः ।**

ಸ್ಮೃತಿಯಲ್ಲಿ 'ಮಹಾಮಾಯಾ' ಎಂಬ ಪೂರ್ವಾರ್ಧವನ್ನು ಏಕೆ ಉಲ್ಲೇಖಿಸಿದ್ದಾರೆ ಎಂಬ ಉಪಯೋಗವನ್ನು ತೋರಿಸುವುದಕ್ಕಾಗಿ ಟೀಕೆಯಲ್ಲಿ 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸಿ ವ್ಯಾಖ್ಯಾನ

ಮಾಡುತ್ತಿದ್ದಾರೆ. ಶ್ರುತಿಯಲ್ಲಿ ಹೇಳಿದ್ದನ್ನು ಪುನಃ ಸ್ಮೃತಿಯಲ್ಲಿ ಉಲ್ಲೇಖಿಸಿದ್ದು ಸ್ಪಷ್ಟವಾಗುವುದಕ್ಕಾಗಿ ಎಂದು ತಿಳಿಯಬೇಕು.

ಪರಮಾತ್ಮನಲ್ಲಿ ಅಭಿಧ್ಯೋಪದೇಶ

**भावदीपः – उच्यत इत्युक्तेर्भावमाह – न चेत्यादिना ।। कुतः परमात्मनस्तदिति । एतेन परमात्मनोऽभिध्यात्वोपदेशात् प्रकृतिशब्दवाच्यत्वमित्यपि सूत्रार्थो दर्शितः ।।**

ಭಾಷ್ಯದಲ್ಲಿ 'ಉಚ್ಯತೇ' ಎಂಬ ಪದದ ಅಭಿಪ್ರಾಯವನ್ನು 'ನಚ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಪರಮಾತ್ಮನಿಗೆ ಅಭಿಧ್ಯಾತೃತ್ವದ ಉಪದೇಶ ಇರುವುದರಿಂದ ಪ್ರಕೃತಿ ಶಬ್ದವಾಚ್ಯತ್ವವು ಯುಕ್ತವಾಗುತ್ತದೆ ಎಂಬ ಸೂತ್ರಾರ್ಥವನ್ನು ತೋರಿಸಿದಂತಾಯಿತು.

'ಮಾಯಿನಂ' ಎಂಬ ಶಬ್ದ ನಿಷ್ಪತ್ತಿ ಬಗ್ಗೆ

**भावदीपः – तत्सम्बन्धेति ।। मायिनमित्यत्र तदस्यास्त्यस्मिन्निति मतुबर्थे 'अत इनिठनौ' व्रीह्यादिभ्यश्चेति षष्ठ्याद्यर्थकेन्प्रत्ययान्तस्य सम्बन्धवाचित्वात् । तवेति षष्ठ्याः षष्ठीशेष इति सम्बन्धे विधानादिति भावः ।।**

'ಮಾಯಿನಂ' ಎಂಬಲ್ಲಿ 'ತದಸ್ಯ ಅಸ್ತಿ ಅಸ್ಮಿನ್' ಎಂಬ ವ್ಯುತ್ಪತ್ತಿಯಿಂದ ಮತುಬರ್ಥದಲ್ಲಿ 'ಅತ ಇನಿಠನೌ ವ್ರೀಹ್ಯಾದಿಭ್ಯಶ್ಚ' ಎಂಬ ಸೂತ್ರದಿಂದ ಷಷ್ಠ್ಯರ್ಥದಲ್ಲಿ 'ಇನ್' ಪ್ರತ್ಯಯವು ಬಂದಿರುತ್ತದೆ. ಇದು ಸಂಬಂಧವಾಚಿ ಆಗಿರುತ್ತದೆ. ಏಕೆಂದರೆ 'ತವ' ಎಂಬ ಪದವು ಷಷ್ಠ್ಯಂತವಾಗಿ ಇರುವುದರಿಂದ 'ಷಷ್ಠೀ ಶೇಷೇ' ಎಂಬ ಸೂತ್ರವು ಸಂಬಂಧಾರ್ಥದಲ್ಲಿ ಈ ಪ್ರತ್ಯಯವನ್ನು ವಿಧಾನ ಮಾಡಿದೆ.

ಮೂರನೆಯ ಅಧ್ಯಾಯದಲ್ಲಿ ಇಚ್ಛೆಯು ಶ್ರೀಹರಿಯ ಸ್ವರೂಪವೆಂಬುದು ಸ್ಪಷ್ಟವಾಗುವುದು

**भावदीपः – अत आहेति ।। एतच्चोभयव्यपदेशात्त्वहिकुण्डलवदित्यत्र तृतीये स्पष्टयिष्यत इति भावः ।।२।।**

ಪರಮಾತ್ಮನು ಇಚ್ಛೆಯುಳ್ಳವನಾಗಿದ್ದರೂ, ಇಚ್ಛಾಸ್ವರೂಪನೂ ಆಗಿರುತ್ತಾನೆ ಎಂಬ ವಿಷಯವನ್ನು 'ಉಭಯವ್ಯಪದೇಶಾತ್ತ್ವಹಿಕುಂಡಲವತ್' ಎಂಬ ಮೂರನೆಯ ಅಧ್ಯಾಯದ ಸೂತ್ರದಲ್ಲಿ ಸ್ಪಷ್ಟಪಡಿಸುತ್ತಾರೆ.

## ಬ್ರಹ್ಮಸೂತ್ರ

'ಸಾಕ್ಷಾಚ್ಚೋಭಯಾಮ್ನಾನಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – ।। साक्षाच्चोभयाम्नानात् ।। ३ ।।**

**ಸೂತ್ರಾರ್ಥ** - ಇಚ್ಛೆಯ ವ್ಯವಧಾನವಿಲ್ಲದೇ ನೇರವಾಗಿ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಪ್ರಕೃತಿ ಮೊದಲಾದ ಶಬ್ದಗಳಿಂದೆಲ್ಲಾ ವಿಷ್ಣುವೇ ಪ್ರತಿಪಾದ್ಯನೆಂದು ಹೇಳುತ್ತಿದೆ. ಹೀಗೆ ಇಚ್ಛೆಯ ಅಪೇಕ್ಷೆಯಿಲ್ಲದೇ ನೇರವಾಗಿ ಪ್ರಕೃತ್ಯಾದಿ ಶಬ್ದಗಳಿಂದ ವಾಚ್ಯತ್ವವನ್ನು ಹೇಳಬಹುದು.

ಅರ್ಥ -- ಚ ಶಬ್ದವು ಅವಧಾರಣಾರ್ಥದಲ್ಲಿದೆ. 'ಸಾಕ್ಷಾತ್' = ಇಚ್ಛೆಯ ವ್ಯವಧಾನವಿಲ್ಲದೇ ಉಭಯಾಮ್ನಾನಾತ್ = 'ಏಷ ಸ್ತ್ರ್ಯೇಷ ಪುರುಷಃ' ಎಂಬ ವಾಕ್ಯದಿಂದ ಪ್ರಕೃತಿ, ಪುರುಷ ಎಂಬೆರಡು ಶಬ್ದಗಳಿಂದ ವಾಚ್ಯನೆಂದು ಹೇಳಿದ್ದರಿಂದ, ಈಶ್ವರನಿಗೆ ಪ್ರಕೃತ್ಯಾದಿ ಶಬ್ದವಾಚ್ಯತ್ವವು ಆವಶ್ಯಕವಾಗಿದೆ.

## ಬ್ರಹ್ಮಸೂತ್ರಭಾಷ್ಯ

ಪ್ರಕೃತಿ ಪುರುಷ ಶಬ್ದಗಳೆಲ್ಲವೂ ಶ್ರೀಹರಿಯದ್ದೇ

**ब्रह्मसूत्रभाष्यम् – ।। साक्षाच्चोभयाम्नानात् ।।**

**'एष स्त्र्येष पुरुष एष प्रकृतिरेष आत्मैष ब्रह्मैष लोक एष आलोको योऽसौ हरिरादिरनादिरनन्तोऽन्तः परमः पराद्विश्वरूपः' इति पैङ्गिश्रुतौ साक्षादेव प्रकृतिपुरुषत्वाम्नानात् ।।३।।**

ಅನುವಾದ - ಇವನು ಸ್ತ್ರೀ, ಇವನು ಪುರುಷ, ಇವನು ಪ್ರಕೃತಿ, ಇವನು ಆತ್ಮ. ಮತ್ತು ಬ್ರಹ್ಮ, ಲೋಕಾಧಾರ, ಪ್ರಕಾಶರೂಪನೂ ಆಗಿರುತ್ತಾನೆ. ಅನಾದಿಯು ಅನಂತನೂ ಶ್ರೇಷ್ಠನೂ ಪ್ರಕೃತಿಗಿಂತಲೂ ಉತ್ತಮನೂ ಆಗಿರುತ್ತಾನೆ, ವಿಷ್ಣುರೂಪನೂ ಆಗಿರುತ್ತಾನೆ. ಹೀಗೆ ಪೈಂಗೀ ಶ್ರುತಿಯಲ್ಲಿ ನೇರವಾಗಿಯೇ ಅಂದರೆ ಇಚ್ಛೆಯ ಅಪೇಕ್ಷೆಯಿಲ್ಲದೇ ಪ್ರಕೃತಿ, ಪುರುಷ ಶಬ್ದಗಳಿಂದ ವಾಚ್ಯತ್ವವನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ಹಿಂದೆ ಉಲ್ಲೇಖಿಸಿದ ಪ್ರಮಾಣಗಳಿಂದ ಇಚ್ಛಾ ಮೂಲಕವಾಗಿಯೇ ಭಗವಂತನು ಪ್ರಕೃತಿಶಬ್ದವಾಚ್ಯನಾಗಬಹುದು. ನೇರವಾಗಿ ಪ್ರಕೃತಿ ಶಬ್ದದಿಂದ ವಾಚ್ಯನಾಗಲು ಸಾಧ್ಯವಿಲ್ಲವೇ? ಈ

ಆಶಂಕೆಗೆ ವಿಶೇಷ ಪ್ರಮಾಣವನ್ನು ವಿವೇಚಿಸುತ್ತಾ, ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ. –

ಏಷಃ = ಪರಮಾತ್ಮನು, ಸ್ತ್ರೀಷಃ = ಸತತವಾಗಿ ಸುಖಪಡುವುದರಿಂದ ಸ್ತ್ರೀಶಬ್ದವಾಚ್ಯ- ನಾಗಿದ್ದಾನೆ, ಪುರುಷಃ = ಪುರುಷನೆನಿಸಿದ್ದಾನೆ, ಏಷ = ಇವನು, ಪ್ರಕೃತಿಃ = ಪ್ರಕೃತಿ ಎನಿಸಿದ್ದಾನೆ. ಏಷಃ = ಇವನು, ಆತ್ಮಾ = ಆತ್ಮನೆನಿಸಿದ್ದಾನೆ, ಏಷಃ = ಇವನು, ಬ್ರಹ್ಮ = ಗುಣಪೂರ್ಣನಾಗಿದ್ದಾನೆ, ಏಷಃ ಲೋಕ = ಇವನೇ ಲೋಕಾಧಾರಕನು, ಏಷಃ ಆಲೋಕಃ = ಇವನೇ ಲೋಕಪ್ರಕಾಶಕನು, ಯೋಽಸೌ = ಇಂತಹ ಪ್ರಸಿದ್ಧನಾದ, ಹರಿಃ = ಸಕಲ ಅನಿಷ್ಟ ಪರಿಹಾರಕನಾದ ವಿಷ್ಣುವೇ, ಆದಿಃ = ಪ್ರಪಂಚದ ಮೂಲಕಾರಣನು, ಅನಾದಿಃ = ತನಗಿಂತಲೂ ಆದಿಯಿಲ್ಲದವನು, ಅನಂತಃ = ನಾಶರಹಿತನು, ಅಂತಃ = ಪ್ರಳಯ ಸ್ವರೂಪನು, ಪರಾತ್ಪರಮಃ = ಪರಶಬ್ದವಾಚ್ಯಳಾದ ಲಕ್ಷ್ಮೀಗಿಂತಲೂ ಶ್ರೇಷ್ಠನು, ವಿಷ್ಣುರೂಪಃ = ಜಗತ್ತಿನಂತೆ ರೂಪವುಳ್ಳವನು, ಇತಿ = ಹೀಗೆ, ಪೈಂಗಿಶ್ರುತೌ = ಪೈಂಗಿಶ್ರುತಿಯಲ್ಲಿ, ಸಾಕ್ಷಾದೇವ = ನೇರವಾಗಿಯೇ, ಪ್ರಕೃತಿ ಪುರುಷತ್ವಾಮ್ನಾನಾತ್ = ಪ್ರಕೃತಿ ಪುರುಷಗಳ ಶಬ್ದವಾಚ್ಯತ್ವವನ್ನು ಹೇಳಿರುವುದರಿಂದ.

## ಸತ್ತರ್ಕದೀಪಾವಳಿ

### ಪ್ರಯೋಗ ಬಾಹುಲ್ಯವನ್ನು ತೋರಿಸಿದ್ದಾಯಿತು

**सत्तर्कदीपावळिः – एवं प्रवृत्तिशब्दस्य प्रयोगबाहुल्यं दर्शयित्वा महायोगं च तत्र दर्शयतीत्याह – आत्मकृतेरित्यादिना ।**

ಇಲ್ಲಿಯ ತನಕ ಪ್ರಕೃತಿ ಶಬ್ದಕ್ಕೆ ಪರಮಾತ್ಮನಲ್ಲಿ ಪ್ರಯೋಗ ಬಾಹುಲ್ಯವನ್ನು ತೋರಿಸಿದ್ದಾಯಿತು. ಈಗ ಮಹಾಯೋಗವೃತ್ತಿಯನ್ನು ಪರಮಾತ್ಮನಲ್ಲಿ ತೋರಿಸಲು 'ಆತ್ಮಕೃತೇಃ' ಎಂಬ ಸೂತ್ರವು ಹೊರಟಿದೆ.

ಪ್ರಕೃತಿಶಬ್ದಕ್ಕೆ ವಿದ್ವದ್ರೂಢಿಯೂ ಇದೆ

**सत्तर्कदीपावळिः – प्रकृतावनुप्रविश्यतां महदादिबहुविकारिणीं कुर्वन् कृत्वा अर्थेष्वविकारेणैवात्मानं प्रकर्षेण बहुधा च कारयन् तस्मात्स प्रकृतिः तस्मात्तं प्रकृतिरित्याचक्षत इति पुनः विद्वद्रूढिरपि तत्र दर्शिता ।**

ಪರಮಾತ್ಮನು ಪ್ರಕೃತಿಯಲ್ಲಿ ಪ್ರವೇಶ ಮಾಡುತ್ತಾನೆ. ಅನಂತರ ಅದನ್ನು ಮಹತ್ತತ್ವ ಮೊದಲಾದ ಅನೇಕ ವಿಧವಾದ ವಿಕಾರಗಳುಳ್ಳದ್ದಾಗಿ ಮಾಡುತ್ತಾನೆ. ಸೃಷ್ಟಿ ಮಾಡಲ್ಪಟ್ಟ ಆ ಎಲ್ಲಾ ಪದಾರ್ಥಗಳಲ್ಲಿ ತಾನು ವಿಕಾರವನ್ನು ಹೊಂದದೇ ಇದ್ದರೂ ಕೂಡ ಅನೇಕ ರೂಪಗಳನ್ನು ತಾಳಿ, ನೆಲಸುತ್ತಾನೆ. ಆದ್ದರಿಂದಲೇ ಇವನನ್ನು ಪ್ರಕೃತಿ ಎಂಬುದಾಗಿ ಜ್ಞಾನಿ ಜನರು ಕರೆಯುತ್ತಾರೆ. ಹೀಗೆ ಪುನಃ ವಿದ್ವದ್ರೂಢಿಯನ್ನೂ ಕೂಡ ತೋರಿಸಿದಂತಾಯಿತು.

## ತತ್ವಪ್ರಕಾಶಿಕಾ

ಪ್ರಕೃತಿಶಬ್ದವಾಚ್ಯನೆನ್ನಲು ಯಾವ ಶ್ರುತಿ ಆಧಾರ ?

**तथापि नेश्वरस्य प्रकृतिशब्दवाच्यत्वम् । 'सर्वाणि नामानि' इत्येवंरूपेण विना, साक्षात् प्रकृतिशब्दवाच्यत्वे श्रुत्याद्यभावात् । सर्वशब्दस्य तु सङ्कोचसम्भवात्।**

ಆಕ್ಷೇಪ - ಈಶ್ವರನು ಅನೇಕ ಪ್ರಕೃತಿಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಅನೇಕ ಯುಕ್ತಿಗಳಿಂದ ಸಮರ್ಥನೆ ಮಾಡಿದಿರಿ. ಆದರೂ ಕೂಡ ಇದು ಸರಿಯಲ್ಲ. ಏಕೆಂದರೆ 'ಸರ್ವಾಣಿ ನಾಮಾನಿ' ಇತ್ಯಾದಿ ಸಾಮಾನ್ಯ ಪ್ರಮಾಣವಚನಗಳನ್ನು ಬಿಟ್ಟು, ನೇರವಾಗಿ ಪ್ರಕೃತಿಶಬ್ದವಾಚ್ಯನಾಗಿದ್ದಾನೆನ್ನಲು ಪ್ರಮಾಣ ವಚನಗಳಿರುವುದಿಲ್ಲ. 'ನಾಮಾನಿ ಸರ್ವಾಣಿ' ಎಂಬಲ್ಲಿರುವ ಸರ್ವಶಬ್ದಕ್ಕೆ ಸ್ತ್ರೀಲಿಂಗಶಬ್ದಗಳನ್ನು ಬಿಟ್ಟು ಎಂದು ಸಂಕೋಚ ಮಾಡಬಹುದು.

'ಮಾಯಾಂ ತು ಪ್ರಕೃತಿಂ ವಿದ್ಯಾತ್' ಎಂಬುದು ಆಧಾರವಾಗುವುದೇ ?

**तत्वप्रकाशिका – न चातीतसूत्रे तदप्युक्तमिति वाच्यम् । इच्छाद्वारैव**

**प्रकृतिशब्दवाच्यतां विना साक्षादीश्वरस्यैव तदभावादित्याशङ्कां परिहरत्सूत्रं पठित्वा व्याचष्टे – साक्षाच्चेति।।**

ಹಿಂದಿನ ಸೂತ್ರದಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಇತ್ಯಾದಿಯಾಗಿ ವಿಶೇಷ ಪ್ರಮಾಣವನ್ನು ಹೇಳಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿಯೂ ಕೂಡ ಇಚ್ಛೆಯ ಮೂಲಕವಾಗಿಯೇ ಪರಮಾತ್ಮನು ಪ್ರಕೃತಿಶಬ್ದದಿಂದ ಪ್ರತಿಪಾದ್ಯನೆಂದು ಸಮರ್ಥಿಸಿದ್ದಾರೆ ಹೊರತು, ನೇರವಾಗಿ ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ಸಮರ್ಥನೆ ಮಾಡಿಲ್ಲ. ಹೀಗಿರುವಾಗ ಪರಮಾತ್ಮನು ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯನೆನ್ನಲು ನಿಯಾಮಕಪ್ರಮಾಣವೇನು ?

ಪರಿಹಾರ - ಈ ಆಕ್ಷೇಪಕ್ಕೆ ಪರಿಹಾರವನ್ನು ಹೇಳಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - 'ಸಾಕ್ಷಾಚ್ಚ' ಇತ್ಯಾದಿಯಾಗಿ.

'ಏಷಃ ಸ್ತ್ರ್ಯೇಷ ಪುರುಷಃ' ಎಂಬ ಶ್ರುತಿಯು ಆಧಾರವಾಗುವುದು

**तत्वप्रकाशिका – नेश्वरस्योक्तरीत्या प्रकृतिशब्दवाच्यताऽभावः शङ्कनीयः । 'एषः स्त्र्येष पुरुषः' इति श्रुतौ साधारण्येन विना साक्षादेवेच्छाद्वारमन्तराऽपि प्रकृतिपुरुषशब्दवाच्यताम्नानादिति भावः । लोक आधारः । आलोकः प्रकाशरुपः ।।३।।**

ಪರಮಾತ್ಮನು ಪ್ರಕೃತಿಶಬ್ದವಾಚ್ಯನಲ್ಲವೆಂದು ಮೇಲೆ ಹೇಳಿದಂತೆ ಸಂಶಯ ಪಡಬಾರದು. ಏಕೆಂದರೆ 'ಏಷಃ ಸ್ತ್ರ್ಯೇಷ ಪುರುಷಃ' ಎಂಬ ಶ್ರುತಿಯಲ್ಲಿ ಸಾಮಾನ್ಯವಾಗಿ ಸ್ತ್ರೀಲಿಂಗಶಬ್ದದಿಂದ ಪ್ರತಿಪಾದ್ಯನೆಂದು ಹೇಳದೇ, ಮತ್ತು ಇಚ್ಛಾಮೂಲಕವಾಗಿಯೂ ಪರಮಾತ್ಮನಿಗೆ ಪ್ರಕೃತಿಪುರುಷ ಶಬ್ದ-ವಾಚ್ಯತ್ವವನ್ನು ಹೇಳದೇ ನೇರವಾಗಿ ಪ್ರಕೃತಿ, ಪುರುಷ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯತ್ವವನ್ನು ಹೇಳಲಾಗಿದೆ. ಈ ಅಭಿಪ್ರಾಯದಿಂದ ಭಾಷ್ಯದ ಮಾತು ಹೊರಟಿದೆ.

'ಲೋಕ' ಶಬ್ದಕ್ಕೆ 'ಆಧಾರ' ಎಂದರ್ಥ. 'ಆಲೋಕ' ಶಬ್ದಕ್ಕೆ 'ಪ್ರಕಾಶ' ಎಂದರ್ಥ.

## ಭಾವದೀಪ

### ಸ್ತ್ರೀ ಶಬ್ದ ಪ್ರತಿಪಾದ್ಯತ್ವಕ್ಕೆ ವಿಶೇಷ ಪ್ರಮಾಣ

**एवं रूपेणेति ।। प्रकृतिश्चेत्यत्रोक्तसामान्यरूपेण विना साक्षाद्विशिष्येत्यर्थः।।**

'ಏವಂ ರೂಪೇಣ' ಎಂದರೆ 'ಪ್ರಕೃತಿಶ್ಚ' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಸ್ತ್ರೀಲಿಂಗಶಬ್ದಗಳಿಂದ ಪ್ರತಿಪಾದ್ಯತ್ವವನ್ನು ಹೇಳಲಾಗಿದೆ. ಅದಕ್ಕಿಂತ ವ್ಯತಿರಿಕ್ತವಾಗಿ ವಿಶೇಷರೂಪದಲ್ಲಿಯೇ ಪ್ರಮಾಣವನ್ನು ಹೇಳುತ್ತಿದ್ದಾರೆ ಎಂದರ್ಥ.

### ಇಚ್ಛಾ ಮೂಲಕವಾಗಿ ಪ್ರಕೃತಿಯಷ್ಟೇ ಅಲ್ಲ

**भावदीपः – इच्छाद्वारैवेति ।। प्रकृतिशब्दवाच्यैच्छास्वरूपत्वात् प्रकृतिशब्दवाच्य इत्येवंरूपेणेत्यर्थः ।**

'ಪ್ರಕೃತಿ' ಶಬ್ದಕ್ಕೆ 'ಇಚ್ಛಾ' ಎಂದರ್ಥ. ಆ ಇಚ್ಛೆಯು ಭಗವಂತನ ಸ್ವರೂಪವೆಂದು ಹೇಳಿ, ಪ್ರಕೃತಿಶಬ್ದವಾಚ್ಯತ್ವವನ್ನು ಪರಂಪರಯಾ ಮುಂದಿನ ಸೂತ್ರದಲ್ಲಿ ಹೇಳಲಾಗಿದೆ ಎಂಬುದನ್ನು 'ಇಚ್ಛಾದ್ವಾರೈವ' ಎಂಬ ಮಾತಿನಿಂದ ಹೇಳುತ್ತಿದ್ದಾರೆ.

### ನೇರವಾಗಿಯೇ ಪ್ರಕೃತಿ ಶಬ್ದವಾಚ್ಯ

**भावदीपः – साक्षात्पदेन प्रागुक्तं सामान्यपारम्पर्यरूपद्वयमपि व्यावर्त्यमिति व्यनक्ति – साधारण्येन विनेति ।।**

'ಸಾಕ್ಷಾತ್' ಎಂಬ ಪದದಿಂದ ಸಾಮಾನ್ಯಪ್ರಮಾಣ ಹಾಗೂ ಪರಂಪರಾರೂಪವಾದ ಪ್ರಮಾಣ ಇವೆರಡಕ್ಕಿಂತಲೂ ವ್ಯತಿರಿಕ್ತವಾಗಿ ನೇರವಾಗಿಯೇ ಪ್ರಕೃತಿ ಶಬ್ದವಾಚ್ಯತ್ವವನ್ನು ಹೇಳುತ್ತಿದ್ದಾರೆಂಬ ಅಭಿಪ್ರಾಯದಿಂದ 'ಸಾಧಾರಣ್ಯೇನ ವಿನಾ' ಎಂಬ ವಾಕ್ಯವು ಹೊರಟಿದೆ.

### 'ಚ'ಶಬ್ದವು ಅವಧಾರಣಾರ್ಥ

**भावदीपः – चशब्द एवार्थ इति भावेन भाष्योक्तमनुवदति ।। साक्षादेवेति ।। प्रकृतीति ।। स्त्रीशब्दमात्रोपलक्षणमेतत् ।। पुरुषशब्देति ।। पुल्लिङ्गशब्देत्यर्थः ।।३।।**

ಸೂತ್ರದಲ್ಲಿರುವ 'ಚ'ಶಬ್ದವು ಅವಧಾರಣಾರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ಹೇಳಿದ್ದನ್ನು ಟೀಕೆಯಲ್ಲಿ 'ಸಾಕ್ಷಾದೇವ' ಎಂದು ಅನುವಾದ ಮಾಡಿದ್ದಾರೆ. 'ಪ್ರಕೃತಿ' ಶಬ್ದವು ಸಕಲ ಸ್ತ್ರೀಶಬ್ದಗಳಿಗೆ ಉಪಲಕ್ಷಣವಾಗಿದೆ ಪುರುಷಶಬ್ದವು ಸಕಲ ಪುಲ್ಲಿಂಗಶಬ್ದಗಳಿಗೆ ಉಪಲಕ್ಷಣವಾಗಿದೆ.

## ಬ್ರಹ್ಮಸೂತ್ರ

### 'ಆತ್ಮಕೃತೇಃ ಪರಿಣಾಮಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। आत्मकृतेः परिणामात् ।। ४ ।।**

ಸೂತ್ರಾರ್ಥ - ಪ್ರಕೃತಿಯು ಮಹತ್ತತ್ವಾದಿ ರೂಪವನ್ನು ಹೊಂದಿ, ಜಗದಾಕಾರದಲ್ಲಿ ಪರಿಣಾಮ ಹೊಂದುತ್ತದೆ. ಹಾಗೆಯೇ ಪರಿಣಾಮವನ್ನುಂಟುಮಾಡಲು ನಿಯಂತ್ರಣಕ್ಕಾಗಿ ಭಗವಂತನು ಅನೇಕ ರೂಪಗಳನ್ನು ತಾಳುತ್ತಾನೆ. ಆದ್ದರಿಂದಲೂ ಪ್ರಕೃತಿ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು.

ಅರ್ಥ -- ಪರಿಣಾಮಾತ್ = ಪ್ರಕೃತಿಯು ಅನೇಕ ಬಗೆಯಲ್ಲಿ ಪರಿಣಾಮ ಹೊಂದುವುದರಿಂದ, ಅದರ ಪ್ರೇರಣೆಗಾಗಿ, ಆತ್ಮಕೃತೇಃ = ತಾನು ಅನೇಕ ರೂಪಗಳನ್ನು ತಾಳುತ್ತಾನಾದ್ದರಿಂದ, ಪ್ರಕೃತಿಯಲ್ಲಿ ಅಂತರ್ಯಾಮಿಯಾಗಿರುವ ಕಾರಣ, ಪ್ರಕೃತಿ ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

## ಬ್ರಹ್ಮಸೂತ್ರಭಾಷ್ಯ

### ಪ್ರಕೃತಿಶಬ್ದದ ನಿರ್ವಚನ

**ब्रह्मसूत्रभाष्यम् – ।। आत्मकृतेः परिणामात् ।।**

**प्रकर्षेण करोतीति प्रकृतिरिति योगाच्च ।**

ಅನುವಾದ - ಪ್ರಕರ್ಷವಾದ ಶಕ್ತಿಯಿಂದ ಜಗಜ್ಜನ್ಮಾದಿಗಳನ್ನು ಮಾಡುತ್ತಾನೆಂಬ ಕಾರಣದಿಂದ ಪ್ರಕೃತಿಶಬ್ದವಾಚ್ಯನಾಗಿದ್ದಾನೆ.

ಪ್ರತಿಪದಾರ್ಥ -- ಪ್ರಕೃತಿಶಬ್ದವಾಚ್ಯತ್ವವನ್ನು ಶ್ರೀಹರಿಯಲ್ಲಿ ಹೇಳಿದ್ದರೂ
ಅದು ಹೇಗೆ ಕೂಡುತ್ತದೆ? ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವೇ ಅವನಲ್ಲಿ

ಬರುವುದಿಲ್ಲವಲ್ಲ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. –

ಪ್ರಕರ್ಷೇಣ = ಹೆಚ್ಚಿನ ಶಕ್ತಿಯಿಂದ, ಕರೋತಿ = ಜಗಜ್ಜನ್ಮಾದಿಗಳನ್ನು ಮಾಡುತ್ತಾನೆ. ಇತಿ = ಈ ಕಾರಣದಿಂದ, ಪ್ರಕೃತಿಃ = ಪ್ರಕೃತಿಶಬ್ದವಾಚ್ಯನು (ಅತ್ಯುತ್ತಮ ಕರ್ತೃತ್ವವುಳ್ಳವನಾದ್ದರಿಂದ ಪ್ರಕೃತಿಯೆನಿಸಿದ್ದಾನೆ) ಇತಿ ಯೋಗಾಚ್ಚ = ಹೀಗೆ ಯೋಗಾರ್ಥವು ವಿಷ್ಣುವಿನಲ್ಲಿ ಬರುವುದರಿಂದ.

ಪ್ರವೃತ್ತಿನಿಮಿತ್ತಕ್ಕೆ ಕಾರಣ

**ब्रह्मसूत्रभाष्यम् – प्रकृतावनुप्रविश्य तां परिणाम्य तत्परिणामेषु स्थित्वाऽऽत्मनो बहुधाकरणात् ।**

ಅನುವಾದ - ಜಡವಾದ ಪ್ರಕೃತಿಯೊಳಗಡೆ ಪರಮಾತ್ಮನು ಪ್ರವೇಶ ಮಾಡಿ, ಅದನ್ನು ಮಹತ್ತತ್ತ್ವಾದಿರೂಪದಿಂದ ಪರಿಣಾಮವಾಗುವಂತೆ ಮಾಡಿ, ಆ ಪರಿಣತ ವಸ್ತುಗಳ ನಿಯಾಮಕನಾಗಿ ಅವುಗಳಲ್ಲಿದ್ದು, ತನ್ನನ್ನು ಅನೇಕ ರೂಪಗಳುಳ್ಳವನಾಗಿ ಮಾಡುತ್ತಾನೆ.

ಪ್ರತಿಪದಾರ್ಥ -- ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. –

ಪ್ರಕೃತ = ಜಡಪ್ರಕೃತಿಯಲ್ಲಿ, ಅನುಪ್ರವಿಶ್ಯ = ಪ್ರವೇಶ ಮಾಡಿ, ತಾಂ = ಅದನ್ನು, ಪರಿಣಾಮ್ಯ = ಮಹತ್ತತ್ತ್ವಾತ್ಮಕವಾಗಿ ಪರಿಣಾಮ ಮಾಡಿ, ಪರಿಣಾಮನಿಯಾಮಕತಯಾ = ಅದರ ಪರಿಣಾಮಕ್ಕೆ ನಿಯಾಮಕನಾಗಿ, ತತ್ರ = ಆ ಜಡಪ್ರಕೃತಿಯಲ್ಲಿ, ಸ್ಥಿತ್ವಾ = ನೆಲೆಸಿ, ಆತ್ಮನಃ = ತನ್ನನ್ನೇ, ಬಹುಧಾ = ಅನೇಕ ರೂಪಗಳನ್ನಾಗಿ, ಕರಣಾತ್ = ಮಾಡುವುದರಿಂದ.

ಶ್ರುತಿ-ಸ್ಮೃತಿಗಳ ಆಧಾರ

**ब्रह्मसूत्रभाष्यम् – 'अथ हैष आत्मा प्रकृतिमनुप्रविश्याऽऽत्मानं बहुधा चकार । तस्मात् प्रकृतिस्तस्मात् प्रकृतिरित्याचक्षते' इति भाल्लवेयश्रुतिः ।**

ಅನುವಾದ - ಆತ್ಮನು ಜಡಪ್ರಕೃತಿಯಲ್ಲಿ ಪ್ರವೇಶಿಸಿ, ತನ್ನನ್ನು ಅನೇಕ ರೂಪವುಳ್ಳವನನ್ನಾಗಿ ಮಾಡಿಕೊಳ್ಳುತ್ತಾನೆ. ಆದ್ದರಿಂದ ಅವನನ್ನು ಪ್ರಕೃತಿ ಎನ್ನುತ್ತಾರೆ. ಹೀಗೆ ಭಾಲ್ಲವೇಯ ಶ್ರುತಿ ಹೇಳುತ್ತಿದೆ.

ಪ್ರತಿಪದಾರ್ಥ -- ತಾವು ಹೇಳಿದ ಸೂತ್ರಾರ್ಥದಲ್ಲಿ ಅವಿಶ್ವಾಸ ಬರಬಾರದೆಂಬ ದೃಷ್ಟಿಯಿಂದ ಶ್ರುತಿ-ಸ್ಮೃತಿಗಳನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ. –

ಅಥ = ಮತ್ತೊಂದು ಪ್ರಮೇಯವು, ಹ = ಪ್ರಸಿದ್ಧವಾಗಿದೆ. ಏಷಃ = ಪರಮಾತ್ಮನು, ಯಸ್ಮಾತ್ = ಯಾವ ಕಾರಣದಿಂದ, ಪ್ರಕೃತಿಂ = ಜಡಪ್ರಕೃತಿಯನ್ನು, ಅನುಪ್ರವಿಶ್ಯ = ಸ್ವಇಚ್ಛೆಯಿಂದ ಪ್ರವೇಶಮಾಡಿ, ಆತ್ಮಾನಂ = ತನ್ನನ್ನು, ಬಹುಧಾ = ಅನೇಕ ರೂಪವುಳ್ಳವನನ್ನಾಗಿ, ಚಕಾರ = ಮಾಡಿದನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿಃ = ಪ್ರಕೃತಿಶಬ್ದವಾಚ್ಯನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿ = ಪ್ರಕೃತಿ ಶಬ್ದದಿಂದ ವಾಚ್ಯನು, ಇತಿ = ಹೀಗೆ, ಆಚಕ್ಷತೇ = ಕರೆಯುತ್ತಾರೆ. ಇತಿ = ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

### ಪ್ರಕೃತಿಯಲ್ಲಿಯೂ ಪರಮಾತ್ಮನು ಪ್ರವೇಶಿಸುವನು

**ब्रह्मसूत्रभाष्यम् – 'अविकारोऽपि परमः प्रकृतिं तु विकारिणीम् ।
अनुप्रविश्य गोविन्दः प्रकृतिश्चाभिधीयते'' ।। इति नारदीये ।**

ಅನುವಾದ - ತಾನು ವಿಕಾರ ಹೊಂದದಿದ್ದರೂ, ಪ್ರಕೃತಿಯನ್ನು ಪ್ರವೇಶಿಸಿ ಅದನ್ನು ವಿಕಾರಗೊಳಿಸುತ್ತಾನೆ. ಆದ್ದರಿಂದ ಅವನು ಪ್ರಕೃತಿ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ನಾರದೀಯ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ಸ್ಮೃತಿಯಲ್ಲಿ 'ಯದ್ಯಪಿ' ಮತ್ತು 'ತಥಾಪಿ' ಎಂಬ ಪದಗಳ ಅರ್ಥದಲ್ಲಿ ಅಪಿಶಬ್ದವು ಪ್ರಯುಕ್ತವಾಗಿದೆ. 'ತು' ಶಬ್ದವು ವಿಶೇಷಾರ್ಥದಲ್ಲಿದೆ. ಆದ್ದರಿಂದ –

ಅಪಿ = ವಾಸ್ತವಿಕವಾಗಿ, ಗೋವಿಂದಃ = ಗೋವಿಂದನು, ಪರಮಃ ಅವಿಕಾರಃ = ಅತ್ಯಂತ ನಿರ್ವಿಕಾರನು ಆಗಿದ್ದರೂ, ಚ = ಯಾವ ಕಾರಣದಿಂದ, ವಿಕಾರಿಣಿ = ವಿಕಾರವುಳ್ಳ, ಪ್ರಕೃತಿಂ ತು = ಜಡ ಪ್ರಕೃತಿಯನ್ನು, ಅನುಪ್ರವಿಶ್ಯ = ಪ್ರವೇಶ ಮಾಡಿ, ಪ್ರಕೃತಿಶ್ಚ =

ಪ್ರಕೃತಿಯಂತೆ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ. ಇತಿ = ಹೀಗೆ, ನಾರದೀಯೇ = ನಾರದೀಯ ಪುರಾಣದಲ್ಲಿ ಹೇಳಲಾಗಿದೆ.

### ಅಪವ್ಯಾಖ್ಯಾನದ ನಿರಾಕರಣೆ

**ब्रह्मसूत्रभाष्यम् – न चान्यत् कल्प्यम्, अप्रमाणत्वात् ।।४।।**

ಅನುವಾದ - ನಾವು ಹೇಳಿದ ಅರ್ಥವನ್ನು ಬಿಟ್ಟು, ಬೇರೆ ಭಾಷ್ಯಕಾರರು ಹೇಳಿದ ಅರ್ಥವನ್ನು ಸೂತ್ರಕ್ಕೆ ತಿಳಿಯಬಾರದು. ಅವರ ಅರ್ಥದಲ್ಲಿ ಯಾವುದೇ ಪ್ರಮಾಣವಿಲ್ಲ. ಪ್ರಮಾಣಕ್ಕೆ ವಿರುದ್ಧವೂ ಆಗಿದೆ.

ಪ್ರತಿಪದಾರ್ಥ -- ಅಪವ್ಯಾಖ್ಯಾನವನ್ನು ದೂಷಣೆ ಮಾಡುತ್ತಿದ್ದಾರೆ. ಚ ಶಬ್ದವು 'ತು' ಎಂಬ ಪದದ ಅರ್ಥದಲ್ಲಿದೆ. –

ಅನ್ಯತ್ = ಹಿಂದೆ ಹೇಳಿದ ಅರ್ಥವನ್ನು ಬಿಟ್ಟು ಪ್ರಕೃತಿ ಶಬ್ದಕ್ಕೆ ಉಪಾದಾನ ಎಂಬರ್ಥವನ್ನು, ನ ಕಲ್ಪ್ಯಮ್ = ಕಲ್ಪಿಸಬಾರದು. ಅಪ್ರಮಾಣತ್ವಾತ್ = ಆ ಉಪಾದಾನಕಾರಣತ್ವಾದ್ಯರ್ಥಗಳು ಅಪ್ರಾಮಾಣಿಕವಾಗಿವೆ. ಮತ್ತು ಪ್ರಮಾಣವಿರುದ್ಧವೂ ಆಗಿವೆ.

## ಸತ್ತರ್ಕದೀಪಾವಳಿ

### ಪ್ರಕೃತಿ ಶಬ್ದದ ನಿರ್ವಚನ

**सत्तर्कदीपावळिः – अनेनाभिध्योपदेशादितीच्छयैव कांश्चित्प्रकर्षेण करोतीति सूचितम् । साक्षाच्चेतीच्छापूर्वकं स्वदेहादिरपि कांश्चित् । एवमविकारमेव ब्रह्म स्वेच्छया स्वयं जगत्करोतीति श्रुतिरुक्ता । यत्तदेव परिणमते विश्वात्मना मृषा वा प्रतीयत इति कल्पनं तदयुक्तमित्याह – न चेति ।**

ಹೀಗೆ ಹೇಳಿದ್ದರಿಂದ 'ಅಭಿಧ್ಯೋಪದೇಶಾತ್' ಎಂಬ ಸೂತ್ರದಲ್ಲಿ ಇಚ್ಛೆಯಿಂದಲೇ ಕೆಲವನ್ನು ಪ್ರಕರ್ಷೇಣ ಸೃಷ್ಟಿ ಮಾಡುತ್ತಾನೆಂದು ಸೂಚಿಸಿದಂತಾಯಿತು. 'ಸಾಕ್ಷಾತ್' ಎಂಬ ಸೂತ್ರದಲ್ಲಿ

ಪ್ರತಿಪದಾರ್ಥ -- ತಾವು ಹೇಳಿದ ಸೂತ್ರಾರ್ಥದಲ್ಲಿ ಅವಿಶ್ವಾಸ ಬರಬಾರದೆಂಬ ದೃಷ್ಟಿಯಿಂದ ಶ್ರುತಿ-ಸ್ಮೃತಿಗಳನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ. –

ಅಥ = ಮತ್ತೊಂದು ಪ್ರಮೇಯವು, ಹ = ಪ್ರಸಿದ್ಧವಾಗಿದೆ. ಏಷಃ = ಪರಮಾತ್ಮನು, ಯಸ್ಮಾತ್ = ಯಾವ ಕಾರಣದಿಂದ, ಪ್ರಕೃತಿಂ = ಜಡಪ್ರಕೃತಿಯನ್ನು, ಅನುಪ್ರವಿಶ್ಯ = ಸ್ವಇಚ್ಛೆಯಿಂದ ಪ್ರವೇಶಮಾಡಿ, ಆತ್ಮಾನಂ = ತನ್ನನ್ನು, ಬಹುಧಾ = ಅನೇಕ ರೂಪವುಳ್ಳವನನ್ನಾಗಿ, ಚಕಾರ = ಮಾಡಿದನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿಃ = ಪ್ರಕೃತಿಶಬ್ದವಾಚ್ಯನು, ತಸ್ಮಾತ್ = ಆ ಕಾರಣದಿಂದ, ಪ್ರಕೃತಿ = ಪ್ರಕೃತಿ ಶಬ್ದಿಂದ ವಾಚ್ಯನು, ಇತಿ = ಹೀಗೆ, ಆಚಕ್ಷತೇ = ಕರೆಯುತ್ತಾರೆ. ಇತಿ = ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

### ಪ್ರಕೃತಿಯಲ್ಲಿಯೂ ಪರಮಾತ್ಮನು ಪ್ರವೇಶಿಸುವನು

**ब्रह्मसूत्रभाष्यम् – 'अविकारोऽपि परमः प्रकृतिं तु विकारिणीम् ।
अनुप्रविश्य गोविन्दः प्रकृतिश्चाभिधीयते'' ।। इति नारदीये ।**

ಅನುವಾದ - ತಾನು ವಿಕಾರ ಹೊಂದದಿದ್ದರೂ, ಪ್ರಕೃತಿಯನ್ನು ಪ್ರವೇಶಿಸಿ ಅದನ್ನು ವಿಕಾರಗೊಳಿಸುತ್ತಾನೆ. ಆದ್ದರಿಂದ ಅವನು ಪ್ರಕೃತಿ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ನಾರದೀಯ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ಸ್ಮೃತಿಯಲ್ಲಿ 'ಯದ್ಯಪಿ' ಮತ್ತು 'ತಥಾಪಿ' ಎಂಬ ಪದಗಳ ಅರ್ಥದಲ್ಲಿ ಅಪಿಶಬ್ದವು ಪ್ರಯುಕ್ತವಾಗಿದೆ. 'ತು' ಶಬ್ದವು ವಿಶೇಷಾರ್ಥದಲ್ಲಿದೆ. ಆದ್ದರಿಂದ –

ಅಪಿ = ವಾಸ್ತವಿಕವಾಗಿ, ಗೋವಿಂದಃ = ಗೋವಿಂದನು, ಪರಮಃ ಅವಿಕಾರಃ = ಅತ್ಯಂತ ನಿರ್ವಿಕಾರನು ಆಗಿದ್ದರೂ, ಚ = ಯಾವ ಕಾರಣದಿಂದ, ವಿಕಾರಿಣಿ = ವಿಕಾರವುಳ್ಳ, ಪ್ರಕೃತಿಂ ತು = ಜಡ ಪ್ರಕೃತಿಯನ್ನು, ಅನುಪ್ರವಿಶ್ಯ = ಪ್ರವೇಶ ಮಾಡಿ, ಪ್ರಕೃತಿಶ್ಚ =

ಪ್ರಕೃತಿಯಂತೆ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ. ಇತಿ = ಹೀಗೆ, ನಾರದೀಯೇ = ನಾರದೀಯ ಪುರಾಣದಲ್ಲಿ ಹೇಳಲಾಗಿದೆ.

### ಅಪವ್ಯಾಖ್ಯಾನದ ನಿರಾಕರಣೆ

**ब्रह्मसूत्रभाष्यम् – न चान्यत् कल्प्यम्, अप्रमाणत्वात् ।।४।।**

ಅನುವಾದ - ನಾವು ಹೇಳಿದ ಅರ್ಥವನ್ನು ಬಿಟ್ಟು, ಬೇರೆ ಭಾಷ್ಯಕಾರರು ಹೇಳಿದ ಅರ್ಥವನ್ನು ಸೂತ್ರಕ್ಕೆ ತಿಳಿಯಬಾರದು. ಅವರ ಅರ್ಥದಲ್ಲಿ ಯಾವುದೇ ಪ್ರಮಾಣವಿಲ್ಲ. ಪ್ರಮಾಣಕ್ಕೆ ವಿರುದ್ಧವೂ ಆಗಿದೆ.

ಪ್ರತಿಪದಾರ್ಥ -- ಅಪವ್ಯಾಖ್ಯಾನವನ್ನು ದೂಷಣೆ ಮಾಡುತ್ತಿದ್ದಾರೆ. ಚ ಶಬ್ದವು 'ತು' ಎಂಬ ಪದದ ಅರ್ಥದಲ್ಲಿದೆ. –

ಅನ್ಯತ್ = ಹಿಂದೆ ಹೇಳಿದ ಅರ್ಥವನ್ನು ಬಿಟ್ಟು ಪ್ರಕೃತಿ ಶಬ್ದಕ್ಕೆ ಉಪಾದಾನ ಎಂಬರ್ಥವನ್ನು, ನ ಕಲ್ಪ್ಯಮ್ = ಕಲ್ಪಿಸಬಾರದು. ಅಪ್ರಮಾಣತ್ವಾತ್ = ಆ ಉಪಾದಾನಕಾರಣತ್ವಾದ್ಯರ್ಥಗಳು ಅಪ್ರಾಮಾಣಿಕವಾಗಿವೆ. ಮತ್ತು ಪ್ರಮಾಣವಿರುದ್ಧವೂ ಆಗಿವೆ.

## ಸತ್ತರ್ಕದೀಪಾವಳಿ

### ಪ್ರಕೃತಿ ಶಬ್ದದ ನಿರ್ವಚನ

**सत्तर्कदीपावळिः – अनेनाभिध्योपदेशादितीच्छयैव कांश्चित्प्रकर्षेण करोतीति सूचितम् । साक्षाचेतीच्छापूर्वकं स्वदेहादिरपि कांश्चित् । एवमविकारमेव ब्रह्म स्वेच्छया स्वयं जगत्करोतीति श्रुतिरुक्ता । यत्तदेव परिणमते विश्वात्मना मृषा वा प्रतीयत इति कल्पनं तदयुक्तमित्याह – न चेति ।**

ಹೀಗೆ ಹೇಳಿದ್ದರಿಂದ 'ಅಭಿಧ್ಯೋಪದೇಶಾತ್' ಎಂಬ ಸೂತ್ರದಲ್ಲಿ ಇಚ್ಛೆಯಿಂದಲೇ ಕೆಲವನ್ನು ಪ್ರಕರ್ಷೇಣ ಸೃಷ್ಟಿ ಮಾಡುತ್ತಾನೆಂದು ಸೂಚಿಸಿದಂತಾಯಿತು. 'ಸಾಕ್ಷಾತ್' ಎಂಬ ಸೂತ್ರದಲ್ಲಿ

ಇಚ್ಛಾಪೂರ್ವಕವಾಗಿ ಸೃಷ್ಟಿ ಮಾಡುತ್ತಾನೆಂದು ಹೇಳಿದಂತಾಯಿತು. ಹೀಗೆ ಬ್ರಹ್ಮನು ಸ್ವತಃ ಅಧಿಕಾರನಾಗಿದ್ದರೂ ಕೂಡ ತನ್ನ ಇಚ್ಛೆಯಿಂದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಆದ್ದರಿಂದಲೇ ಪ್ರಕೃತಿ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಿದಂತಾಯಿತು. ಯಾವುದು ಪರಿಣಾಮವನ್ನು ಹೊಂದುತ್ತದೋ, ಅದು ಮಿಥ್ಯಾಭೂತವಾಗಿದೆ ಎಂಬ ಕಲ್ಪನೆಯೂ ಕೂಡ ಅಯುಕ್ತವಾಗಿದೆ ಎಂಬ ಅದ್ವೈತಮತದ ನಿರಾಕರಣೆಗೆ 'ನ ಚ ಅನ್ಯತ್ ಕಲ್ಪ್ಯಮ್' ಎಂಬ ವಾಕ್ಯವು ಹೊರಟಿದೆ. ಇದರ ಬಗ್ಗೆ ಹೆಚ್ಚಿನ ವಿಚಾರವನ್ನು ಭಾಷ್ಯಕಾರರೇ ಅನುವ್ಯಾಖ್ಯಾನದಲ್ಲಿ ತಿಳಿಸಿರುತ್ತಾರೆ.

## ತತ್ವಪ್ರದೀಪ

### 'ಪ್ರಕೃತೌ ಅನುಪ್ರವಿಶ್ಯ' ಇತ್ಯಾದಿ ಭಾಷ್ಯದ ವ್ಯಾಖ್ಯಾನ

**तत्वप्रदीपः – आत्मकृतेः परिणामात् ।। प्रकृतावनुप्रविश्येत्यादेरयमर्थः। आत्मीयायाः प्रकृतेः परिणामात् तत्परिणामेषु नियन्तृत्वेन स्थित्वाऽत्मनो, बहुधाकरणात्प्रकृतिरित्युच्यते । 'बहुधाकरणं' बहुधाव्यञ्जनम् । तस्माच्च विष्णुरेव प्रकृतिशब्दवाच्यः ।।**

'ಆತ್ಮಕೃತೇಃ ಪರಿಣಾಮಾತ್' ಎಂಬ ಸೂತ್ರದ ವ್ಯಾಖ್ಯಾನವನ್ನು ಭಾಷ್ಯದಲ್ಲಿ ಹೀಗೆ ತಿಳಿಸಿದ್ದಾರೆ - 'ಪ್ರಕೃತೌ ಅನುಪ್ರವಿಶ್ಯ' ಎಂಬ ಭಾಷ್ಯಕ್ಕೆ ಹೀಗೆ ಅರ್ಥ - ಆತ್ಮೀಯವಾದ ಪ್ರಕೃತಿಯನ್ನು ಪರಿಣಾಮಗೊಳಿಸಿ, ಅದರಲ್ಲಿ ತಾನು ನಿಯಾಮಕನಾಗಿ ನೆಲೆಸುತ್ತಾನೆ. ಆ ಪರಿಣತವಾದ ಪದಾರ್ಥಗಳಲ್ಲಿ ತಾನು ಅನೇಕ ರೂಪಗಳನ್ನು ತಾಳಿ ಪ್ರವೇಶಿಸುತ್ತಾನೆ. ಆದ್ದರಿಂದ ಇವನನ್ನು ಶ್ರುತಿಯು ಪ್ರಕೃತಿ ಎಂದು ಕರೆಯುತ್ತದೆ. 'ಬಹುಧಾಕರಣ' ಎಂದರೆ ಅನೇಕ ರೂಪಗಳಿಂದ ಅಭಿವ್ಯಕ್ತನಾಗುತ್ತಾನೆ ಎಂದರ್ಥ. ಆದ್ದರಿಂದ ವಿಷ್ಣುವೇ ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂದು ನಿರ್ಣಯವಾಗುತ್ತದೆ.

### ಪ್ರಕೃತಿಶಬ್ದಕ್ಕೆ ಉಪಾದಾನಕಾರಣ ಎಂದರ್ಥವೇ?

**तत्वप्रदीपः – अत्राऽहुः - प्रकृतिशब्देनोपादानकारणं ब्रह्मात्र प्रतिपाद्यते। ''उत तमादेशमप्राक्ष्यो येनाश्रुतं श्रुतं भवति'' ''यथा सोम्यैकेन मृत्पिण्डेन सर्वं मृण्मयं विज्ञातं स्याद्वाचाऽऽरम्भणं विकारो नामधेयं मृत्तिकेत्येव सत्यम्'' इति प्रतिज्ञादृष्टान्तानुपरोधादिति । अत आह - नचान्यत्कल्प्यम-प्रमाणत्वात् इति ।।**

ಅದ್ವೈತಿಗಳು ಹೀಗೆ ಹೇಳುತ್ತಾರೆ - ಉಪಾದಾನಕಾರಣನಾದ ಬ್ರಹ್ಮನನ್ನು ಇಲ್ಲಿ ಪ್ರಕೃತಿಶಬ್ದದಿಂದ ಕರೆಯಲಾಗಿದೆ. 'ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತಿ'' ಎಂಬ ಪ್ರತಿಜ್ಞಾವಾಕ್ಯಕ್ಕೂ, ''ಯಥಾ ಸೊಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ವಾಚಾಽಽರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್'' ದೃಷ್ಟಾಂತವಾಕ್ಯಕ್ಕೂ ಸಾಮಾನಾಧಿಕರಣ್ಯದ ಸಂಪಾದನೆಗೋಸ್ಕರ ಬ್ರಹ್ಮನಿಗೆ ಉಪಾದಾನ-ಕಾರಣತ್ವವನ್ನೇ ಹೇಳಬೇಕು ಎಂಬುದು ಇವರ ವಾದ. ಇವರನ್ನು ನಿರಾಕರಣೆ ಮಾಡುವುದಕ್ಕಾಗಿ ಭಾಷ್ಯದಲ್ಲಿ 'ನಚ ಅನ್ಯತ್‌ಕಲ್ಪ್ಯಮ್ ಅಪ್ರಮಾಣತ್ವಾತ್' ಎಂದು ಹೇಳಿದ್ದಾರೆ.

### 'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ಉಪಾದಾನಕಾರಣಕ್ಕೆ ಪ್ರಮಾಣವಾಗುವುದಿಲ್ಲ

**तत्वप्रदीपः – नोपादानत्वं कल्प्यं, ब्रह्मणो जगदुपादानत्वे प्रमाणाभावात्। नच ''बहु स्यां प्रजायेय'' इति श्रुतौ जगदात्मतया बहुभावा भिध्यानमभिधीयते । ''तत्सृष्ट्वा तदेवानुप्राविशत्'' इति ''इमास्तिस्रो देवता अनेन जीवेनाऽत्मनाऽनुप्रविश्य'' इति च वक्ष्यमाणस्य तत्र तत्र प्रवेशस्यैवाभिध्यातत्वात् । ''प्रजायेय' इति प्रजनयेयेत्यर्थः । अपरथा पौनरुक्त्यप्रसङ्गात् ।**

'ನಚ ಅನ್ಯತ್ ಕಲ್ಪ್ಯಮ್' ಎಂದರೆ ಬ್ರಹ್ಮನಿಗೆ ಉಪಾದಾನತ್ವವನ್ನು ಕಲ್ಪನೆ ಮಾಡಬಾರದು. ಏಕೆಂದರೆ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವು ಇರುವುದಿಲ್ಲ.

ಪ್ರಶ್ನೆ - 'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ಪರಮಾತ್ಮನು ಅನೇಕ ರೂಪಗಳಿಂದ ಜಗತ್ತಾಗಿ ಪರಿಣಾಮವನ್ನು ಹೊಂದುತ್ತಾನೆ ಎಂದು ಹೇಳುತ್ತಿದೆ. ಆದ್ದರಿಂದ ಜಗದುಪಾದಾನಕ್ಕೆ ಈ ಶ್ರುತಿಯು ಪ್ರಮಾಣವಾಗುತ್ತದಲ್ಲವೇ?

ಉತ್ತರ - ಇದು ತಪ್ಪು. 'ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' ಜಗತ್ತನ್ನು ಸೃಷ್ಟಿ ಮಾಡಿ, ಅದರೊಳಗಡೆ ಪ್ರವೇಶ ಮಾಡಿದನು ಎಂಬುದಾಗಿ ಈ ಶ್ರುತಿಯು ಉಪಾದಾನಕಾರಣ-ನಾಗಿದ್ದಾನೆಂಬುದನ್ನು ನಿರಾಕರಿಸುತ್ತಿದೆ. ಮತ್ತು 'ಇಮಾಸ್ತಿಸ್ರೋ ದೇವತಾ ಅನೇನ ಜೀವೇನಾऽತ್ಮನಾऽನುಪ್ರವಿಶ್ಯ' ಈ ಜೀವನ ಜೊತೆ ಈ ಮೂರು ಮಂದಿ ದೇವತೆಗಳು ಪ್ರವೇಶ ಮಾಡಿದರು ಎಂಬುದಾಗಿ ಮುಂದೆ ಉಲ್ಲೇಖ ಮಾಡುವ ಪ್ರಮಾಣವೂ ಕೂಡ ಜಗತ್ತಿನಲ್ಲಿ ಪರಮಾತ್ಮನ ಪ್ರವೇಶವನ್ನು ಹೇಳುತ್ತಿದೆ ಹೊರತು, ತಾನೇ ಜಗತ್ತಾದ ಎಂದು ಹೇಳುತ್ತಿಲ್ಲ. ಆದ್ದರಿಂದ 'ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿರುವ 'ಪ್ರಜಾಯೇಯ' ಎಂಬ ಪದಕ್ಕೆ ಹುಟ್ಟಲು ಬಯಸಿದನು ಎಂಬರ್ಥವನ್ನು ವಿವಕ್ಷಿಸಬಾರದು. ಹುಟ್ಟಿಸಲು ಅಪೇಕ್ಷಿಸಿದನು ಎಂಬರ್ಥವನ್ನು ವಿವಕ್ಷಿಸಬೇಕು. ಈ ಅರ್ಥವನ್ನು ಒಪ್ಪದಿದ್ದರೆ 'ಸ್ಯಾಮ್' ಎಂಬ ಕ್ರಿಯಾಪದದಿಂದ ಪುನರುಕ್ತಿಯು ಬರುತ್ತದೆ.

> ವಿವರಣೆ - 'ಪ್ರಜಾಯೇಯ' ಎಂಬುದು ಣಿಜಂತವಾದ ಶಬ್ದವಲ್ಲ. ಆದರೆ ಣಿಜಂತಾರ್ಥವನ್ನು ಹೇಳಬೇಕು ಎಂಬುದನ್ನು ಪ್ರಜನಯೇಯ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಹೀಗೆ ಅರ್ಥವನ್ನು ಹೇಳದಿದ್ದರೆ 'ಸ್ಯಾಮ್' ಎಂಬ ಪದದ ಅರ್ಥವನ್ನೇ ಪ್ರಜಾಯೇಯ ಎಂಬ ಪದಕ್ಕೂ ಕೂಡ ಹೇಳಿದಂತಾಗುತ್ತದೆ.

'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿಯೂ ಕೂಡ ಉಪಾದಾನತ್ವ ವಿಷಯದಲ್ಲಿ ಪ್ರಮಾಣವಲ್ಲ

**तत्वप्रदीपः – ''तदनुप्रविश्य सच्च त्यच्चाभवत्'' इत्यादि वाक्यादपि न ब्रह्मणो जगद्भाव आशङ्कनीयः । पूर्वसृष्टे पश्चात्प्रविष्टस्य तद्भावायोगात् । ''अविकारः सदा शुद्धो नित्य आत्मा सदा हरिः'' इति चाविकारित्वे श्रुतिः । ब्रह्मोपादानत्वे च जगतश्चेतनत्वप्रसङ्गः । मृदुपादानको हि घटो मृदात्मको लक्ष्यते । अतो नात्र प्रमाणम् ।**

'ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್' ಎಂಬ ವಾಕ್ಯದಿಂದಲೂ ಕೂಡ ಬ್ರಹ್ಮನಿಗೆ ಜಗದುಪಾನದಾನತ್ವವನ್ನು ಆಶಂಕೆ ಮಾಡಬಾರದು. ಏಕೆಂದರೆ ವಸ್ತುಗಳು ಸೃಷ್ಟಿಯಾದ ಮೇಲೆ

ಆದರೊಳಗಡೆ ಪ್ರವೇಶವನ್ನು ಮಾಡಿ, ಮುಂದಿನ ವ್ಯಾಪಾರಗಳನ್ನು ಮಾಡಿದನೆಂದು ಈ ಶ್ರುತಿ ಹೇಳುತ್ತಿದೆ. ಅನಂತರ ಪ್ರವಿಷ್ಟವಾದದ್ದು ಅದೇ ವಸ್ತುವಿಗೆ ಉಪಾದಾನಕಾರಣವಾಗಲು ಸಾಧ್ಯವೇ ಇಲ್ಲ. ಮತ್ತು 'ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ' ಎಂಬ ಶ್ರುತಿಯು ಬ್ರಹ್ಮನನ್ನು ನಿರ್ವಿಕಾರನೆಂದು ಹೇಳುತ್ತಿದೆ. ಆದ್ದರಿಂದ ಸತ್-ತ್ಯದಾದಿ ರೂಪಗಳಿಂದ ವಿಕಾರವನ್ನು ಹೊಂದಿದನು ಎಂಬುದಾಗಿ ಶ್ರುತಿಗೆ ಅರ್ಥವನ್ನು ಕಲ್ಪನೆ ಮಾಡಬಾರದು. ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂದು ಹೇಳಿದರೆ ಜಗತ್ತೂ ಕೂಡ ಬ್ರಹ್ಮನಂತೆ ಚೇತನ ಆಗುವ ಪ್ರಸಂಗ ಬರುತ್ತದೆ. ಜಗತ್ತು ಜಡವಾಗಿದೆ ಎಂಬುದೇ ಸುಳ್ಳು ಎಂದಾಗಬೇಕಾಗುತ್ತದೆ. ಏಕೆಂದರೆ ಯಾವುದು ಯದುಪಾದಾನಕವೋ, ಅದು ತದಾತ್ಮಕವೇ ಆಗಿರುವುದು ಕಂಡಿದೆ. ಮೃದುಪಾದಾನಕವಾದ ಘಟವು ಮೃದಾತ್ಮಕವಾಗಿರುವುದೇ ಕಂಡಿದೆ. ಆದ್ದರಿಂದ ಪರಮಾತ್ಮನು ಜಗದಾತ್ಮಕನಾಗಿದ್ದಾನೆನ್ನಲು ಯಾವುದೇ ಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ.

### ಉಪಾದಾನತ್ವವಿಷಯದಲ್ಲಿ ಸೂತ್ರವೂ ಕೂಡ ಪ್ರಮಾಣವಲ್ಲ

**ತत्वप्रदीपः – सूत्रमत्र प्रमाणमिति चेत्, नैतदुपादानत्वं सूत्रार्थतया कल्प्यम् । प्रमाणाभावात् । नह्यस्मिन्नध्याये सति सम्भवे समन्वयादन्यत्कल्प्यम्। समन्वयसूत्राणामन्यत्राप्रमाणत्वात् ।**

'ಪರಿಣಾಮಾತ್' ಎಂಬ ಸೂತ್ರವೇ ಜಗದುಪಾದಾನತ್ವ ವಿಷಯದಲ್ಲಿ ಪ್ರಮಾಣ-ವಾಗಿದೆಯಲ್ಲವೇ? ಎಂದು ಹೇಳಬಾರದು. ಈ ಸೂತ್ರಕ್ಕೆ ಉಪಾದಾನತ್ವಪರವಾಗಿ ಅರ್ಥವನ್ನು ಕಲ್ಪನೆ ಮಾಡಬಾರದು. ಹಾಗೇ ಕಲ್ಪಿಸಲು ಯಾವುದೇ ಪ್ರಮಾಣವಿರುವುದಿಲ್ಲ. ಮತ್ತು ಇದು ಸಮನ್ವಯಾಧ್ಯಾಯ. ಇದರಲ್ಲಿರುವ ಸೂತ್ರಗಳು ಸಮನ್ವಯವಿಷಯದಲ್ಲಷ್ಟೇ ಪ್ರಮಾಣ-ವಾಗುತ್ತವೆ. ಇದನ್ನು ಬಿಟ್ಟು, ಉಪಾದಾನತ್ವವಿಷಯದಲ್ಲಿ ಪ್ರಮಾಣವಾಗುತ್ತದೆ ಎನ್ನುವುದು ಅಸಂಗತವಿಚಾರ.

### ರಜತಾಕಾರವಾಗಿ ಪರಿಣಾಮವನ್ನು ಹೊಂದುವ ಶುಕ್ತಿಯಂತೆ ಬ್ರಹ್ಮನಲ್ಲ

**तत्वप्रदीपः – अन्यस्तु मन्यते, न मृदादिवदुपादानत्वमिष्यते, किन्तु शुक्त्यादिवद्रजतादेरपरिणामेनैव । नच तावता तदुपादानभाषाभङ्गः प्रसङ्गी ।**

**यथा हि शुक्त्यविद्याविजृम्भितत्वाद्रजतस्य शुक्त्युपादानता कल्प्यते तथा ब्रह्मविद्याविजृम्भितत्वाज्जगतस्तदुपादानतेति । अत्रापि तदुत्तरं - नचान्यदुपादानं कल्प्यम् । प्रमाणरहितत्वात् ।**

ಬೇರೆ ಕೆಲವು ವಾದಿಗಳು ಹೀಗೆ ಹೇಳುತ್ತಾರೆ - ಮಣ್ಣಿನಂತೆ ಬ್ರಹ್ಮನು ಉಪಾದಾನನೆಂದು ನಾವು ಒಪ್ಪುವುದಿಲ್ಲ. ಮತ್ತೇನೆಂದರೆ ಶುಕ್ತಿಯು ರಜತಾಕಾರವಾಗಿ ಪರಿಣಾಮವನ್ನು ಹೊಂದುತ್ತದೋ, ಆದರಂತೆ ಬ್ರಹ್ಮನು ಜಗದಾಕಾರದಲ್ಲಿ ಪರಿಣಾಮವನ್ನು ಹೊಂದಿದ್ದಾನೆ. ಹೀಗೆ ಹೇಳಿದ ಮಾತ್ರಕ್ಕೆ ಉಪಾದಾನನಾಗಿದ್ದಾನೆ ಎಂಬ ಮಾತಿಗೆ ಭಂಗ ಬಂದಿತು ಎಂಬ ಪ್ರಸಂಗಕ್ಕೆ ಅವಕಾಶವಿಲ್ಲ. ಹೇಗೆ ಶುಕ್ತಿಯ ಅಜ್ಞಾನದಿಂದ ವಿಜೃಂಭಿತವಾದ ರಜತವು ಶುಕ್ತಿಗೆ ಉಪಾದಾನವೆಂದು ಕಲ್ಪನೆ ಮಾಡಲಾಗುತ್ತದೋ, ಆದರಂತೆ ಬ್ರಹ್ಮನ ಅಜ್ಞಾನದಿಂದ ವಿಜೃಂಭಿತವಾದ ಜಗತ್ತು ಬ್ರಹ್ಮನೇ ಉಪಾದಾನಕಾರಣವಾಗಿ ಉಳ್ಳದ್ದು ಎಂಬುದಾಗಿ ಕಲ್ಪನೆ ಮಾಡುತ್ತೇವೆ ಎಂದು.

ಇವರ ಈ ವಾದಕ್ಕೂ ಕೂಡ 'ನಚಾನ್ಯದುಪಾದಾನಂ ಕಲ್ಪ್ಯಮ್' ಎಂಬ ಆಚಾರ್ಯರ ಮಾತೇ ಉತ್ತರವನ್ನು ನೀಡುತ್ತಿದೆ. ಪ್ರಮಾಣವಿಲ್ಲದ್ದರಿಂದ ಬ್ರಹ್ಮನನ್ನು ಪರಿಣಾಮರೂಪನಾದ ಉಪಾದಾನಕಾರಣನೆಂದು ಹೇಳಬಾರದು.

> ವಿವರಣೆ - 'ತದುಪಾದಾನಭಾಷಾಭಂಗಃ ಪ್ರಸಂಗೀ' ಎಂಬುದು ಅಪೂರ್ವವಾದ ಶಬ್ದಪ್ರಯೋಗ. ಪ್ರಸಂಗವುಳ್ಳದ್ದು ಎಂಬರ್ಥದಲ್ಲಿ ಪ್ರಸಂಗೀ ಎಂಬರ್ಥವನ್ನು ಉಪಯೋಗಿಸಿದ್ದಾರೆ. ನಕಾರಾಂತವಾದ ಶಬ್ದವಿದು.

### ರಜತಕ್ಕೆ ಶುಕ್ತಿಯು ಉಪಾದಾನಕಾರಣವಲ್ಲ

**तत्वप्रदीपः – नहि शुक्ते रजतोपादानत्वम् । नहि रजतार्थी शुक्तिकां विदन्नुपादत्ते, मृदमिव मणिकार्थी । नैतावन्तं कालमपि रजतमिहाऽसीत्, असदेव सदिति प्रत्यभादिति चोत्तरकालीनः सार्वलौकिकः प्रत्ययस्तस्योत्पत्तिं निवारयति ।**

ಮತ್ತು ಶುಕ್ತಿಯು ರಜತಕ್ಕೆ ಉಪಾದಾನವೇ ಅಲ್ಲ. ಏಕೆಂದರೆ ರಜತವನ್ನು ಅಪೇಕ್ಷೆ ಪಡುವವನು ಶುಕ್ತಿಯೆಂದು ತಿಳಿದು ಅದನ್ನು ಸ್ವೀಕರಿಸುವುದೇ ಇಲ್ಲ. ಹೇಗೆ ಮಣಿಕವನ್ನು (ಮಣ್ಣಿನಿಂದ ತಯಾರಿಸಿದ ಜಗ್ಗಿನಂತೆ ಇರುವ ವಸ್ತು ವಿಶೇಷ) ಅಪೇಕ್ಷೆ ಪಡುವವನು. ಮಣ್ಣನ್ನು ಸ್ವೀಕರಿಸಲು ಹೇಗೆ ಪ್ರವೃತ್ತನಾಗುತ್ತಾನೋ, ಅದರಂತೆ ಪ್ರವೃತ್ತಿ ಮಾಡುವುದಿಲ್ಲ. ಮತ್ತು ಇಲ್ಲಿಯ ತನಕ ರಜತವು ಇರಲಿಲ್ಲ. ಇಲ್ಲದೇ ಇರುವ ರಜತವೇ ನನಗೆ ಕಂಡಿತ್ತು ಎಂಬುದಾಗಿ ಲೋಕದಲ್ಲಿರುವ ಪ್ರತಿಯೊಬ್ಬರಿಗೂ ಉತ್ತರಕಾಲದಲ್ಲಿ ಜ್ಞಾನವು ಬರುತ್ತಿದೆ. ಇದರಿಂದ ಭ್ರಾಂತಿಕಾಲದಲ್ಲಿ ಶುಕ್ತಿಯು ರಜತಾಕಾರವಾಗಿ ಪರಿಣಾಮವು ಹೊಂದಿದೆ ಎಂಬುದನ್ನು ನಿವಾರಣೆ ಮಾಡಿದಂತಾಗುತ್ತದೆ.

ವಿವರಣೆ - ಪೂರ್ವಪಕ್ಷಿಯು ರಜತವು ಹುಟ್ಟುತ್ತದೆ ಎಂದು ಹೇಳುತ್ತಿದ್ದಾನೆ. ರಜತಜ್ಞಾನ ಹುಟ್ಟುತ್ತಿದೆ ಎಂದು ಹೇಳುತ್ತಿಲ್ಲ. ಅವನು ಎಡವಿದ್ದನ್ನು ಗಮನಿಸಬೇಕು.

### ಜಗತ್ತಿನಂತೆ ಬ್ರಹ್ಮನು ಅನಿರ್ವಾಚ್ಯನಾದ

**तत्वप्रदीपः – कथं च पुनस्तदनवबोधनं तज्जमभिनिविशसि । तस्य ततो भेदरहितत्वादिति चेत्तर्हि कथं तिष्ठति तस्मिन्नितरस्यापगमः ? अनिर्वाच्यत्वादिति चेन्मैवम् । ब्रह्मणोऽप्यनिर्वाच्यत्वप्रसङ्गात् । नहि स्वतो भेदविरहिणः स्वयं भेदि स्यात् । नाप्यभेदविरहितादभेदि स्यात् । परिशेषादनिर्वाच्यं ब्रह्म स्यात् ।**

ಅದ್ವೈತಿಗಳು - ಬ್ರಹ್ಮನ ಅಜ್ಞಾನದಿಂದ ಜಗತ್ತು ಹುಟ್ಟಿದೆ ಎಂದು ಹೇಳಿದರೆ ಏನು ತಪ್ಪು ?

ತತ್ವವಾದಿಗಳು - ಧರ್ಮಿಯ ಜ್ಞಾನವು ಇಲ್ಲದೇ ಇರುವುದರಿಂದ ಧರ್ಮಿಯಿಂದ ಹುಟ್ಟಿದೆ ಎಂದು ಹೇಗೆ ಅಭಿನಿವೇಶ ಮಾಡುವಿ ? ಶುಕ್ತಿಯ ಅಜ್ಞಾನದಿಂದ ಹುಟ್ಟಿರುವ ರಜತವು ಶುಕ್ತಿಯಿಂದ ಹುಟ್ಟಿದೆ ಎಂಬುದಾಗಿ ಅಭಿನಿವೇಶ ಮಾಡಲು ಕಾರಣವೇ ಇಲ್ಲ.

ಅದ್ವೈತಿಗಳು - ಹುಟ್ಟಿದ ಪದಾರ್ಥಕ್ಕೆ ಧರ್ಮಿಯಿಂದ ಭೇದವು ಇರುವುದಿಲ್ಲ. ಆದ್ದರಿಂದ ಅದನ್ನು ಧರ್ಮಿಯಿಂದ ಹುಟ್ಟಿದೆ ಎಂದು ಹೇಳುತ್ತೇವೆ. ಪ್ರಕೃತ ಜಗತ್ತಿನಿಂದ ಬ್ರಹ್ಮನಿಗೆ ಭೇದವು ಇಲ್ಲದ ಕಾರಣ ಬ್ರಹ್ಮನ ಅಜ್ಞಾನದಿಂದ ಜಗತ್ತು ಹುಟ್ಟಿದೆ ಎಂದು ಹೇಳಬಹುದು.

**यथा हि शुक्त्यविद्याविजृम्भितत्वाद्रजतस्य शुक्त्युपादानता कल्प्यते तथा ब्रह्मविद्याविजृम्भितत्वाज्जगतस्तदुपादानतेति । अत्रापि तदुत्तरं - नचान्यदुपादानं कल्प्यम् । प्रमाणरहितत्वात् ।**

ಬೇರೆ ಕೆಲವು ವಾದಿಗಳು ಹೀಗೆ ಹೇಳುತ್ತಾರೆ - ಮಣ್ಣಿನಂತೆ ಬ್ರಹ್ಮನು ಉಪಾದಾನನೆಂದು ನಾವು ಒಪ್ಪುವುದಿಲ್ಲ. ಮತ್ತೇನೆಂದರೆ ಶುಕ್ತಿಯು ರಜತಾಕಾರವಾಗಿ ಪರಿಣಾಮವನ್ನು ಹೊಂದುತ್ತದೋ, ಅದರಂತೆ ಬ್ರಹ್ಮನು ಜಗದಾಕಾರದಲ್ಲಿ ಪರಿಣಾಮವನ್ನು ಹೊಂದಿದ್ದಾನೆ. ಹೀಗೆ ಹೇಳಿದ ಮಾತ್ರಕ್ಕೆ ಉಪಾದಾನನಾಗಿದ್ದಾನೆ ಎಂಬ ಮಾತಿಗೆ ಭಂಗ ಬಂದಿತು ಎಂಬ ಪ್ರಸಂಗಕ್ಕೆ ಅವಕಾಶವಿಲ್ಲ. ಹೇಗೆ ಶುಕ್ತಿಯ ಅಜ್ಞಾನದಿಂದ ವಿಜೃಂಭಿತವಾದ ರಜತವು ಶುಕ್ತಿಗೆ ಉಪಾದಾನವೆಂದು ಕಲ್ಪನೆ ಮಾಡಲಾಗುತ್ತದೋ, ಅದರಂತೆ ಬ್ರಹ್ಮನ ಅಜ್ಞಾನದಿಂದ ವಿಜೃಂಭಿತವಾದ ಜಗತ್ತು ಬ್ರಹ್ಮನೇ ಉಪಾದಾನಕಾರಣವಾಗಿ ಉಳ್ಳದ್ದು ಎಂಬುದಾಗಿ ಕಲ್ಪನೆ ಮಾಡುತ್ತೇವೆ ಎಂದು.

ಇವರ ಈ ವಾದಕ್ಕೂ ಕೂಡ 'ನಚಾನ್ಯದುಪಾದಾನಂ ಕಲ್ಪ್ಯಮ್' ಎಂಬ ಆಚಾರ್ಯರ ಮಾತೇ ಉತ್ತರವನ್ನು ನೀಡುತ್ತಿದೆ. ಪ್ರಮಾಣವಿಲ್ಲದ್ದರಿಂದ ಬ್ರಹ್ಮನನ್ನು ಪರಿಣಾಮರೂಪನಾದ ಉಪಾದಾನಕಾರಣನೆಂದು ಹೇಳಬಾರದು.

> **ವಿವರಣೆ** - 'ತದುಪಾದಾನಭಾಷಾಭಂಗಃ ಪ್ರಸಂಗೀ' ಎಂಬುದು ಅಪೂರ್ವವಾದ ಶಬ್ದಪ್ರಯೋಗ. ಪ್ರಸಂಗವುಳ್ಳದ್ದು ಎಂಬರ್ಥದಲ್ಲಿ ಪ್ರಸಂಗೀ ಎಂಬರ್ಥವನ್ನು ಉಪಯೋಗಿಸಿದ್ದಾರೆ. ನಕಾರಾಂತವಾದ ಶಬ್ದವಿದು.

### ರಜತಕ್ಕೆ ಶುಕ್ತಿಯು ಉಪಾದಾನಕಾರಣವಲ್ಲ

**तत्वप्रदीपः – नहि शुक्ते रजतोपादानत्वम् । नहि रजतार्थी शुक्तिकां विदन्नुपादत्ते, मृदमिव मणिकार्थी । नैतावन्तं कालमपि रजतमिहाऽसीत्, असदेव सदिति प्रत्यभादिति चोत्तरकालीनः सार्वलौकिकः प्रत्ययस्तस्योत्पत्तिं निवारयति ।**

ಮತ್ತು ಶುಕ್ತಿಯು ರಜತಕ್ಕೆ ಉಪಾದಾನವೇ ಅಲ್ಲ. ಏಕೆಂದರೆ ರಜತವನ್ನು ಅಪೇಕ್ಷೆ ಪಡುವವನು ಶುಕ್ತಿಯೆಂದು ತಿಳಿದು ಅದನ್ನು ಸ್ವೀಕರಿಸುವುದೇ ಇಲ್ಲ. ಹೇಗೆ ಮಣಿಕವನ್ನು (ಮಣ್ಣಿನಿಂದ ತಯಾರಿಸಿದ ಜಗ್ಗಿನಂತೆ ಇರುವ ವಸ್ತು ವಿಶೇಷ) ಅಪೇಕ್ಷೆ ಪಡುವವನು. ಮಣ್ಣನ್ನು ಸ್ವೀಕರಿಸಲು ಹೇಗೆ ಪ್ರವೃತ್ತನಾಗುತ್ತಾನೋ, ಅದರಂತೆ ಪ್ರವೃತ್ತಿ ಮಾಡುವುದಿಲ್ಲ. ಮತ್ತು ಇಲ್ಲಿಯ ತನಕ ರಜತವು ಇರಲಿಲ್ಲ. ಇಲ್ಲದೇ ಇರುವ ರಜತವೇ ನನಗೆ ಕಂಡಿತ್ತು ಎಂಬುದಾಗಿ ಲೋಕದಲ್ಲಿರುವ ಪ್ರತಿಯೊಬ್ಬರಿಗೂ ಉತ್ತರಕಾಲದಲ್ಲಿ ಜ್ಞಾನವು ಬರುತ್ತಿದೆ. ಇದರಿಂದ ಭ್ರಾಂತಿಕಾಲದಲ್ಲಿ ಶುಕ್ತಿಯು ರಜತಾಕಾರವಾಗಿ ಪರಿಣಾಮವು ಹೊಂದಿದೆ ಎಂಬುದನ್ನು ನಿವಾರಣೆ ಮಾಡಿದಂತಾಗುತ್ತದೆ.

ವಿವರಣೆ - ಪೂರ್ವಪಕ್ಷಿಯು ರಜತವು ಹುಟ್ಟುತ್ತದೆ ಎಂದು ಹೇಳುತ್ತಿದ್ದಾನೆ. ರಜತಜ್ಞಾನ ಹುಟ್ಟುತ್ತಿದೆ ಎಂದು ಹೇಳುತ್ತಿಲ್ಲ. ಅವನು ಎಡವಿದ್ದನ್ನು ಗಮನಿಸಬೇಕು.

### ಜಗತ್ತಿನಂತೆ ಬ್ರಹ್ಮನು ಅನಿರ್ವಾಚ್ಯನಾದ

**ತत्वप्रदीपः – कथं च पुनस्तदनवबोधनं तज्जमभिनिविशसि । तस्य ततो भेदरहितत्वादिति चेत्तर्हि कथं तिष्ठति तस्मिन्नितरस्यापगमः ? अनिर्वाच्यत्वादिति चेन्मैवम् । ब्रह्मणोऽप्यनिर्वाच्यत्वप्रसङ्गात् । नहि स्वतो भेदविरहिणः स्वयं भेदि स्यात् । नाप्यभेदविरहितादभेदि स्यात् । परिशेषादनिर्वाच्यं ब्रह्म स्यात् ।**

ಅದ್ವೈತಿಗಳು - ಬ್ರಹ್ಮನ ಅಜ್ಞಾನದಿಂದ ಜಗತ್ತು ಹುಟ್ಟಿದೆ ಎಂದು ಹೇಳಿದರೆ ಏನು ತಪ್ಪು ?

ತತ್ವವಾದಿಗಳು - ಧರ್ಮಿಯ ಜ್ಞಾನವು ಇಲ್ಲದೇ ಇರುವುದರಿಂದ ಧರ್ಮಿಯಿಂದ ಹುಟ್ಟಿದೆ ಎಂದು ಹೇಗೆ ಅಭಿನಿವೇಶ ಮಾಡುವಿ ? ಶುಕ್ತಿಯ ಅಜ್ಞಾನದಿಂದ ಹುಟ್ಟಿರುವ ರಜತವು ಶುಕ್ತಿಯಿಂದ ಹುಟ್ಟಿದೆ ಎಂಬುದಾಗಿ ಅಭಿನಿವೇಶ ಮಾಡಲು ಕಾರಣವೇ ಇಲ್ಲ.

ಅದ್ವೈತಿಗಳು - ಹುಟ್ಟಿದ ಪದಾರ್ಥಕ್ಕೆ ಧರ್ಮಿಯಿಂದ ಭೇದವು ಇರುವುದಿಲ್ಲ. ಆದ್ದರಿಂದ ಅದನ್ನು ಧರ್ಮಿಯಿಂದ ಹುಟ್ಟಿದೆ ಎಂದು ಹೇಳುತ್ತೇವೆ. ಪ್ರಕೃತ ಜಗತ್ತಿನಿಂದ ಬ್ರಹ್ಮನಿಗೆ ಭೇದವು ಇಲ್ಲದ ಕಾರಣ ಬ್ರಹ್ಮನ ಅಜ್ಞಾನದಿಂದ ಜಗತ್ತು ಹುಟ್ಟಿದೆ ಎಂದು ಹೇಳಬಹುದು.

ತತ್ವವಾದಿಗಳು - ಹಾಗಾದರೆ ಧರ್ಮಿಯು ಇರುವಾಗ ಆದರಿಂದ ಹುಟ್ಟಿದ್ದು ಹೇಗೆ ನಾಶವಾಗಲು ಸಾಧ್ಯ ? ಶುಕ್ತಿಗೂ, ರಜತಕ್ಕೂ ಭೇದವಿಲ್ಲವೆಂದು ಹೇಳುತ್ತಿರುವಿ ಹೀಗೆ ಹೇಳಿದರೆ ಶುಕ್ತಿಯು ಇರುವಾಗಲೇ ರಜತವು ಹೇಗೆ ನಾಶವಾಯಿತು ? ಅದರಂತೆ ಬ್ರಹ್ಮನಿರುವಾಗಲೇ, ಜಗತ್ತು ಹೇಗೆ ನಾಶವಾಗಲು ಸಾಧ್ಯ ?

ಅದ್ವೈತಿಗಳು - ಅನಿರ್ವಾಚ್ಯವಾಗಿರುವುದರಿಂದ ನಿವೃತ್ತಿಯಾಗಬಹುದು.

ತತ್ವವಾದಿಗಳು - ಇದೂ ಕೂಡ ತಪ್ಪು. ಹಾಗಾದರೆ ಜಗತ್ತಿನಂತೆ ಬ್ರಹ್ಮನಿಗೂ ಕೂಡ ಅನಿರ್ವಾಚ್ಯತ್ವವು ಬರಬೇಕಾಗುತ್ತದೆ.

ಅದ್ವೈತಿಗಳು - ಬ್ರಹ್ಮನಿಗೆ ಅನಿರ್ವಾಚ್ಯತ್ವವು ಬರಬಾರದು. ಜಗತ್ತಿಗೆ ಮಾತ್ರ ಅನಿರ್ವಾಚ್ಯತ್ವವನ್ನು ಹೇಳಬೇಕು.

ತತ್ವವಾದಿಗಳು - ಇದು ಸಾಧ್ಯವೇ ಇಲ್ಲ. ಬ್ರಹ್ಮನಿಂದ ಜಗತ್ತಿಗೆ ಭೇದವಿಲ್ಲದ್ದರಿಂದ ಬ್ರಹ್ಮನು ಸ್ವತಃ ಬೇರೆಯಾಗಲು ಸಾಧ್ಯವಿಲ್ಲ. ಆದ್ದರಿಂದ ಜಗತ್ತಿನಂತೆ ಬ್ರಹ್ಮನೂ ಕೂಡ ಅನಿರ್ವಾಚ್ಯ-ನಾಗುತ್ತಾನೆ. ಹಾಗೇ ಅಭೇದವಿಲ್ಲದಿದ್ದರೆ ಅಭೇದವುಳ್ಳವನೂ ಕೂಡ ಆಗಲು ಸಾಧ್ಯವಿಲ್ಲ. ಪರಿಶೇಷಾತ್ ಜಗತ್ತಿನಂತೆ ಬ್ರಹ್ಮನೂ ಕೂಡ ಅನಿರ್ವಾಚ್ಯನೇ ಆಗುತ್ತಾನೆ. ಇದು ನಿಮ್ಮ ಸಿದ್ಧಾಂತಕ್ಕೆ ವಿರುದ್ಧ.

ವಿವರಣೆ - ಅಶ್ವ ಮತ್ತು ಗಜಗಳಿಗೆ ಪರಸ್ಪರ ಭೇದವಿದೆ. 'ಅಶ್ವಪ್ರತಿಯೋಗಿಕ ಗಜಧರ್ಮಿಕಭೇದವಾನ್ ಗಜಃ' ಎಂದು ಹೇಳಿದಾಗ ಗಜವು ಭೇದಿ ಎನಿಸುತ್ತದೆ. 'ಗಜಪ್ರತಿಯೋಗಿಕ ಅಶ್ವಧರ್ಮಿಕಭೇದವಾನ್ ಅಶ್ವಃ' ಎಂದು ಹೇಳಿದಾಗ ಅಶ್ವವು ಭೇದಿ ಎನಿಸುತ್ತದೆ. ಪ್ರಕೃತ ಬ್ರಹ್ಮನಿಂದ ಜಗತ್ತಿಗೆ ಭೇದವಿಲ್ಲವೆಂದು ಅದ್ವೈತಿಗಳು ಹೇಳುತ್ತಿದ್ದಾರೆ. ಆದ್ದರಿಂದ ಬ್ರಹ್ಮನು 'ಜಗತ್‌ಪ್ರತಿಯೋಗಿಕಭೇದವತ್' ಆಗಲು ಸಾಧ್ಯವಿಲ್ಲ. ಆದ್ದರಿಂದಲೇ ಭೇದವುಳ್ಳವನೆಂದು ಹೇಳಲು ಸಾಧ್ಯವಿಲ್ಲ. ಜಗತ್ತು ಹೇಗೆ ಅನಿರ್ವಾಚ್ಯವಾಗುತ್ತದೋ, ಬ್ರಹ್ಮನೂ ಕೂಡ ಅನಿರ್ವಾಚ್ಯನೇ ಆಗುತ್ತಾನೆ ಎಂಬುದಾಗಿ 'ನಹಿ' ಸ್ವತಃ ಇತ್ಯಾದಿ ವಾಕ್ಯದ ಅರ್ಥವನ್ನು ತಿಳಿಯಬೇಕು.

### ಅದ್ವೈತಿಗಳ ತಪ್ಪು ಕಲ್ಪನೆ

**तत्वप्रदीपः – विद्यया च विपद्येत । प्रथमं ब्रह्मणः प्रकृतित्वं कल्पयित्वा ततस्तदज्ञानस्य कल्प्यत इति च क्लिष्टेयं कल्पना । नच तदपि कल्प्यं, अप्रमाणत्वात् ।।**

ಮತ್ತು ಅನಿರ್ವಾಚ್ಯನಾದ ಬ್ರಹ್ಮನು ವಿದ್ಯೆಯಿಂದ ಬಾಧಿತನಾಗಬೇಕಾಗುತ್ತದೆ. ಯಾವುದು ಅನಿರ್ವಾಚ್ಯವೋ ಅದು ಯಥಾರ್ಥಜ್ಞಾನದಿಂದ ಬಾಧಿತವಾಗುತ್ತದೆಂದು ನೀವೇ ಹೇಳಿರುತ್ತೀರಿ.

ಅದ್ವೈತಿಗಳು - ಬ್ರಹ್ಮನಿಗೆ ಮೊದಲು ಉಪಾದಾನತ್ವವನ್ನು ಕಲ್ಪನೆ ಮಾಡಿ, ಅನಂತರ ಅಜ್ಞಾನಕ್ಕೆ ಉಪಾದಾನತ್ವವನ್ನು ಕಲ್ಪನೆ ಮಾಡುತ್ತೇವೆ. ಆದ್ದರಿಂದ ಹಿಂದಿನ ಯಾವುದೇ ದೋಷಗಳಿಗೆ ಅವಕಾಶವಿಲ್ಲ.

ತತ್ವವಾದಿಗಳು - ಅರ್ಥ ಆಗದೇ ಇರುವವರು ಹೇಳುವ ಮಾತುಗಳಿವು. ಇವೆಲ್ಲವು ಕಷ್ಟವಾದ ಕಲ್ಪನೆಗಳು.

ಅದ್ವೈತಿಗಳು - ಕಷ್ಟವಾದರೂ ಸರಿ ಅಂಗೀಕಾರ ಮಾಡುತ್ತೇವೆ ಏನು ತಪ್ಪು ?

ತತ್ವವಾದಿಗಳು - ನೀವು ಹೇಳುವ ವಿಷಯದಲ್ಲಿ ಯಾವುದೇ ಆಧಾರವಿಲ್ಲ. ಅಪ್ರಾಮಾಣಿಕವಾದದ್ದನ್ನು ಕಲ್ಪನೆ ಮಾಡಿದ ದೋಷ ನಿಮಗೆ ಬರುತ್ತದೆ.

### ಪ್ರತಿಜ್ಞಾದೃಷ್ಟಾಂತಾನುಪರೋಧವೂ ಕೂಡ ಆಧಾರವಲ್ಲ

**तत्वप्रदीपः – प्रतिज्ञादृष्टान्तानुपरोधादेवमाश्रीयत इति चेत्, तदप्ययुक्तम्। यदि हि श्रुतौ जगदुपादानत्वमभिप्रेष्यत दृष्यान्तोऽपि तर्हि तादृगुदाहरिष्यत । नहि निखिलमृण्मयं कार्यजातं घटकरकमणिकमल्लकशरावोदञ्जनादिकमेकमृत्पिण्डविकारो भवति । विकारविवक्षायां तु मृदा विज्ञातयेत्येवावक्ष्यत, एकशब्दः पिण्डशब्दश्च व्यर्थः स्यात् ।**

ಅದ್ವೈತಿಗಳು - ಪ್ರತಿಜ್ಞಾದೃಷ್ಟಾಂತಾನುಪರೋಧದಿಂದ ಹೀಗೆ ಕಲ್ಪನೆ ಮಾಡುತ್ತೇವೆ - ಶ್ರುತಿಯಲ್ಲಿ 'ಯೇನಾಶ್ರುತಂ ಶ್ರುತಂ ಭವತಿ' ಎಂಬ ಪ್ರತಿಜ್ಞಾವಾಕ್ಯಕ್ಕೂ 'ಸರ್ವಂ ಮೃಣ್ಮಯಂ

ವಿಜ್ಞಾತಂ ಸ್ಯಾತ್' ಇತ್ಯಾದಿ ದೃಷ್ಟಾಂತವಾಕ್ಯಕ್ಕೂ ಆನುಗುಣ್ಯವನ್ನು ತೋರಿಸಬೇಕೆಂದರೆ ಬ್ರಹ್ಮನಿಗೆ ಜಗದುಪಾದಾನತ್ವವನ್ನು ಅಂಗೀಕಾರ ಮಾಡಲೇಬೇಕು.

ತತ್ವವಾದಿಗಳು - ಇದು ಅಯುಕ್ತ. ಒಂದು ವೇಳೆ ಶ್ರುತಿಯಲ್ಲಿ ಜಗದುಪಾದಾನತ್ವವು ಬ್ರಹ್ಮನಿಗೆ ಅಭಿಪ್ರೇತವಾಗಿದ್ದಲ್ಲಿ, ದೃಷ್ಟಾಂತವನ್ನೂ ಕೂಡ ಅದೇ ವಿಷಯಕ್ಕಾಗಿ ನೀಡಬೇಕಿತ್ತು. ಅದನ್ನು ಬಿಟ್ಟು ಘಟ, ಕರಕ, ಮಣಿಕ, ಮಲ್ಲಕ, ಶರಾವ, ಉದಂಚನ ಇದೇ ಮೊದಲಾದ ಸಕಲ ಮಣ್ಣಿನ ಕಾರ್ಯಗಳು ಒಂದೇ ಮೃತ್ಪಿಂಡದ ವಿಕಾರವಾಗಿರುವುದು ಕಂಡಿರುವುದೇ ಇಲ್ಲ. ಇಂಥ ದೃಷ್ಟಾಂತವನ್ನು ಶ್ರುತಿಯಲ್ಲಿ ನೀಡಬಾರದಿತ್ತು. ಬ್ರಹ್ಮನ ವಿಕಾರವೇ ಶ್ರುತಿಗೆ ವಿವಕ್ಷಿತವಾಗಿದ್ದಲ್ಲಿ 'ಮೃದಾ ವಿಜ್ಞಾತಯಾ' ಎಂದು ವಾಕ್ಯಪ್ರಯೋಗವಿರಬೇಕಿತ್ತು. ಅಷ್ಟೇ ಅಲ್ಲದೇ ಏಕ ಎಂಬ ಶಬ್ದ, ಪಿಂಡ ಎಂಬ ಶಬ್ದವನ್ನೂ ಕೂಡ ಹೇಳುವ ಅವಶ್ಯಕತೆಯಿರಲಿಲ್ಲ. ಈ ಎಲ್ಲದರಿಂದ ವಿಕಾರವು ವಿವಕ್ಷಿತವಲ್ಲ. ಪ್ರಾಧಾನ್ಯವೇ ವಿವಕ್ಷಿತವೆಂಬುದು ಸ್ಪಷ್ಟವಾಗುತ್ತದೆ.

### ವಾಚಾರಂಭಣ ಶಬ್ದಕ್ಕೆ ಮಿಥ್ಯಾ ಎಂದರ್ಥವಲ್ಲ

**तत्वप्रदीपः – ''वाचाऽऽरम्भणं विकारः'' इति विकारस्य मिथ्यात्वमुक्त्वा मृत्तिकायाः सत्यत्ववचनात्प्रकृतिविकारभावविवक्षेति चेन्न । नहि वाचारम्भणशब्दो मिथ्यार्थे प्रसिद्धः । वाचाऽस्तीत्यारभ्यत एव केवलं न तथा युक्तितो वक्तुं शक्यते । अतो वाचारम्भणमिति चेन्न । परमार्थापेक्षया निर्वाच्यमित्यपि वक्तुमशक्यत्वात् । शक्यत्वे मोक्षे च तदनुवृत्तिप्रसक्तेः ।**

ಅದ್ವೈತಿಗಳು - 'ವಾಚಾऽऽರಂಭಣಂ ವಿಕಾರಃ' ಎಂಬುದಾಗಿ ಶ್ರುತಿಯು ವಿಕಾರಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದೆ. ವಿಕಾರಿಯಾದ ಮೃತ್ತಿಕೆಗೆ ಮಿಥ್ಯಾತ್ವವನ್ನು ಹೇಳುತ್ತಿದೆ. ಆದ್ದರಿಂದ ಪ್ರಕೃತಿಯು ವಿಕಾರವಾಗಿರುವುದರಿಂದ ಮಿಥ್ಯಾಭೂತವಾಗಿದೆ. ಇದಕ್ಕೆ ಕಾರಣನಾಗಿರುವಂಥ ಬ್ರಹ್ಮನು ಸತ್ಯನಾಗಿದ್ದಾನೆ. ಹೀಗೆ ಶ್ರುತಿಯಿಂದಲೇ ಜಗನ್ಮಿಥ್ಯಾತ್ವವು ಸಿದ್ಧವಾಗಿದೆ.

ತತ್ವವಾದಿಗಳು - ಇದು ತಪ್ಪು. 'ವಾಚಾऽऽರಂಭಣಂ' ಎಂಬ ಶಬ್ದವು 'ಮಿಥ್ಯಾ' ಎಂಬರ್ಥದಲ್ಲಿ ಪ್ರಸಿದ್ಧವೇ ಆಗಿರುವುದಿಲ್ಲ. ನೀವು ಶ್ರುತಿಗೆ ಕಪೋಲಕಲ್ಪಿತವಾದ ಅರ್ಥವನ್ನು ಹೇಳುತ್ತಿದ್ದೀರಿ.

ಅದ್ವೈತಿಗಳು - 'ವಾಚಾಽಸ್ತೀತ್ಯಾರಭ್ಯತೇ ಏವ ಕೇವಲಂ ನ ತಥಾ ಯುಕ್ತಿತೋ ವಕ್ತುಂ ಶಕ್ಯತೇ । ಅತೋ ವಾಚಾರಂಭಣಮ್' 'ಮಾತಿನಿಂದ ಕೇವಲ ಇದೆ ಎಂಬ ವ್ಯವಹಾರಕ್ಕೆ ವಿಷಯವಾಗಿದೆ. ಯುಕ್ತಿಯಿಂದ ಇದನ್ನು ಸಮರ್ಥನೆ ಮಾಡಲು ಬರುವುದಿಲ್ಲ. ಆದ್ದರಿಂದ 'ವಾಚಾರಂಭಣ' ಎನಿಸುತ್ತದೆ'. ಹೀಗೆ ನಿಷ್ಪತ್ತಿ ಮಾಡಿದಾಗ 'ವಾಚಾರಂಭಣ' ಎಂಬ ಶಬ್ದಕ್ಕೆ ಮಿಥ್ಯಾ ಎಂಬರ್ಥವು ತಿಳಿಯುತ್ತದಲ್ಲವೇ ?

ತತ್ತ್ವವಾದಿಗಳು - ಇದೂ ಕೂಡ ತಪ್ಪು. ವಾಸ್ತವಿಕವಾಗಿ ನಿಮಗೆ ಅನಿರ್ವಾಚ್ಯ ಎಂಬರ್ಥವನ್ನೂ ಕೂಡ ವಾಚಾರಂಭಣ ಶಬ್ದದಿಂದ ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ಹಾಗೇನಾದರೂ ಅನಿರ್ವಾಚ್ಯ ಎಂಬರ್ಥವನ್ನು ವಿವಕ್ಷಿಸಿದರೆ ಮೋಕ್ಷದಲ್ಲೂ ಕೂಡ ಅನಿರ್ವಾಚ್ಯವಾದದ್ದು ಅನುವೃತ್ತಿ ಆಗುವ ಪ್ರಸಂಗ ಬರುತ್ತದೆ.

ವಿಶೇಷ ವಿಚಾರ - ಮುದ್ರಿತ ಪುಸ್ತಕಗಳಲ್ಲಿ 'ಪರಮಾರ್ಥಾಪೇಕ್ಷಯಾ ನಿರ್ವಾಚ್ಯಮಿತ್ಯಪಿ ವಕ್ತುಮಶಕ್ಯತ್ವಾತ್' ಎಂಬ ಪಾಠವಿದೆ. ಈ ಪಾಠವನ್ನು ವಿವಕ್ಷಿಸಿದರೆ ಈ ವಾಕ್ಯಕ್ಕೆ ಅರ್ಥ ಹೇಳುವುದು ಬಹಳ ಕಠಿಣ. ಅದಕ್ಕಾಗಿ 'ಪರಮಾರ್ಥಾಪೇಕ್ಷಯಾ ಅನಿರ್ವಾಚ್ಯಮ್ ಇತ್ಯಪಿ ವಕ್ತುಮಶಕ್ಯತ್ವಾತ್' ಎಂಬುದಾಗಿ ಪದವಿಭಾಗವನ್ನು ಮಾಡಿಕೊಳ್ಳಬೇಕು. ಆಗ ಮಾತ್ರ ಈ ವಾಕ್ಯಕ್ಕೆ ಹಾಗೂ 'ಶಕ್ಯತ್ವೇ ಮೋಕ್ಷೇ ಚ ತದನುವೃತ್ತಿಪ್ರಸಕ್ತೇಃ' ಎಂಬ ಮುಂದಿನ ವಾಕ್ಯಕ್ಕೆ ಅರ್ಥವನ್ನು ಹೇಳಲು ಸಾಧ್ಯ. ಇಲ್ಲಿರುವ 'ಪರಮಾರ್ಥಾಪೇಕ್ಷಯಾ' ಎಂಬ ಪದಕ್ಕೆ ಬ್ರಹ್ಮನನ್ನು ವಿವಕ್ಷಿಸಿ ಎಂಬರ್ಥವನ್ನು ಇಟ್ಟುಕೊಂಡರೂ ಕೂಡ ಸುಲಭವಾಗಿ ವಾಕ್ಯದ ಅರ್ಥವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ವಾಸ್ತವಿಕವಾಗಿ ಎಂಬರ್ಥವನ್ನಷ್ಟೇ ವಿವಕ್ಷಿಸಬೇಕು. ಆಗ ಈ ವಾಕ್ಯದ ಅರ್ಥವನ್ನು ಹೀಗೆ ಹೇಳಿದಂತಾಗುತ್ತದೆ - ಮಾಯಾವಾದಿಗಳು ಜಗತ್ತನ್ನು ಅನಿರ್ವಾಚ್ಯ ಎನ್ನುತ್ತಾರೆ. ವಾಸ್ತವಿಕವಾಗಿ ಜಗತ್ತನ್ನು ಅನಿರ್ವಾಚ್ಯ ಎಂದೂ ಕೂಡ ಹೇಳಲು ಬರುವುದಿಲ್ಲ. ಒಂದು ವೇಳೆ ಜಗತ್ತನ್ನು ಅನಿರ್ವಾಚ್ಯ ಎಂದು ಹೇಳಲು ಸಾಧ್ಯವಿದೆ ಎಂಬುದಾಗಿ ಅದ್ವೈತಿಯು ಹೇಳಿದರೆ ಮೋಕ್ಷದಲ್ಲೂ ಕೂಡ ಇದು ಅನುವೃತ್ತವಾಗಬೇಕಾಗುತ್ತದೆ. ಏಕೆಂದರೆ ನಿರ್ವಾಚ್ಯಕ್ಕೆ ಅರ್ಹವಾದದ್ದು ಮೋಕ್ಷದಲ್ಲೂ ಇರುತ್ತದೆಂದು ಅದ್ವೈತಿಗಳು ಒಪ್ಪಿದ್ದಾರೆ.

### ಶ್ರುತಿಗೆ ವ್ಯಾಖ್ಯಾನ ಮಾಡಲು ಬಾರದ ಅದ್ವೈತಿಗಳು

**तत्वप्रदीपः – वाचारम्भणमात्रमिति चाश्रुतकल्पना । नामधेयमात्रमिति च पुनरुक्तिः । अस्मिन्पक्षे ''मृत्तिकैव सत्य'' इति वक्तव्य इतिशब्दो**

**लिङ्गव्यत्यासश्च व्यर्थः स्यात् । नच सत्यज्ञानान्मिथ्या ज्ञातं भवति । अधिष्ठानज्ञानादध्यस्तस्य निवृत्तेरेवेष्टत्वात् । कथं च विकारभावादेव मिथ्यात्वं सम्प्रतिपद्येत ? विनाशित्वेनेति चेत्**

ಅದ್ವೈತಿಗಳಿಗೆ ಮತ್ತೊಂದು ದೋಷ. 'ವಾಚಾರಂಭಣಮಾತ್ರಮ್' ಎಂಬುದಾಗಿ ಶ್ರುತಿಯಲ್ಲಿ ಇಲ್ಲದ 'ಮಾತ್ರ' ಎಂಬ ಪದವನ್ನು ಕಲ್ಪನೆ ಮಾಡಬೇಕು. ಆದ್ದರಿಂದ ಅಶ್ರುತಕಲ್ಪನಾದೋಷವು ಪ್ರಾಪ್ತವಾಗುತ್ತದೆ. ಹಾಗೂ 'ನಾಮಧೇಯಮಾತ್ರಮ್' ಎಂಬುದು ಪುನರುಕ್ತವಾಗಿದೆ. 'ವಾಚಾರಂಭಣಮಾತ್ರಮ್' ಎಂಬುದರಿಂದ ಮಿಥ್ಯಾತ್ವವು ಸಿದ್ಧವಾಗುವಾಗ ಪುನಃ 'ನಾಮಧೇಯಮಾತ್ರಮ್' ಎಂದು ಹೇಳಿದರೆ ಹೇಳಿದ್ದನ್ನೇ ಹೇಳಿದಂತಾಗುತ್ತದೆ. ಹಾಗೂ ಈ ಪಕ್ಷದಲ್ಲಿ 'ಮೃತ್ತಿಕೈವ ಸತ್ಯಾ' ಎಂದಷ್ಟೇ ಹೇಳಿದರೆ ಸಾಕು. ಶ್ರುತಿಯಲ್ಲಿರುವ 'ಇತಿ' ಶಬ್ದವು ವ್ಯರ್ಥವಾಗಿದೆ. ಹಾಗೂ 'ಸತ್ಯಂ' ಎಂಬುದನ್ನು 'ಸತ್ಯಾ' ಎಂಬುದಾಗಿ ಲಿಂಗವ್ಯತ್ಯಾಸವನ್ನೂ ಕೂಡ ಮಾಡಬೇಕಾಗುತ್ತದೆ.

ಅದ್ವೈತಿಗಳು - ಸತ್ಯಜ್ಞಾನದಿಂದ ಮಿಥ್ಯಾಭೂತವಾದದ್ದು ಜ್ಞಾತವಾಗುತ್ತದೆ. ಆದ್ದರಿಂದ ಇತಿಶಬ್ದಾದಿಗಳಿಗೆ ವೈಯರ್ಥ್ಯವನ್ನು ಹೇಗೆ ಹೇಳುವಿರಿ ?

ತತ್ವವಾದಿಗಳು - ಸತ್ಯಜ್ಞಾನದಿಂದ ಮಿಥ್ಯಾಭೂತವಾದದ್ದು ನಿವೃತ್ತವಾಗುತ್ತದೆಂದು ಹೇಳಬೇಕು ಹೊರತು, ಮಿಥ್ಯಾಭೂತವಾದದ್ದು, ಜ್ಞಾತವಾಗುತ್ತದೆಂದು ಹೇಳಬಾರದು. ಅಧಿಷ್ಠಾನಜ್ಞಾನದಿಂದ ಅಧ್ಯಸ್ತಜ್ಞಾನಕ್ಕೆ ನಿವೃತ್ತಿಯೇ ಎಲ್ಲರಿಗೂ ಇಷ್ಟವಾಗಿದೆ. ಮತ್ತು ವಿಕಾರವಿದೆಯೆಂಬ ಕಾರಣದಿಂದ ಮಿಥ್ಯಾತ್ವವನ್ನು ಏಕೆ ಕಲ್ಪನೆ ಮಾಡುತ್ತಿರುವಿರಿ?

ಅದ್ವೈತಿಗಳು - ವಿನಾಶಿಯಾಗಿರುವುದರಿಂದ ಮಿಥ್ಯಾತ್ವವನ್ನು ಕಲ್ಪನೆ ಮಾಡುತ್ತೇವೆ.

### ಅದ್ವೈತಿಗಳಿಗೆ ದೃಷ್ಟಾಂತವೇ ಕೂಡುವುದಿಲ್ಲ

**तत्वप्रदीपः – मैवम् । बाधादेव मिथ्यात्वप्रतिपत्तेः । अत एव हि रजतादिदृष्टान्त उपादित्सितः । नच घटादेर्बाधः । तस्मान्नायं मिथ्यात्वे दृष्टान्तः।।**

ತತ್ವವಾದಿಗಳು - ಇದೂ ಕೂಡ ತಪ್ಪು. ಬಾಧದಿಂದಲೇ ಮಿಥ್ಯಾತ್ವವು ತಿಳಿಯುತ್ತದೆ. ಹೊರತು, ವಿನಾಶತ್ವದಿಂದಲ್ಲ. ಆದ್ದರಿಂದ ರಜತದ ದೃಷ್ಟಾಂತವೇ ತೆಗೆದುಕೊಳ್ಳಲು ಇಷ್ಟವಾಗಿದೆ. ಮೃತ್ತಿಕೆಯ ದೃಷ್ಟಾಂತವನ್ನು ನೀಡಿದ್ದು ಅನಿಷ್ಟವಾಗಿದೆ. (ಉಪಾದಿತ್ಸಿತಃ= 'ಉಪ

ಇತ್ಯುಪಸರ್ಗಪೂರ್ವಕಾತ್ ಸನ್ನತಾಂತ್ ಕಃ ಪ್ರತ್ಯಯಾಂತಃ ಶಬ್ದಃ' 'ದೃಷ್ಟಾಂತವನ್ನು ತೆಗೆದುಕೊಳ್ಳಲು ಇಷ್ಟವಾಗಿದೆ') ಹಾಗೂ ಘಟಾದಿಗಳಿಗೆ ಬಾಧವೂ ಕೂಡ ಇರುವುದಿಲ್ಲ. ಆದ್ದರಿಂದ ಮಿಥ್ಯಾತ್ವವಿಷಯದಲ್ಲಿ ಘಟಾದಿಗಳ ದೃಷ್ಟಾಂತವೇ ಅಯುಕ್ತವಾಗಿದೆ.

ವಾಚಾರಂಭಣ ಶ್ರುತಿಗೆ ಹೇಗೆ ವ್ಯಾಖ್ಯಾನ ಮಾಡಬೇಕು ?

**तत्वप्रदीपः – किन्तु ''यथा सोम्यैकेन'' इति सादृश्यादेकविज्ञानेन सर्वविज्ञानं निदर्शयति । ''वाचारम्भणम्'' इत्यादिना प्राधान्यात् । वाचारम्भणं विकारात्मकं तस्मादनित्यम् । सारम्भा वाच इत्यर्थः; धर्मधर्म्यभेदात्, साङ्केतिकनामानीत्युक्तं भवति, तान्यनित्यानि ।**

ಆದ್ದರಿಂದ 'ವಾಚಾರಂಭಣ' ಶ್ರುತಿಗೆ ಹೀಗೆ ವ್ಯಾಖ್ಯಾನವನ್ನು ಮಾಡಬೇಕು - 'ಯಥಾ ಸೋಮ್ಯೈಕೇನ' ಎಂಬ ಶ್ರುತಿಯು ಸಾದೃಶ್ಯದ ವಿವಕ್ಷೆಯಿಂದ ಒಂದನ್ನು ತಿಳಿದರೆ ಎಲ್ಲವನ್ನೂ ಕೂಡ ತಿಳಿದಂತಾಗುತ್ತದೆ ಎಂಬುದನ್ನು ದೃಷ್ಟಾಂತಪುರಸ್ಸರವಾಗಿ ಉಪಪಾದನೆ ಮಾಡುತ್ತಿದೆ. 'ವಾಚಾರಂಭಣಮ್' ಇತ್ಯಾದಿ ಶ್ರುತಿಯು ಪ್ರಾಧಾನ್ಯವನ್ನೇ ವಿವಕ್ಷಿಸಿದೆ. ವಾಚಾರಂಭಣವಾದದ್ದು ವಿಕಾರರೂಪವಾಗಿರುವುದರಿಂದ ಅನಿತ್ಯವಾಗಿದೆ. ಮಾತುಗಳು ಉತ್ಪನ್ನವುಳ್ಳವುಗಳಾಗಿವೆ. ಧರ್ಮ ಹಾಗೂ ಧರ್ಮಿಗಳಿಗೆ ಅಭೇದವಿರುವುದರಿಂದ ವಿಕಾರವೆಂದು ಹೇಳಿರುತ್ತಾರೆ. ಒಟ್ಟು ಸಾಂಕೇತಿಕನಾಮಗಳೆಂದು ಹೇಳಿದಂತಾಯಿತು. ಇವುಗಳೆಲ್ಲವೂ ಅನಿತ್ಯವಾಗಿದೆ.

'ಮೃತ್ತಿಕೇತ್ಯೇವ ಸತ್ಯಂ' ಎಂಬುದಕ್ಕೆ ವ್ಯಾಖ್ಯಾನ

**तत्वप्रदीपः – मृत्तिकेति नामधेयमेव सत्यं सततप्राप्तं सदातनं वा, नित्यमित्यर्थः । साधुगुणं प्रधानगुणं प्रधानमिति चोक्तं भवति । प्रधानाज्ञानदप्रधानमपि ज्ञातं भवतीति च लोकव्यवहारः ।। तस्मान्नात्र प्रकृतिविकारभावो विवक्षित इति न ब्रह्मणो जगदुपादानत्वम् । तत्सुष्ठूक्तं नचान्यत्कल्प्यप्रमाणत्वादिति ।।छ।।**

**सततरमणात्त्वी ।।छ।।**

**इति प्रकृत्यधिकरणम्**

ಅಪ್ರಧಾನವಾಗಿರುತ್ತದೆ. ಹೀಗೆ ನೀವು ಶರೀರ ಶಬ್ದವನ್ನು ನಿರ್ವಚನ ಮಾಡುತ್ತೀರಿ. ಈ ನಿರ್ವಚನವನ್ನು ನೋಡಿದಾಗ 'ತದಧೀನತ್ವವನ್ನೇ ಶರೀರತ್ವ' ಎಂದು ಹೇಳಿದಂತಾಗುತ್ತದೆ. ನಾವೂ ಕೂಡ ತದಧೀನತ್ವವನ್ನೇ ಶರೀರತ್ವ ಎಂದು ಹೇಳುತ್ತಿದ್ದೇವೆ. ಆದ್ದರಿಂದ ತದಧೀನತ್ವಕ್ಕಿಂತ ಅತಿರಿಕ್ತವಾದ ಶರೀರತ್ವವನ್ನೇನೂ ನೀವು ಹೇಳಿರುವುದಿಲ್ಲ.

ಹೀಗೆ ಹೇಳಿದ್ದರಿಂದ 'ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ನಾಮರೂಪೇ ವ್ಯಾಕರೋತ್' ಮೂರುಬಗೆಯ ದೇವತೆಗಳು ಅನಿರುದ್ಧರೂಪಿಯಾದ ಪರಮಾತ್ಮನಿಂದ ಪ್ರವೇಶಿಸಲ್ಪಟ್ಟವು. ಅನಂತರ ಅವುಗಳ ನಾಮ ಹಾಗೂ ರೂಪಗಳ ಸೃಷ್ಟಿಯಾಯಿತು. ಹೀಗೆ ಶ್ರುತಿಯಲ್ಲಿ ಈಶ್ವರನ ಪ್ರವೇಶದ ಅನಂತರ ನಾಮ ಹಾಗೂ ರೂಪಗಳ ಸೃಷ್ಟಿಯನ್ನು ಹೇಳಲಾಗಿದೆ. ಆದ್ದರಿಂದ ಸಕಲಶಬ್ದಗಳು ಆಯಾ ಪದಾರ್ಥಗಳ ವಿಶಿಷ್ಟನಾದ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ವಾದವನ್ನು ನಿರಾಕರಿಸಿದಂತಾಯಿತು.

ಏಕೆಂದರೆ ವಿಶೇಷಣದಲ್ಲಷ್ಟೇ ಪ್ರಯೋಗವಿರುತ್ತದೆಂದು ಈಗಾಗಲೇ ನಾವು ಹೇಳಿದ್ದೇವೆ. ಜಡವಾಗಿದೆ, ಕೃಶವಾಗಿದೆ ಇತ್ಯಾದಿ ಶಬ್ದಗಳು ವಿಶೇಷಣವಾದ ಶರೀರದಲ್ಲಷ್ಟೇ ಪ್ರಯೋಗ-ವಿರುತ್ತದೆ. ಅಷ್ಟೇ ಅಲ್ಲದೇ ಇದೇ ಶ್ರುತಿಯಲ್ಲಿಯೂ ದೇವತಾ ಪದವು ವಿಶೇಷಣದಲ್ಲಿ ಪ್ರಯೋಗ ಮಾಡಿರುವುದು ಕಂಡಿದೆ.

ಮತ್ತು 'ಜೀವೇನಾತ್ಮನಾ' ಎಂಬುದಾಗಿ ಶ್ರುತಿಯು ಜೀವಶಬ್ದವನ್ನು ಪ್ರಯೋಗಿಸಿದೆ. ನಿಮ್ಮ ಮತದಲ್ಲಿ ಜೀವಶಬ್ದವು ಜೀವಶರೀರಕನಾದ ಬ್ರಹ್ಮನನ್ನೇ ಪ್ರತಿಪಾದಿಸಬೇಕು. ಆದ್ದರಿಂದ ಜೀವಶಬ್ದದಿಂದ ಜೀವನೇ ಶರೀರವಾಗಿವುಳ್ಳ ಪರಮಾತ್ಮನ ಅನುಪ್ರವೇಶವನ್ನು ನೀವು ಹೇಳಬೇಕು. ಹೊರತು, ಘಟಾದಿಗಳಲ್ಲಿ ಅನುಪ್ರವಿಷ್ಟನಾದ ಪರಮಾತ್ಮನು ಪ್ರತಿಪಾದ್ಯ-ನಾಗುತ್ತಾನೆಂದು ಹೇಳಲು ಸಾಧ್ಯವಾಗುವುದಿಲ್ಲ.

ಅಷ್ಟೇ ಅಲ್ಲದೇ ಜೀವಶರೀರಕನಾದ ಆತ್ಮನಿಗೆ ದೇವತಾದಿಗಳಲ್ಲಿ ಅನುಪ್ರವೇಶವು ಹೇಗೆ ತಾನೇ ಕೂಡುತ್ತದೆ? ಮತ್ತು ಅನುಪ್ರವೇಶದ ಅನಂತರ ನಾಮಕರಣ ಮಾಡಿರುವುದರಿಂದ ಅನುಪ್ರವಿಷ್ಟನಿಗೆ ಆಯಾ ಶಬ್ದಗಳ ಪ್ರತಿಪಾದ್ಯತ್ವ ಬರುವುದಾದರೆ, ಸಂಕಲ್ಪವನ್ನು ಮಾಡಿ ಸೃಷ್ಟಿ ಮಾಡಿರುವುದರಿಂದ ಸಂಕಲ್ಪಕ್ಕಾಗಲೀ, ಸಂಕಲ್ಪ ಮಾಡಿರುವ ವ್ಯಕ್ತಿಯಾಗಲೀ, ಸೃಜ್ಯಕೋಟಿಯಲ್ಲಿ ಸೇರಬೇಕಾಗುತ್ತದೆ. (ಒಂದು ಮನೆಗೆ 'ವೆಂಕಟಾದ್ರಿ' ಎಂದು ಹೆಸರನ್ನಿಟ್ಟು ಮನೆಯ ಒಳಗಡೆ

ಪ್ರವೇಶಿಸಿದಾಗ, ಮನೆಯ ಒಳಗಡೆಯಿರುವ ವ್ಯಕ್ತಿಗೆ 'ವೆಂಕಟಾದ್ರಿ' ಎಂಬ ಶಬ್ದವಾಚ್ಯತ್ವವು ಬರುವುದಿಲ್ಲವೆಂದು ಲೋಕದಲ್ಲಿ ಕಂಡಿದೆ.)

ಅಷ್ಟೇ ಅಲ್ಲದೇ ಹಿಂದಿನ ವಾಕ್ಯದಲ್ಲಿ ಪರಮಾತ್ಮನು ಅನುಪ್ರವೇಶ ಮಾಡುವುದರ ಮೊದಲೇ 'ತತ್ತೇಜೋಽಸೃಜತ ತದಪೋಽಸೃಜತ ತಾ ಅನ್ನಮಸೃಜಂತ' ಇತ್ಯಾದಿಯಾಗಿ 'ತೇಜ', 'ಅಪ್', 'ಅನ್ನ' ಮೊದಲಾದ ನಾಮಗಳ ಸಂಬಂಧವನ್ನು ಹೇಳಲಾಗಿದೆ.

ಆದ್ದರಿಂದ ಶ್ರುತಿಯಲ್ಲಿ ಛಾಂದೋಗ್ಯಭಾಷ್ಯ ಟೀಕೆಯಲ್ಲಿ ಹೇಳಿದ ಪ್ರಕಾರ 'ತೇಜಸ್ಸು', 'ಅಪು', 'ಅನ್ನ' ಮೊದಲಾದವುಗಳ ಅನುಪ್ರವೇಶದ ಅನಂತರ ಉಳಿದ ನಾಮ ಹಾಗೂ ರೂಪಗಳ ಶಕ್ತಿಯನ್ನು ಮಾಡಿದನು ಎಂಬರ್ಥವನ್ನು ವಿವಕ್ಷಿಸಬೇಕು.

ಇಲ್ಲಿಗೆ ಏತೇನಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು, ಮತ್ತು ತಂತ್ರದೀಪಿಕೆ ಹಾಗೂ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಸ್ಮೃತ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

## ಎರಡನೆಯ ಅಧ್ಯಾಯ ಪ್ರಥಮಪಾದ

# ಸ್ಮೃತ್ಯಧಿಕರಣ

## ಬ್ರಹ್ಮಸೂತ್ರ

'ಸ್ಮೃತ್ಯನವಕಾಶದೋಷಪ್ರಸಂಗಃ' ಇತ್ಯಾದಿ ಸೂತ್ರದ ವ್ಯಾಖ್ಯಾನ

**ब्रह्मसूत्रम् – स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ॥**

ಸೂತ್ರಾರ್ಥ - ರುದ್ರ, ಕಪಿಲ ಮೊದಲಾದವರು ಸರ್ವಜ್ಞರಾಗಿದ್ದಾರೆ ಮತ್ತು ಅಪ್ತರಾಗಿದ್ದಾರೆ. ಇವರಿಂದ ರಚಿತವಾದ್ದರಿಂದ ಶೈವಾದಿ ಸ್ಮೃತಿಗಳು ಪ್ರಮಾಣವಾಗಿವೆ ಮತ್ತು ನಿರವಕಾಶವಾಗಿವೆ. ಇವುಗಳಿಗೆ ವಿರುದ್ಧವಾದ ವಿಷ್ಣುಕರ್ತೃತ್ವವನ್ನು ಸಮರ್ಥಿಸುವ ವಿರೋಧವು ಪ್ರಾಪ್ತವಾಗುತ್ತದೆ. ವೇದಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಅಂಥ ವೇದಗಳಿಂದ ವಿಷ್ಣುವಿಗೆ ಜಗತ್‌ಕರ್ತೃತ್ವವು ಸಿದ್ಧವಾಗುವುದಿಲ್ಲ.

ಪಾಶುಪತಾದಿಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರಾದಿಸ್ಮೃತಿಗಳು ಮಹಾವಿಷ್ಣುವಿನಿಂದಲೇ ರಚಿತವಾಗಿವೆ. ಮತ್ತು ಶ್ರುತಿಸಂವಾದಿಗಳಾಗಿವೆ. ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ ವಿಷ್ಣುವಿನಿಂದ ಪ್ರಣೀತವಾದ್ದರಿಂದ ಪಾಶುಪತಾದಿಸ್ಮೃತಿಗಳಿಗಿಂತಲೂ ಅತ್ಯಂತ ಬಲಿಷ್ಠವಾಗಿವೆ. ಇಂಥ ಪಂಚರಾತ್ರಾದಿಸ್ಮೃತಿಗಳಿಂದ ಪಾಶುಪತಾದಿಸ್ಮೃತಿಗಳಿಗೆ ವಿರೋಧ ಬರುವುದರಿಂದ

ಅಪ್ರಾಮಾಣ್ಯವೆಂಬ ದೋಷವು ಪ್ರಾಪ್ತವಾಗುತ್ತದೆ. ಆದರಿಂದ ರುದ್ರಾದಿಗಳಿಗೆ ಜಗತ್‌ಕರ್ತೃತ್ವವೂ ಕೂಡ ಸಿದ್ಧವಾಗುವುದಿಲ್ಲ. ವಿಷ್ಣುವೇ ಜಗತ್‌ಕರ್ತೃವಾಗಿದ್ದಾನೆಂದು ಸಿದ್ಧವಾಗುತ್ತದೆ.

ಅರ್ಥ -- ಯಾವ ಕಾರಣದಿಂದ, ಸ್ಮೃತ್ಯನವಕಾಶದೋಷ ಪ್ರಸಂಗಃ, ಸ್ಮೃತಿ = ಪಾಶುಪತಾದಿ ಸ್ಮೃತಿಗಳಿಗೆ, ಅನವಕಾಶ = ಶ್ರುತಿಗಳು ವಿಷ್ಣುವಿನ ಜಗತ್‌ಕರ್ತೃತ್ವವಿಷಯದಲ್ಲಿ ಪ್ರಮಾಣವಾಗುವುದಾದರೆ ಅವುಗಳ ವಿರೋಧವು ಪಾಶುಪತಾದಿಸ್ಮೃತಿಗಳಿಗೆ ಬರುವುದರಿಂದ ದೋಷಪ್ರಸಂಗಃ = ಅಪ್ರಾಮಾಣ್ಯವೆಂಬ ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಗಳಿಗೆ ವಿಷ್ಣುವಿನ ಜಗತ್‌ಕಾರಣತ್ವವಿಷಯದಲ್ಲಿ ತಾತ್ಪರ್ಯವನ್ನು ಹೇಳಬಾರದು. ಹೊರತಾಗಿ, ಶಿವಾದಿಗಳಲ್ಲಿ ಜಗತ್‌ಕರ್ತೃತ್ವವಿಷಯದಲ್ಲಿಯೇ ತಾತ್ಪರ್ಯವನ್ನು ಹೇಳಬೇಕು. ಇತಿ ಚೇನ್ನ = ಇದು ತಪ್ಪು. ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್, ಅನ್ಯ ಸ್ಮೃತಿ = ಪಾಶುಪತಾದಿಗಳಿಗಿಂತ ಭಿನ್ನವಾದ ಶ್ರುತಿಸಂವಾದವಿರುವ ರುದ್ರಾದಿಗಳಿಗಿಂತಲೂ ಸರ್ವಜ್ಞತಮವಾದ ಮಹಾವಿಷ್ಣುವಿನಿಂದ ಪ್ರಣೀತವಾದ ಪಂಚರಾತ್ರಾದಿಸ್ಮೃತಿಗಳು, ಅನವಕಾಶ = ರುದ್ರಾದಿಗಳ ಜಗತ್‌ಕರ್ತೃತ್ವವಿಷಯದಲ್ಲಿ ಪಂಚರಾತ್ರಾದಿಸ್ಮೃತಿಗಳಿಗೆ ತಾತ್ಪರ್ಯವಿರುವುದಿಲ್ಲ. ಆದ್ದರಿಂದ ಪಂಚರಾತ್ರಾದಿ ಸ್ಮೃತಿಗಳಿಗೆ ವಿರುದ್ಧವಾದ, ಶೈವಾದಿಸ್ಮೃತಿಗಳಿಗೆ ದೋಷಪ್ರಸಂಗಾತ್ = ಅಪ್ರಾಮಾಣ್ಯವೆಂಬ ದೋಷದ ಅತ್ಯಂತವಾದ ಸಂಬಂಧವಿರುವುದರಿಂದ ಪಾಶುಪತಾದಿಸ್ಮೃತಿಗಳ ವಿರೋಧವು ಅಕಿಂಚಿತ್ಕರವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಪ್ರಥಮಾಧ್ಯಾಯದ ಪ್ರಮೇಯದಲ್ಲಿ ವಿರೋಧ ಪರಿಹಾರ

**ब्रह्मसूत्रभाष्यम् – ।। उक्तेऽर्थेऽविरोधं दर्शयत्यनेनाध्यायेन । प्रथमपादे युक्त्यविरोधम् । प्रथमतः स्मृत्यविरोधं दर्शयति -**

ಅನುವಾದ - ಪ್ರಥಮಾಧ್ಯಾಯದಲ್ಲಿ ಜಗತ್ಕಾರಣನಾದ ವಿಷ್ಣುವೇ ಸಕಲಶಾಸ್ತ್ರಪ್ರತಿಪಾದ್ಯನೆಂದು ನಿರ್ಣಯಿಸಲಾಯಿತು. ಈ ವಿಷಯದಲ್ಲಿ ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಲು ಎರಡನೆಯ ಅಧ್ಯಾಯವು ಹೊರಡುತ್ತಿದೆ. ಪ್ರಥಮಪಾದದಲ್ಲಿ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾರೆ. ಅದರಲ್ಲಿಯೂ ಮೊದಲನೆಯ ಅಧಿಕರಣದಲ್ಲಿ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಸಮನ್ವಯಾಧ್ಯಾಯದಿಂದ ಅವಿರೋಧಾಧ್ಯಾಯವು ಸಂಗತವಾಗಿದೆ ಎಂದು ತಿಳಿಸಲು ಅವಿರೋಧಾಧ್ಯಾಯದ ಸಮಗ್ರ ತಾತ್ಪರ್ಯವನ್ನು ತೋರಿಸುತ್ತಿದ್ದಾರೆ - ಉಕ್ತೇऽರ್ಥೇ = ಜಗತ್ಕಾರಣನಾದ ಮಹಾವಿಷ್ಣುವಿನಲ್ಲಿ ಸಕಲ ಶಾಸ್ತ್ರಗಳು ಸಮನ್ವಯವಾಗುತ್ತವೆ ಎಂಬ ಹಿಂದಿನ ಅಧ್ಯಾಯದಲ್ಲಿ ನಿರೂಪಿತವಾದ ವಿಷಯದಲ್ಲಿ, ಅವಿರೋಧಂ = ಯುಕ್ತಿ, ಸಮಯ, ಶ್ರುತಿ , ಯುಕ್ತಿ ಸಹಿತ ಶ್ರುತಿ ಇವುಗಳ ಅವಿರೋಧವನ್ನು, ಅನೇನ = ಎರಡನೆಯ, ಅಧ್ಯಾಯೇನ = ಅವಿರೋಧಾಧ್ಯಾಯದಿಂದ, ದರ್ಶಯತಿ = ಸೂತ್ರಕಾರರು ತೋರಿಸುತ್ತಿದ್ದಾರೆ. ಪ್ರಥಮಪಾದೇ = ಮೊದಲನೆಯ ಪಾದದಲ್ಲಿ, ಯುಕ್ತ್ಯವಿರೋಧಂ = ಯುಕ್ತಿಯ ವಿರೋಧ ಪರಿಹಾರವನ್ನು ಮಾಡಿದ್ದಾರೆ. ಪ್ರಥಮತಃ = ಮೊದಲನೆಯ ಅಧಿಕರಣದಲ್ಲಿ, ಸ್ಮೃತ್ಯವಿರೋಧಂ = ಸ್ಮೃತಿಯ ವಿರೋಧಪರಿಹಾರವನ್ನು, ದರ್ಶಯತಿ = ತೋರಿಸುತ್ತಿದ್ದಾರೆ.

ಪ್ರಥಮಾಧ್ಯಾಯದ ಪ್ರಮೇಯಕ್ಕೆ ಪಾಶುಪತಾದಿ ಸ್ಮೃತಿಗಳ ವಿರೋಧ

**ब्रह्मसूत्रभाष्यम्–स्मृत्यनवकाशदोषप्रसङ्गइतिचेन्नान्यस्मृत्यनवकाशदोषप्रसङ्गात् ॥१॥**

**सर्वज्ञा हि रुद्रादयः । अतस्तेषां वचनविरोधेऽप्रामाण्यमेव स्यादिति चेत् – न**

ಅನುವಾದ - ರುದ್ರ, ಕಪಿಲ ಮೊದಲಾದವರು ಸರ್ವಜ್ಞರಾಗಿದ್ದಾರೆ. ಅಂಥ ಸರ್ವಜ್ಞರಿಂದ ರಚಿತವಾದ ಪಾಶುಪತಾದಿ ಸ್ಮೃತಿಗಳ ವಿರೋಧವು ಶ್ರುತಿಗಳಿಗೆ ಪ್ರಾಪ್ತವಾಗುತ್ತದೆ. ಆದ್ದರಿಂದ ವೇದಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು.

ಪ್ರತಿಪದಾರ್ಥ -- ಪೂರ್ವಪಕ್ಷಾದಿಗಳನ್ನು ತೋರಿಸಲು ಸೂತ್ರವನ್ನು ಉಪನ್ಯಾಸ ಮಾಡುತ್ತಿದ್ದಾರೆ 'ಸ್ಮೃತಿ' ಇತ್ಯಾದಿಯಾಗಿ. ರುದ್ರಾದ್ಯಃ = ಶಿವ, ಕಪಿಲ ಮೊದಲಾದವರು ಸರ್ವಜ್ಞಾಃ = ಸರ್ವಜ್ಞರು, ಅತಃ = ಆದ್ದರಿಂದ, ತೇಷಾಂ = ಆ ರುದ್ರಾದಿಗಳ, ವಚನವಿರೋಧೇ = ಪಾಶುಪತಾದಿಸ್ಮೃತಿವಚನಗಳ ವಿರೋಧವು ಪ್ರಾಪ್ತವಾದರೆ,

ಅಪ್ರಾಮಾಣ್ಯಮೇವ = ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವ ಶ್ರುತಿಗಳಿಗೆ ಅಪ್ರಾಮಾಣ್ಯವೇ, ಸ್ಯಾತ್ = ಉಂಟಾಗುತ್ತದೆ. ಇತಿ ಚೇತ್ = ಹೀಗೆ ಆಕ್ಷೇಪ ಮಾಡಿದರೆ.

## ಪ್ರಥಮಾಧ್ಯಾಯದ ಪ್ರಮೇಯಕ್ಕೆ ಪಂಚರಾತ್ರಾದಿ ಸ್ಮೃತಿಗಳ ಬೆಂಬಲ

**ब्रह्मसूत्रभाष्यम्—अन्यस्मृतीनां विष्ण्वादिभिर्नितरां सर्वज्ञैरेव कृतत्वाच्छ्रुतेराधिक्यं च सिद्ध्यति ।।१।।**

ಅನುವಾದ - ಇದು ಸರಿಯಲ್ಲ. ಏಕೆಂದರೆ ಪಂಚರಾತ್ರಾದಿಸ್ಮೃತಿಗಳು ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ ಮಹಾವಿಷ್ಣುವಿನಿಂದ ರಚಿತವಾಗಿವೆ. ಅಂಥ ಪಂಚರಾತ್ರಾದಿ ಸ್ಮೃತಿಗಳಿಗೆ ಶ್ರುತಿಸಂವಾದವಿರುವುದರಿಂದ ಹೆಚ್ಚಿನ ಪ್ರಾಮಾಣ್ಯವಿದೆ.

ಪ್ರತಿಪದಾರ್ಥ -- ಸಿದ್ಧಾಂತಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ - ಅನ್ಯಸ್ಮೃತೀನಾಂ = ಪಾಶುಪತಾದಿ ಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರಾದಿಸ್ಮೃತಿಗಳಿಗೆ, ನಿತರಾಂ ಸರ್ವಜ್ಞೈರೇವ = ರುದ್ರಾದಿ-ಗಳಿಗಿಂತಲೂ ಸರ್ವಜ್ಞತಮನಾದ, ವಿಷ್ಣ್ವಾದಿಭಿಃ = ವಿಷ್ಣು ಮೊದಲಾದವರಿಂದ, ಕೃತತ್ವಾತ್ = ರಚಿತವಾಗಿರುವುದರಿಂದ ಇಂಥ ಪಂಚರಾತ್ರಾದಿಸ್ಮೃತಿಗಳ ಸಂವಾದವಿರುವ, ಶ್ರುತೇಃ = ಶ್ರುತಿಗಳಿಗೆ, ಆಧಿಕ್ಯಂ ಚ = ಪಾಶುಪತಾದಿಸ್ಮೃತಿಗಳಿಗಿಂತಲೂ ಪ್ರಾಬಲ್ಯವು, ಸಿದ್ಧ್ಯತಿ = ಸಿದ್ಧವಾಗುತ್ತದೆ.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

### ಸ್ಮೃತ್ಯಧಿಕರಣಕ್ಕೆ ಸಂಗತಿ

**सत्तर्कदीपावळिः – सर्वज्ञाचार्येभ्यो नमः । जगत्कारणे नारायणे निखिलवेदसमन्वयो गताध्यायेऽहितः । तत्र विप्रतिपद्यमानवादिभिरुद्भावितानेकविरोधोऽस्मिन्नध्याये परिह्रियते । तत्र प्रथमपादे विरोधेषु युक्तिविरोधः परिह्रियते । पशुपत्यादिप्रत्यक्षमूलत्वेन च पाशुपतादिस्मृतेः प्रबलत्वात् तद्विरोधोऽत्र प्रथमाधिकरणे परिह्रियते ।**

'ಸರ್ವಜ್ಞಾಚಾರ್ಯೇಭ್ಯೋ ನಮಃ' ಸರ್ವಜ್ಞಾಚಾರ್ಯರಿಗೆ ನಮಸ್ಕಾರಗಳು. ಜಗತ್ಕಾರಣನಾದ ನಾರಾಯಣನಲ್ಲಿ ಸಕಲವೇದಗಳ ಸಮನ್ವಯವನ್ನು ಹಿಂದಿನ ಅಧ್ಯಾಯದಲ್ಲಿ ಮಾಡಲಾಯಿತು. ಈ ವಿಷಯದಲ್ಲಿ ಯಾವ ವಾದಿಗಳು ವಿಪ್ರತಿಪತ್ತಿಯನ್ನು ತೋರಿಸುತ್ತಾರೋ, ಅವರು ಹೇಳುವ ಅನೇಕ ಬಗೆಯ ವಿರೋಧಗಳನ್ನು ಈ ಅಧ್ಯಾಯದಲ್ಲಿ ಪರಿಹಾರ ಮಾಡಲಾಗುತ್ತಿದೆ. ಮೊದಲ ಪಾದದಲ್ಲಿ ಅನೇಕ ಬಗೆಯ ವಿರೋಧಗಳ ನಡುವೆ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ರುದ್ರಾದಿಗಳ ಪ್ರತ್ಯಕ್ಷಮೂಲಕವಾಗಿರುವುದರಿಂದ ಪಾಶುಪತಾದಿಸ್ಮೃತಿಯು ಅತ್ಯಂತ ಪ್ರಬಲವಾಗಿದೆ. ಈ ಕಾರಣದಿಂದ ಮೊದಲು ಈ ವಿರೋಧವನ್ನೇ ಪ್ರಥಮಾಧಿಕರಣದಲ್ಲಿ ಪರಿಹರಿಸಲಾಗಿದೆ.

### ಶ್ರುತಿಮೂಲಕವಾದ ಪಂಚರಾತ್ರಾದಿಸ್ಮೃತಿಗಳೇ ಪ್ರಮಾಣ

**सत्तर्कदीपावळिः – तथा हि पाशुपतादिस्मृतिविरोधान्न विष्णुः जगत्कर्ता इत्युच्यते । तर्हि पञ्चरात्रादिस्मृतिविरोधाद् रुद्रोपि जगत्कारणं न स्यात् । न चैवं सति अनिर्णय इति वाच्यम् । श्रुतिमूलत्वेन पञ्चरात्रादिस्मृतेरेव प्रामाण्यमिति निर्णयोपपत्तेः । श्रुतीनां च जगत्कर्तरि विष्णौ समन्वयस्याभिहितत्वात् । तथाहि – 'उक्तेऽर्थे' इत्यादिना ।**

ಪಾಶುಪತಾದಿಸ್ಮೃತಿಗಳ ವಿರೋಧದಿಂದ ವಿಷ್ಣು ಜಗತ್ಕರ್ತೃ ಆಗಲಾರ. ಹೀಗೆ ಹೇಳಿದರೆ ಪಂಚರಾತ್ರಾದಿಸ್ಮೃತಿವಿರೋಧವಿರುವುದರಿಂದ ರುದ್ರನೂ ಕೂಡ ಜಗತ್ಕಾರಣ ಆಗದೇ ಇರಬೇಕಾದೀತು. ಹಾಗಾದರೆ ನಿರ್ಣಯವೇ ಆಗುವುದಿಲ್ಲವಲ್ಲ ಎಂದು ಪ್ರಶ್ನಿಸಬಾರದು. ಶ್ರುತಿಮೂಲಕವಾಗಿರುವುದರಿಂದ ಪಂಚರಾತ್ರಾದಿಸ್ಮೃತಿಗಳೇ ಪ್ರಮಾಣವಾಗುತ್ತದೆ ಎಂದು ನಿರ್ಣಯ ಮಾಡಲು ಸಾಧ್ಯವಿದೆ. ಜಗತ್ಕರ್ತೃವಾದ ವಿಷ್ಣುವಿನ ವಿಷಯದಲ್ಲಿ ಶ್ರುತಿಗಳ ಸಮನ್ವಯವನ್ನು ಈಗಾಗಲೇ ಮಾಡಿದ್ದಾಗಿದೆ. ಈ ಎಲ್ಲ ವಿಷಯವನ್ನು ಭಾಷ್ಯದಲ್ಲಿ 'ಉಕ್ತೇಽರ್ಥೇ' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

ಶಾಸ್ತ್ರಕ್ಕೆ ಪುಮರ್ಥಪರ್ಯವಸಾಯಿತ್ವಕ್ಕೋಸ್ಕರ ಎರಡನೆಯ ಅಧ್ಯಾಯ

**तत्वप्रदीपः – प्रथमाध्याये सर्वसृष्ट्यादिकर्तरि सर्वगुणपरिपूर्णे नारायणे सर्ववेदसमन्वय उक्तः । तत्र अविरोधं दर्शयति अनेनाध्यायेन । विदितेऽपि वेदार्थे विरोधस्फुरणे तत्वनिर्धारणानुपपत्तेः । अनिर्धारिते च निदिध्यासनायोगात् । अनाध्यातस्यच अनीक्षणीयत्वेनामोचकत्वात् । अतः 'यावन्न विरोधपरिहारः, तावन्न पुमर्थपर्यवसायित्वं शास्त्रस्य' इति तत्तद्विरोधमाशङ्क्य परिहरति । प्रथमपादे युक्त्यविरोधं दर्शयति । तदायत्तत्वात् सर्वविरोधाविरोधयोः ।**

ಪ್ರಥಮಾಧ್ಯಾಯದಲ್ಲಿ ನಾರಾಯಣನು ಸಕಲ ಜಗಜ್ಜನ್ಮಾದಿಕಾರಣನಾಗಿದ್ದಾನೆ ಮತ್ತು ಸಕಲಗುಣಪರಿಪೂರ್ಣನಾಗಿದ್ದಾನೆ ಎಂಬುದನ್ನು ಸಮನ್ವಯ ಮಾಡುವುದಕ್ಕಾಗಿ, ಸಕಲ ವೇದಗಳ ಸಮನ್ವಯವನ್ನು ಸಾಧಿಸಿದ್ದಾಯಿತು. ಈ ವಿಷಯದಲ್ಲಿ ವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಎರಡನೆಯ ಈ ಅಧ್ಯಾಯವು ಹೊರಟಿದೆ. ವಿರೋಧವನ್ನೇಕೆ ಪರಿಹರಿಸಬೇಕು? ಎಂಬುದರ ಬಗ್ಗೆ ಹೀಗೆ ತಿಳಿಯಬೇಕು. ಪರಮಾತ್ಮನು ಸಕಲವೇದ ಪ್ರತಿಪಾದ್ಯ

ಎಂಬುದಾಗಿ ತಿಳಿದರೂ ಕೂಡ ಅನೇಕ ವಿರೋಧಗಳು ಸ್ಫುರಣವಾಗುತ್ತವೆ. ಆಗ ತತ್ವನಿಶ್ಚಯವೇ ಉಂಟಾಗುವುದಿಲ್ಲ. ಯಾವ ಸ್ವರೂಪವು ನಿರ್ಧಾರ ಆಗಿರುವುದಿಲ್ಲವೋ, ಅದರ ವಿಷಯದಲ್ಲಿ ನಿಧಿಧ್ಯಾಸನವೂ ಕೂಡ ಯುಕ್ತವಾಗುವುದಿಲ್ಲ. ಯಾರು ನಿಧಿಧ್ಯಾಸನದಿಂದ ತಿಳಿಯಲ್ಪಟ್ಟಿಲ್ಲವೋ, (ಅಧ್ಯಯನದಿಂದ ತಿಳಿಯಲ್ಪಟ್ಟಿಲ್ಲವೋ) ಅವನು ಜ್ಞಾನಕ್ಕೆ ವಿಷಯನೂ ಕೂಡ ಆಗಲಾರ. ಆದ್ದರಿಂದಲೇ ಮೋಚಕನೂ ಕೂಡ ಆಗಲಾರ. ಆದ್ದರಿಂದ ಎಲ್ಲಿಯತನಕ ಪ್ರಥಮಾಧ್ಯಾಯದ ಪ್ರಮೇಯದಲ್ಲಿ ವಿರೋಧವನ್ನು ಪರಿಹಾರ ಮಾಡುವುದಿಲ್ಲವೋ, ಅಲ್ಲಿಯತನಕ ಶಾಸ್ತ್ರಕ್ಕೆ ಪುಮರ್ಥಪರ್ಯವಸಾಯಿತ್ವವು ಕೂಡುವುದಿಲ್ಲ. ಈ ಅಭಿಪ್ರಾಯದಿಂದ ಪ್ರಥಮಾಧ್ಯಾಯದ ಪ್ರಮೇಯದಲ್ಲಿ ಅನೇಕ ವಿರೋಧಗಳನ್ನು ಆಶಂಕಿಸಿ ಪರಿಹರಿಸಲು ಈ ಅಧ್ಯಾಯ ಹೊರಟಿದೆ ಎಂಬುದಾಗಿ ಭಾಷ್ಯದಲ್ಲಿ 'ಪ್ರಥಮಪಾದೇ ಯುಕ್ತ್ಯವಿರೋಧಂ ದರ್ಶಯತಿ' ಎಂಬುದಾಗಿ ಹೇಳುತ್ತಿದ್ದಾರೆ. ಸಕಲ ವಿರೋಧಗಳು ಇಲ್ಲವೆಂದು ತಿಳಿಯಬೇಕೆಂದರೆ ಮೊದಲು ಯುಕ್ತಿಯ ವಿರೋಧವಿಲ್ಲವೆಂಬುದನ್ನು ತಿಳಿಯಬೇಕು. ಆದ್ದರಿಂದ ಮೊದಲು ಯುಕ್ತಿವಿರೋಧವನ್ನೇ ಪರಿಹರಿಸಿದ್ದಾರೆ.

**ವಿವರಣೆ** – ಪ್ರಥಮಾಧ್ಯಾಯದಲ್ಲಿ ಸಕಲ ವೇದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುವ ಮೂಲಕ ವಿಷ್ಣುವೇ ಜಗತ್ತಿಗೆ ಕಾರಣನಾಗಿದ್ದಾನೆ ಮತ್ತು ಗುಣಪರಿಪೂರ್ಣನಾಗಿದ್ದಾನೆ ಎಂದು ಸಮರ್ಥಿಸಿದ್ದಾಯಿತು. ಆದರೆ ಈ ವಿಷಯದಲ್ಲಿ ಬರುವ ವಿರೋಧವನ್ನು ಪರಿಹಾರ ಮಾಡದೇ ಇದ್ದರೆ ಪ್ರಥಮಾಧ್ಯಾಯದ ಪ್ರಮೇಯವು ಸಿದ್ಧವೇ ಆಗುವುದಿಲ್ಲ. ಅದಕ್ಕಾಗಿ ಎರಡನೆಯ ಅಧ್ಯಾಯವು ಪ್ರವೃತ್ತವಾಗಿದೆ. ಸಕಲ ವೇದಪ್ರತಿಪಾದ್ಯನಾದ್ದರಿಂದ ಪರಮಾತ್ಮನನ್ನು ಗುಣಪರಿಪೂರ್ಣನಾಗಿದ್ದಾನೆ ಎಂಬುದಾಗಿ ನಾವು ಉಪಾಸನೆ ಮಾಡಬೇಕು. ವಿರೋಧವು ಸ್ಫುರಣವಾದರೆ ತತ್ವನಿರ್ಧಾರವೇ ಆಗುವುದಿಲ್ಲ. ಆಗ ಧ್ಯಾನವೂ ಕೂಡ ಸಾಧ್ಯವಾಗುವುದಿಲ್ಲ. ಮನಸ್ಸಿನಲ್ಲಿ ಸಂಶಯವು ಉಂಟಾಗಿ ಆ ವಸ್ತುವಿನ ಬಗ್ಗೆ ಯಥಾರ್ಥಜ್ಞಾನದಿಂದ ಧ್ಯಾನ ಮಾಡುವುದೇ ಕಷ್ಟವಾಗುತ್ತದೆ. ಅದಕ್ಕಾಗಿ ಎರಡನೆಯ ಈ ಅಧ್ಯಾಯವು ಪ್ರವೃತ್ತವಾಗಿದೆ.

### ಪಾಶುಪತಾದಿಸ್ಮೃತಿಗಳು ವೇದಕ್ಕೆ ಸಮಾನವೆಂದು ಆಕ್ಷೇಪ

**तत्वप्रदीपः – प्रथमतो रुद्रादिस्मृत्यविरोधम् । तासां श्रुतिमूलत्वेन सर्वज्ञवक्तृकत्वेन वाऽभिमतानां कापि दृष्टफलानां वेदसमत्वबुद्ध्या जगत्कारणे समन्वयधर्मित्वेन समाशङ्कनीयत्वात् । स्मृत्यनवकाशदोषप्रसङ्ग इति चेन्न,**

**अन्यस्मृत्यनवकाशदोषप्रसङ्गात् । सर्वज्ञा हि रुद्रकपिलकणादादयः । ते च जगत्कारणम् अन्यदन्यन्मन्यन्ते ।**

ಮೊದಲು ರುದ್ರಾದಿಗಳಿಂದ ಪ್ರಣೀತವಾದ ಪಾಶುಪತಾದಿ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಏಕೆಂದರೆ ಸ್ಮೃತಿಗಳು ಶ್ರುತಿಮೂಲಕವಾಗಿವೆ. ಅಥವಾ ಸರ್ವಜ್ಞನಿಂದ ಪ್ರಣೀತವಾಗಿವೆ ಎಂಬುದಾಗಿ ಅಭಿಮತವಾಗಿವೆ. ಕೆಲವೆಡೆ ಹೇಳಲ್ಪಟ್ಟ ಫಲಗಳು ದೊರಕುವುದೂ ಕೂಡ ಇವುಗಳಿಂದ ಕಂಡಿದೆ. ಆದ್ದರಿಂದ ವೇದಗಳಿಗೆ ಸಮಾನವಾಗಿವೆ. ಹೀಗೆ ಜಗತ್ಕಾರಣ ವಿಷಯದಲ್ಲಿ ಸಮನ್ವಯಧರ್ಮಿ ಸಮರ್ಪಕವಾಗಿವೆ. ಹೀಗೆ ಚೆನ್ನಾಗಿ ಆಶಂಕಿಸಲು ಅರ್ಹವಾಗಿವೆ. ಈ ಎಲ್ಲ ಕಾರಣಗಳಿಂದ ಬಲಿಷ್ಠವಾದ ಪಾಶುಪತಾದಿಶ್ರುತಿಗಳ ವಿರೋಧವನ್ನು ಪರಿಹರಿಸುವುದು ಅತ್ಯಾವಶ್ಯಕ. ಈ ದೃಷ್ಟಿಯಿಂದ ಸೂತ್ರಕಾರರು 'ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇತ್ ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರವನ್ನು ಉಲ್ಲೇಖಿಸಿದ್ದಾರೆ.

ರುದ್ರ, ಕಪಿಲ, ಕಣಾದ ಮೊದಲಾದವರೆಲ್ಲರೂ ಕೂಡ ಸರ್ವಜ್ಞರಾಗಿದ್ದಾರೆ. ಆದರೆ ಪ್ರತಿಯೊಬ್ಬರೂ ಕೂಡ ಬೇರೆ ಬೇರೆ ವ್ಯಕ್ತಿಯನ್ನೇ ಜಗತ್ಕಾರಣನೆಂದು ಅಂಗೀಕರಿಸುತ್ತಿದ್ದಾರೆ.

ವಿವರಣೆ - ಪ್ರಥಮಪಾದವು ಯುಕ್ತಿವಿರೋಧದ ಪರಿಹಾರಕ್ಕೋಸ್ಕರ ಹೊರಟಿದೆ ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಹಾಗಾದರೆ ಮೊದಲ ಅಧಿಕರಣದಲ್ಲಿ ಸ್ಮೃತಿವಿರೋಧವನ್ನು ಪರಿಹರಿಸುವದು ಅಸಂಗತವಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಇದಕ್ಕೆ ಕಾರಣವೇನೆಂದರೆ ಪಾಶುಪತಸ್ಮೃತಿಯು ಯುಕ್ತಿರೂಪವಾಗಿದೆ. ಆದ್ದರಿಂದ ಈ ಪಾದದಲ್ಲಿ ಇದು ಅಸಂಗತವಾಗುವುದಿಲ್ಲ ಎಂಬುದು ಒಂದು ಉತ್ತರ. ಅಥವಾ ಶೈವಾಗಮವು ಶೈವದರ್ಶನದ ಮೂಲವುಳ್ಳದ್ದಾಗಿದೆ. ಸಮಯರೂಪವೂ ಆಗಿದೆ. ಈ ಯುಕ್ತಿ ಹಾಗೂ ಸಮಯರೂಪವಾದ್ದರಿಂದ ಅತ್ಯಂತ ಬಲಿಷ್ಠವಾಗಿದೆ. ಅಷ್ಟೇ ಅಲ್ಲದೇ ಕೆಲವೆಡೆ ಶ್ರುತಿಸಂವಾದಿಯೂ ಆಗಿದೆ. ಹೀಗೆ ಶ್ರುತಿ ಮೂಲಕವಾಗಿರುವುದರಿಂದ ಸರ್ವಜ್ಞನಿಂದ ಪ್ರಣೀತವಾದ್ದರಿಂದ ದೃಷ್ಟಫಲಕವಾಗಿರುವುದರಿಂದ ವೇದಕ್ಕೆ ಸಮಾನವಾಗಿದೆ ಎಂಬ ಬುದ್ಧಿಯು ನಮಗೆ ಬರುತ್ತದೆ. ಈ ದೃಷ್ಟಿಯಿಂದ ಅತ್ಯಂತ ಬಲಿಷ್ಠವಾಗಿರುವ ಕಾರಣ ಪಾಶುಪತಸ್ಮೃತಿ ವಿರೋಧವನ್ನು ಪರಿಹರಿಸಲು ಈ ಸ್ಮೃತ್ಯಧಿಕರಣವು ಹೊರಟಿದೆ.

ಪಾಶುಪತಸ್ಮೃತಿಯು ರುದ್ರದೇವರಿಂದ ರಚಿತವಾಗಿದೆ. ಇದರಲ್ಲಿ ರುದ್ರನೇ ಜಗತ್ತಿಗೆ ಕಾರಣನೆಂದು ಹೇಳಲಾಗಿದೆ. ಕಪಿಲ ಋಷಿಯಿಂದ ಸಾಂಖ್ಯಸ್ಮೃತಿಯು ರಚನೆಗೊಂಡಿದೆ.

ಎಂಬುದಾಗಿ ತಿಳಿದರೂ ಕೂಡ ಅನೇಕ ವಿರೋಧಗಳು ಸ್ಫುರಣವಾಗುತ್ತವೆ. ಆಗ ತತ್ವನಿಶ್ಚಯವೇ ಉಂಟಾಗುವುದಿಲ್ಲ. ಯಾವ ಸ್ವರೂಪವು ನಿರ್ಧಾರ ಆಗಿರುವುದಿಲ್ಲವೋ, ಅದರ ವಿಷಯದಲ್ಲಿ ನಿಧಿಧ್ಯಾಸನವೂ ಕೂಡ ಯುಕ್ತವಾಗುವುದಿಲ್ಲ. ಯಾರು ನಿಧಿಧ್ಯಾಸನದಿಂದ ತಿಳಿಯಲ್ಪಟ್ಟಿಲ್ಲವೋ, (ಅಧ್ಯಯನದಿಂದ ತಿಳಿಯಲ್ಪಟ್ಟಿಲ್ಲವೋ) ಅವನು ಜ್ಞಾನಕ್ಕೆ ವಿಷಯನೂ ಕೂಡ ಆಗಲಾರ. ಆದ್ದರಿಂದಲೇ ಮೋಚಕನೂ ಕೂಡ ಆಗಲಾರ. ಆದ್ದರಿಂದ ಎಲ್ಲಿಯತನಕ ಪ್ರಥಮಾಧ್ಯಾಯದ ಪ್ರಮೇಯದಲ್ಲಿ ವಿರೋಧವನ್ನು ಪರಿಹಾರ ಮಾಡುವುದಿಲ್ಲವೋ, ಅಲ್ಲಿಯತನಕ ಶಾಸ್ತ್ರಕ್ಕೆ ಪುಮರ್ಥಪರ್ಯವಸಾಯಿತ್ವವು ಕೂಡುವುದಿಲ್ಲ. ಈ ಅಭಿಪ್ರಾಯದಿಂದ ಪ್ರಥಮಾಧ್ಯಾಯದ ಪ್ರಮೇಯದಲ್ಲಿ ಅನೇಕ ವಿರೋಧಗಳನ್ನು ಆಶಂಕಿಸಿ ಪರಿಹರಿಸಲು ಈ ಅಧ್ಯಾಯ ಹೊರಟಿದೆ ಎಂಬುದಾಗಿ ಭಾಷ್ಯದಲ್ಲಿ 'ಪ್ರಥಮಪಾದೇ ಯುಕ್ತ್ಯವಿರೋಧಂ ದರ್ಶಯತಿ' ಎಂಬುದಾಗಿ ಹೇಳುತ್ತಿದ್ದಾರೆ. ಸಕಲ ವಿರೋಧಗಳು ಇಲ್ಲವೆಂದು ತಿಳಿಯಬೇಕೆಂದರೆ ಮೊದಲು ಯುಕ್ತಿಯ ವಿರೋಧವಿಲ್ಲವೆಂಬುದನ್ನು ತಿಳಿಯಬೇಕು. ಆದ್ದರಿಂದ ಮೊದಲು ಯುಕ್ತಿವಿರೋಧವನ್ನೇ ಪರಿಹರಿಸಿದ್ದಾರೆ.

ವಿವರಣೆ - ಪ್ರಥಮಾಧ್ಯಾಯದಲ್ಲಿ ಸಕಲ ವೇದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುವ ಮೂಲಕ ವಿಷ್ಣುವೇ ಜಗತ್ತಿಗೆ ಕಾರಣನಾಗಿದ್ದಾನೆ ಮತ್ತು ಗುಣಪರಿಪೂರ್ಣನಾಗಿದ್ದಾನೆ ಎಂದು ಸಮರ್ಥಿಸಿದ್ದಾಯಿತು. ಆದರೆ ಈ ವಿಷಯದಲ್ಲಿ ಬರುವ ವಿರೋಧವನ್ನು ಪರಿಹಾರ ಮಾಡದೇ ಇದ್ದರೆ ಪ್ರಥಮಾಧ್ಯಾಯದ ಪ್ರಮೇಯವು ಸಿದ್ಧವೇ ಆಗುವುದಿಲ್ಲ. ಅದಕ್ಕಾಗಿ ಎರಡನೆಯ ಅಧ್ಯಾಯವು ಪ್ರವೃತ್ತವಾಗಿದೆ. ಸಕಲ ವೇದಪ್ರತಿಪಾದ್ಯನಾದ್ದರಿಂದ ಪರಮಾತ್ಮನನ್ನು ಗುಣಪರಿಪೂರ್ಣನಾಗಿದ್ದಾನೆ ಎಂಬುದಾಗಿ ನಾವು ಉಪಾಸನೆ ಮಾಡಬೇಕು. ವಿರೋಧವು ಸ್ಫುರಣವಾದರೆ ತತ್ವನಿರ್ಧಾರವೇ ಆಗುವುದಿಲ್ಲ. ಆಗ ಧ್ಯಾನವೂ ಕೂಡ ಸಾಧ್ಯವಾಗುವುದಿಲ್ಲ. ಮನಸ್ಸಿನಲ್ಲಿ ಸಂಶಯವು ಉಂಟಾಗಿ ಆ ವಸ್ತುವಿನ ಬಗ್ಗೆ ಯಥಾರ್ಥಜ್ಞಾನದಿಂದ ಧ್ಯಾನ ಮಾಡುವುದೇ ಕಷ್ಟವಾಗುತ್ತದೆ. ಅದಕ್ಕಾಗಿ ಎರಡನೆಯ ಈ ಅಧ್ಯಾಯವು ಪ್ರವೃತ್ತವಾಗಿದೆ.

### ಪಾಶುಪತಾದಿಸ್ಮೃತಿಗಳು ವೇದಕ್ಕೆ ಸಮಾನವೆಂದು ಆಕ್ಷೇಪ

**तत्वप्रदीपः – प्रथमतो रुद्रादिस्मृत्यविरोधम् । तासां श्रुतिमूलत्वेन सर्वज्ञवक्तृकत्वेन वाऽभिमतानां क्वापि दृष्टफलानां वेदसमत्वबुद्ध्या जगत्कारणे समन्वयधर्मित्वेन समाशङ्कनीयत्वात् । स्मृत्यनवकाशदोषप्रसङ्ग इति चेन्न,**

**अन्यस्मृत्यनवकाशदोषप्रसङ्गात् । सर्वज्ञा हि रुद्रकपिलकणादादयः । ते च जगत्कारणम् अन्यदन्यन्मन्यन्ते ।**

ಮೊದಲು ರುದ್ರಾದಿಗಳಿಂದ ಪ್ರಣೀತವಾದ ಪಾಶುಪತಾದಿ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಏಕೆಂದರೆ ಸ್ಮೃತಿಗಳು ಶ್ರುತಿಮೂಲಕವಾಗಿವೆ. ಅಥವಾ ಸರ್ವಜ್ಞನಿಂದ ಪ್ರಣೀತವಾಗಿವೆ ಎಂಬುದಾಗಿ ಅಭಿಮತವಾಗಿವೆ. ಕೆಲವೆಡೆ ಹೇಳಲ್ಪಟ್ಟ ಫಲಗಳು ದೊರಕುವುದೂ ಕೂಡ ಇವುಗಳಿಂದ ಕಂಡಿದೆ. ಆದ್ದರಿಂದ ವೇದಗಳಿಗೆ ಸಮಾನವಾಗಿವೆ. ಹೀಗೆ ಜಗತ್ಕಾರಣ ವಿಷಯದಲ್ಲಿ ಸಮನ್ವಯಧರ್ಮಿ ಸಮರ್ಪಕವಾಗಿವೆ. ಹೀಗೆ ಚೆನ್ನಾಗಿ ಆಶಂಕಿಸಲು ಅರ್ಹವಾಗಿವೆ. ಈ ಎಲ್ಲ ಕಾರಣಗಳಿಂದ ಬಲಿಷ್ಠವಾದ ಪಾಶುಪತಾದಿಶ್ರುತಿಗಳ ವಿರೋಧವನ್ನು ಪರಿಹರಿಸುವುದು ಅತ್ಯಾವಶ್ಯಕ. ಈ ದೃಷ್ಟಿಯಿಂದ ಸೂತ್ರಕಾರರು 'ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇತ್ ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರವನ್ನು ಉಲ್ಲೇಖಿಸಿದ್ದಾರೆ.

ರುದ್ರ, ಕಪಿಲ, ಕಣಾದ ಮೊದಲಾದವರೆಲ್ಲರೂ ಕೂಡ ಸರ್ವಜ್ಞರಾಗಿದ್ದಾರೆ. ಆದರೆ ಪ್ರತಿಯೊಬ್ಬರೂ ಕೂಡ ಬೇರೆ ಬೇರೆ ವ್ಯಕ್ತಿಯನ್ನೇ ಜಗತ್ಕಾರಣನೆಂದು ಅಂಗೀಕರಿಸುತ್ತಿದ್ದಾರೆ.

ವಿವರಣೆ - ಪ್ರಥಮಪಾದವು ಯುಕ್ತಿವಿರೋಧದ ಪರಿಹಾರಕ್ಕೋಸ್ಕರ ಹೊರಟಿದೆ ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಹಾಗಾದರೆ ಮೊದಲ ಅಧಿಕರಣದಲ್ಲಿ ಸ್ಮೃತಿವಿರೋಧವನ್ನು ಪರಿಹರಿಸುವದು ಅಸಂಗತವಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಇದಕ್ಕೆ ಕಾರಣವೇನೆಂದರೆ ಪಾಶುಪತಸ್ಮೃತಿಯು ಯುಕ್ತಿರೂಪವಾಗಿದೆ. ಆದ್ದರಿಂದ ಈ ಪಾದದಲ್ಲಿ ಇದು ಅಸಂಗತವಾಗುವುದಿಲ್ಲ ಎಂಬುದು ಒಂದು ಉತ್ತರ. ಅಥವಾ ಶೈವಾಗಮವು ಶೈವದರ್ಶನದ ಮೂಲವುಳ್ಳದ್ದಾಗಿದೆ. ಸಮಯರೂಪವೂ ಆಗಿದೆ. ಈ ಯುಕ್ತಿ ಹಾಗೂ ಸಮಯರೂಪವಾದ್ದರಿಂದ ಅತ್ಯಂತ ಬಲಿಷ್ಠವಾಗಿದೆ. ಅಷ್ಟೇ ಅಲ್ಲದೇ ಕೆಲವೆಡೆ ಶ್ರುತಿಸಂವಾದಿಯೂ ಆಗಿದೆ. ಹೀಗೆ ಶ್ರುತಿ ಮೂಲಕವಾಗಿರುವುದರಿಂದ ಸರ್ವಜ್ಞನಿಂದ ಪ್ರಣೀತವಾದ್ದರಿಂದ ದೃಷ್ಟಫಲಕವಾಗಿರುವುದರಿಂದ ವೇದಕ್ಕೆ ಸಮಾನವಾಗಿದೆ ಎಂಬ ಬುದ್ಧಿಯು ನಮಗೆ ಬರುತ್ತದೆ. ಈ ದೃಷ್ಟಿಯಿಂದ ಅತ್ಯಂತ ಬಲಿಷ್ಠವಾಗಿರುವ ಕಾರಣ ಪಾಶುಪತಸ್ಮೃತಿ ವಿರೋಧವನ್ನು ಪರಿಹರಿಸಲು ಈ ಸ್ಮೃತ್ಯಧಿಕರಣವು ಹೊರಟಿದೆ.

ಪಾಶುಪತಸ್ಮೃತಿಯು ರುದ್ರದೇವರಿಂದ ರಚಿತವಾಗಿದೆ. ಇದರಲ್ಲಿ ರುದ್ರನೇ ಜಗತ್ತಿಗೆ ಕಾರಣನೆಂದು ಹೇಳಲಾಗಿದೆ. ಕಪಿಲ ಋಷಿಯಿಂದ ಸಾಂಖ್ಯಸ್ಮೃತಿಯು ರಚನೆಗೊಂಡಿದೆ.

ಇದರಿಂದ ಪ್ರಕೃತಿಯಿಂದಲೇ ಜಗತ್ತು ಹುಟ್ಟಿದೆ ಎಂದು ಹೇಳಲಾಗಿದೆ. ರುದ್ರನಾಗಲೀ, ಕಪಿಲ ಋಷಿಯಾಗಲೀ ಪರಮಾಪ್ತರಾಗಿರುವುದರಿಂದ ಇವರಿಂದ ಪ್ರಣೀತವಾದ ವಾಕ್ಯವು ಪ್ರಮಾಣವಾಗಿದೆ. ಆದರೆ ವಿಷ್ಣುವೇ ಜಗತ್ತಿಗೆ ಕಾರಣವೆಂದು ಹೇಳುವ ವೇದಗಳು ಆಪ್ತಪ್ರಣೀತವಾಗಿರುವುದಿಲ್ಲ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಸಾಧನೆ ಮಾಡಿದ ಪ್ರಮೇಯವು ಸಿದ್ಧವಾಗುವುದಿಲ್ಲ.

### ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಪೂರ್ವಪಕ್ಷ

**ತತ್ವಪ್ರದೀಪः – न च तत्स्मृतीनामन्योऽवकाशः । उक्तार्थे श्रुतेः प्रामाण्याङ्गीकारे तासां तत्तदुत्कर्षप्रतिपादिकानाम् अन्यावकाशरहितानाम् अप्रामाण्यदोषः प्रसज्येत । न च तद्युक्तं सर्वज्ञप्रणीतानाम् । अतः श्रुतेस्तत्राप्रामाण्यमिति चेन्न ।**

ಪಾಶುಪತಾದಿ ಸ್ಮೃತಿಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗಿವೆ ಎಂದು ಅಂಗೀಕಾರ ಮಾಡಿದರೆ ಪಾಶುಪತಾದಿಸ್ಮೃತಿಗಳಲ್ಲಿ ಹೇಳಲ್ಪಟ್ಟ ರುದ್ರಾದಿಗಳ ಜಗತ್ಕಾರಣತ್ವವು ಅಯುಕ್ತವಾಗಬೇಕಾಗುತ್ತದೆ. ರುದ್ರಾದಿಗಳ ಉತ್ಕರ್ಷ ಪ್ರತಿಪಾದನೆ ಮಾಡುವ ವಾಕ್ಯಗಳಿಗೆ ಬೇರೆ ಅರ್ಥವನ್ನು ಕಲ್ಪನೆ ಮಾಡಿದರೆ, ಅಪ್ರಾಮಾಣ್ಯದೋಷವೇ ಪ್ರಾಪ್ತವಾಗುತ್ತದೆ. ಇದು ಯುಕ್ತವಲ್ಲ. ಏಕೆಂದರೆ ರುದ್ರ, ಕಪಿಲ ಮೊದಲಾದವರೆಲ್ಲರೂ ಸರ್ವಜ್ಞರಾಗಿದ್ದಾರೆ. ಅವರಿಂದ ಹೇಳಲ್ಪಟ್ಟ ಈ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು. ಆದ್ದರಿಂದ ಪ್ರಥಮಾಧ್ಯಾಯದ ಪ್ರಮೇಯದಲ್ಲಿಯೇ ಅಪ್ರಾಮಾಣ್ಯವನ್ನು ಶ್ರುತಿಗಳಿಗೆ ಒಪ್ಪಬೇಕು.

### ಇತರ ಆಗಮಗಳಿಗಿಂತ ವೇದದಲ್ಲಿರುವ ಪ್ರಾಮಾಣ್ಯವು ಅತ್ಯಧಿಕವಾಗಿದೆ

**ತತ್ವಪ್ರದೀಪः – तेभ्योऽधिकं निरतिशयं सर्वज्ञत्वं विष्णोः । मन्वादीनां च कपिलादिभ्योऽधिकम् । अतो विष्ण्वादिस्मृत्यनवकाशदोषोऽत्युल्बणस्तत्प्रामाण्याङ्गीकारे प्रसज्यते । अत एतद्विरोधे तासाम् अप्रामाण्यमेव स्यात् । अन्यसमयिभ्योऽस्माकं श्रुतिप्रामाण्यमधिकं निरपवादं सिद्ध्यति ।**

ರುದ್ರಾದಿಗಳಿಗಿಂತ ನಿರತಿಶಯವಾಗಿ ಅಧಿಕವಾದ ಸಾರ್ವಜ್ಞ್ಯವು ವಿಷ್ಣುವಿನಲ್ಲಿದೆ. ಕಪಿಲಾದಿಗಳಿಗಿಂತ ಅಧಿಕವಾದ ಸಾರ್ವಜ್ಞ್ಯವು ಮನು ಮೊದಲಾದವರಲ್ಲಿದೆ. ಆದ್ದರಿಂದ ವಿಷ್ಣುಪ್ರತಿಪಾದಕವಾದ ಪಂಚರಾತ್ರಾದಿಸ್ಮೃತಿಗಳಲ್ಲಿರುವ ನಿರವಕಾಶದೋಷವು ಅತ್ಯಲ್ಪಣವಾಗಿದೆ. ಆದ್ದರಿಂದ ಶೈವಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಬಾರದು. ಈ ಪಂಚರಾತ್ರಾದಿಸ್ಮೃತಿಗಳ ವಿರೋಧವು ಬರುವುದರಿಂದ, ಶೈವಸ್ಮೃತಿಗಳಿಗೆ ಅಪ್ರಾಮಾಣ್ಯವನ್ನೇ ಒಪ್ಪಬೇಕು. ಬೇರೆ ಸಮಯಿಗಳಿಗಿಂತ ನಾವು ಒಪ್ಪುವ ಶ್ರುತಿ-ಪ್ರಾಮಾಣ್ಯವು ಅತ್ಯಧಿಕವಾಗಿದೆ ಮತ್ತು ಅಪವಾದವಿಲ್ಲದ್ದಾಗಿದೆ ಎಂಬುದು ಸಿದ್ಧವಾಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ಎರಡನೆಯ ಅಧ್ಯಾಯದ ಪ್ರಮೇಯ

**तत्वप्रकाशिका – पूर्वाध्यायसङ्गतत्वेन एतदध्यायार्थं दर्शयति – उक्तेऽर्थे इति।।**

ಹಿಂದಿನ ಅಧ್ಯಾಯದಿಂದ ಈ ಅಧ್ಯಾಯಕ್ಕೆ ಸಂಗತಿಯನ್ನು ತೋರಿಸುವ ಮೂಲಕ ಈ ಎರಡನೆಯ ಅಧ್ಯಾಯದ ಅರ್ಥವನ್ನು 'ಉಕ್ತೇಽರ್ಥೇ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ವಿವರಣೆ - ಹಿಂದಿನ ಸಮನ್ವಯಾಧ್ಯಾಯದಲ್ಲಿ ಪರಮಾತ್ಮನೇ ಸಕಲಶಾಸ್ತ್ರಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅವನೇ ಜಗತ್ಕಾರಣನು ಮತ್ತು ಗುಣಪರಿಪೂರ್ಣನು ಎಂದು ಸ್ಥಾಪನೆ ಮಾಡಲಾಯಿತು. ಈ ಪ್ರಮೇಯಕ್ಕೆ ಯುಕ್ತಿವಿರೋಧ, ಸಮಯವಿರೋಧ ಮೊದಲಾದವುಗಳು ಪ್ರಾಪ್ತವಾದರೆ ಸಿದ್ಧವಾಗುವುದಿಲ್ಲ. ಆದ್ದರಿಂದ ಎಲ್ಲಾ ಬಗೆಯ ವಿರೋಧಗಳನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. ಅದಕ್ಕಾಗಿ ಎರಡನೆಯ ಈ ಅಧ್ಯಾಯವು ಹೊರಟಿದೆ. ಈ ವಿಷಯವನ್ನು ಭಾಷ್ಯದಲ್ಲಿ 'ಉಕ್ತೇಽರ್ಥೇ' ಎಂಬುದಾಗಿ ಹೇಳಿರುತ್ತಾರೆ. ಆದ್ದರಿಂದ ಸಮನ್ವಯಾಧ್ಯಾಯದಿಂದ ಅವಿರೋಧಾಧ್ಯಾಯಕ್ಕೆ ಸಂಗತಿಯನ್ನು ನಿರೂಪಣೆ ಮಾಡಿದಂತಾಯಿತು. ಹಾಗೂ ಈ ಅವಿರೋಧಾಧ್ಯಾಯದ ಮುಖ್ಯತಾತ್ಪರ್ಯ

ಏನೆಂದರೆ 'ಭಗವಂತನ ಜಗತ್‌ಕಾರಣತ್ವವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುವಿಕೆ' ಎಂದು.

ಜಗಜ್ಜನ್ಮಾದಿಕಾರಣತ್ವದಲ್ಲಿ ಯುಕ್ತಿವಿರೋಧ ಪರಿಹಾರ

**तत्वप्रकाशिका – अशेषशास्त्रप्रामाण्येन हरिरेव जगजन्मादिकर्तेति योऽर्थः प्रथमाध्याये प्रतिपादितस्तस्य युक्त्यादिविरूद्धत्वे न प्रेक्षावदुपादित्सागोचरत्वं स्यात् । अतस्तस्मिन्नुक्तार्थे युक्त्यादिविरोधाभावं दर्शयत्यनेनाध्यायेन सूत्रकर इत्यर्थः । एतत्पादप्रतिपाद्यं दर्शयति ।। प्रथमेति।।**

ಪ್ರಥಮಾಧ್ಯಾಯದಲ್ಲಿ ಸಕಲ ಶಾಸ್ತ್ರಗಳು ಪರಮಾತ್ಮನಲ್ಲಿಯೇ ಸಮನ್ವಯಗೊಳ್ಳುವುದರಿಂದ ಪ್ರಮಾಣವಾಗಿವೆ ಆದ್ದರಿಂದ ಪರಮಾತ್ಮನೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಸಮರ್ಥಿಸ-ಲಾಯಿತು. ಈ ಪ್ರಮೇಯಕ್ಕೆ ಯುಕ್ತಿ ಮೊದಲಾದವುಗಳ ವಿರೋಧವು ಪ್ರಾಪ್ತವಾದರೆ ಪ್ರೇಕ್ಷಾವಂತರು ಪರಮಾತ್ಮನನ್ನು ಜಗಜ್ಜನ್ಮಾದಿಕಾರಣನೆಂಬ ಪ್ರಮೇಯವನ್ನು ಒಪ್ಪುವುದಿಲ್ಲ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಿದ ಪ್ರಮೇಯಕ್ಕೆ ಯುಕ್ತಿ ಮೊದಲಾದವುಗಳ ವಿರೋಧವನ್ನು ಪರಿಹಾರ ಮಾಡಲೇಬೇಕು. ಅದನ್ನೇ ಈ ಅಧ್ಯಾಯದಲ್ಲಿ ಸೂತ್ರಕಾರರು ತೋರಿಸುತ್ತಿದ್ದಾರೆ. ಈ ಎರಡನೇ ಅಧ್ಯಾಯದ ಪ್ರಥಮಪಾದದಿಂದ ಪ್ರತಿಪಾದ್ಯವಾದ ವಿಷಯವನ್ನು ಪ್ರಥಮ ಇತ್ಯಾದಿ ಭಾಷ್ಯದಿಂದ ಹೇಳಿರುತ್ತಾರೆ.

ವಿವರಣೆ - ಪರಮಾತ್ಮನು ಸಕಲ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಪ್ರಕರಣ, ವಾಕ್ಯ, ಪದ, ವರ್ಣ, ಸ್ವರ ಇವುಗಳಿಂದೆಲ್ಲಾ ಪರಮಾತ್ಮನೊಬ್ಬನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ ಹಾಗಾಗಿ ಸಕಲವೇದಶಾಸ್ತ್ರಗಳು ಆವನ ವಿಷಯದಲ್ಲಿ ಪ್ರಮಾಣ-ಭೂತವಾಗಿವೆ ಪ್ರತಿಯೊಂದು ಶಬ್ದಗಳಿಂದ ತಿಳಿಯಲ್ಪಡುವ ಗುಣಗಳಿಂದಲೂ ಕೂಡ ಪರಿಪೂರ್ಣನಾಗಿದ್ದಾನೆ. ಆದ್ದರಿಂದ ಪರಮಾತ್ಮನೊಬ್ಬನೇ ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಹಿಂದಿನ ಅಧ್ಯಾಯದಲ್ಲಿ ಸಮರ್ಥನೆ ಮಾಡಲಾಗಿದೆ. ಈ ಪ್ರಮೇಯವನ್ನು ಪ್ರೇಕ್ಷಾವಂತರು ಒಪ್ಪಬೇಕೆಂದರೆ ಇದಕ್ಕೆ ಯುಕ್ತ್ಯಾದಿವಿರೋಧಗಳು ಬರಬಾರದು. ಅದಕ್ಕಾಗಿ ಈ ಅಧ್ಯಾಯ ಹೊರಟಿದೆ.

ಪ್ರಥಮಾಧ್ಯಾಯದ ಪ್ರಮೇಯಕ್ಕೆ ನಾಕು ಬಗೆಯ ವಿರೋಧಗಳು

**तत्वप्रकाशिका – उक्तेऽर्थे विरोधश्चतुर्विधः स्फुरति युक्तिसमय-श्रुतिन्यायोपेत श्रुतिविरोधभेदात् । तत्र सर्वविरेधानां युक्तिमूलत्वेन तदविरोधं प्रथमपादे दर्शयतीत्यर्थः । आद्याधिकरणार्थं दर्शयति – प्रथमत इति ।।**

ಹಿಂದಿನ ಅಧ್ಯಾಯದಲ್ಲಿ ಸಮರ್ಥನೆ ಮಾಡಿದ ಪ್ರಮೇಯಕ್ಕೆ ನಾಕುಬಗೆಯ ವಿರೋಧವು ಸ್ಫುರಣವಾಗುತ್ತದೆ - ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ಯುಕ್ತಿಸಹಿತವಾದ ಶ್ರುತಿವಿರೋಧ ಎಂದು.

ಈ ನಾಕು ಬಗೆಯ ವಿರೋಧಗಳೂ ಕೂಡ ಯುಕ್ತಿಮೂಲಕವಾದ್ದರಿಂದ ಇದರ ವಿರೋಧವನ್ನು ಪ್ರಥಮಪಾದದಲ್ಲಿ ತೋರಿಸಿ ಪರಿಹರಿಸುತ್ತಿದ್ದಾರೆ. ಮೊದಲು 'ಪ್ರಥಮತಃ' ಇತ್ಯಾದಿ ಭಾಷ್ಯದಿಂದ ಮೊದಲನೇ ಈ ಅಧಿಕರಣದ ಪ್ರಮೇಯವನ್ನು ತೋರಿಸುತ್ತಿದ್ದಾರೆ.

> ವಿವರಣೆ - ಜಗಜ್ಜನ್ಮಾದಿಕಾರಣತ್ವ ವಿಷಯದಲ್ಲಿ ಒಟ್ಟು ನಾಕು ವಿರೋಧಗಳು ಪ್ರಾಪ್ತವಾಗುತ್ತವೆ. ಈ ನಾಕು ಬಗೆಯ ವಿರೋಧಗಳೂ ಕೂಡ ಯುಕ್ತಿಮೂಲಕವೇ ಆಗಿದೆ. ಏಕೆಂದರೆ ಶ್ರುತಿಯು ಯುಕ್ತಿಮೂಲಕವಾಗಿದ್ದರೆ ಮಾತ್ರ ವಿರೋಧ ಮಾಡಲು ಸಾಧ್ಯ. ಸಮಯಗಳು ತಮ್ಮತಮ್ಮ ಮತದ ವಿಷಯವನ್ನು ಯುಕ್ತಿಯಿಂದಲೇ ಸಮರ್ಥನೆ ಮಾಡುತ್ತವೆ. ಆದ್ದರಿಂದ ಪ್ರತಿಯೊಂದು ವಿರೋಧಕ್ಕೂ ಯುಕ್ತಿಯು ಆವಶ್ಯಕವಾಗಿದೆ. ಆದ್ದರಿಂದ ಮೊದಲು ಯುಕ್ತಿವಿರೋಧವನ್ನು ಪರಿಹಾರ ಮಾಡಿದರೆ ಉಳಿದ ವಿರೋಧವನ್ನು ಪರಿಹರಿಸುವುದು ಸುಲಭವಾಗುತ್ತದೆ. ಈ ದೃಷ್ಟಿಯಿಂದ ಸೂತ್ರಕಾರರು ಮೊದಲನೆಯ ಈ ಪಾದದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಿದ್ದಾರೆ. ಹಾಗಾದರೆ ಮೊದಲನೆಯ ಪಾದದ ಪ್ರಥಮಾಧಿ ಕರಣದಲ್ಲಿಯೂ ಯುಕ್ತಿವಿರೋಧವನ್ನು ಪರಿಹರಿಸಬೇಕಿತ್ತು. ಸ್ಮೃತಿಯ ವಿರೋಧವನ್ನು ಏಕೆ ಪರಿಹರಿಸಿದರು ? ಎಂಬ ಪ್ರಶ್ನೆಗೆ ಭಾಷ್ಯಕಾರರು 'ಪ್ರಥಮತಃ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

ಸ್ಮೃತ್ಯಧಿಕರಣಕ್ಕೆ ಸಂಗತಿ ನಿರೂಪಣೆ

**तत्वप्रकाशिका – यद्यप्ययं पादः प्रागुक्तार्थे युक्तिविरोधं परिहर्तुमेव प्रवृत्तस्तथापि प्रथमाधिकरणे पाशुपतादिस्मृतिविरोधाभावं दर्शयति । स्मृतीनां**

**युक्तिसमयादिरूपत्वेन तद्विरोधपरिहारस्य समस्ताध्यायार्थभूतस्य प्राथम्योपपत्तेः पादार्थस्याऽप्यत्र सम्भवेन न कोऽपि दोष इति भावः ।**

ವಾಸ್ತವಿಕವಾಗಿ ಎರಡನೆಯ ಅಧ್ಯಾಯದ ಈ ಪ್ರಥಮಪಾದವು ಹಿಂದಿನ ಅಧ್ಯಾಯದ ಪ್ರಮೇಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದಕ್ಕಾಗಿಯೇ ಪ್ರವೃತ್ತವಾಗಿದೆ. ಆದರೂ ಕೂಡ ಮೊದಲನೆಯ ಈ ಅಧಿಕರಣವು ಪಾಶುಪತ ಮೊದಲಾದ ಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಿದೆ. ಪಾಶುಪತಾದಿಸ್ಮೃತಿಗಳು ಯುಕ್ತಿರೂಪವೂ ಆಗಿವೆ. ಸಮಯರೂಪವೂ ಆಗಿವೆ. ಆದ್ದರಿಂದ ಇವುಗಳ ವಿರೋಧ ಪರಿಹಾರವು ಸಮಸ್ತ ಅಧ್ಯಾಯದ ಅರ್ಥವೇ ಆಗಿದೆ. ಪಾದದ ಅರ್ಥವೂ ಕೂಡ ಇದರಲ್ಲಿರುವುದರಿಂದ ಇಲ್ಲಿ ಸ್ಮೃತಿವಿರೋಧವನ್ನು ಪರಿಹರಿಸಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ವಿವರಣೆ - ಇಲ್ಲಿಯ ತನಕ ಹಿಂದಿನ ಅಧ್ಯಾಯದಿಂದ ಎರಡನೆಯ ಅಧ್ಯಾಯಕ್ಕೆ ಹಾಗೂ ಪ್ರಥಮಪಾದಕ್ಕೆ ಸಂಗತಿಯನ್ನು ನಿರೂಪಣೆ ಮಾಡಿದ್ದಾಯಿತು. ಪ್ರಕೃತ ಈ ಪಾದದಲ್ಲಿರುವ ಸ್ಮೃತ್ಯಧಿಕರಣಕ್ಕೆ ಸಂಗತಿಯನ್ನು ನಿರೂಪಣೆ ಮಾಡುತ್ತಿದ್ದಾರೆ. ಈ ಪಾದವು ಸಂಪೂರ್ಣವಾಗಿ ಯುಕ್ತಿವಿರೋಧದ ಪರಿಹಾರಕ್ಕಾಗಿಯೇ ಹೊರಟಿದೆ. ಆದರೆ ಮೊದಲನೆಯ ಅಧಿಕರಣ ಮಾತ್ರ ಯುಕ್ತಿವಿರೋಧವನ್ನು ಪರಿಹಾರ ಮಾಡದೇ ಸ್ಮೃತಿವಿರೋಧವನ್ನು ಪರಿಹಾರ ಮಾಡುತ್ತಿದೆ. ಇದು ಹೇಗೆ ಸರಿ ? ಪಾಶುಪತಾದಿಸ್ಮೃತಿವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಇದು ಸಮಯವಿರೋಧದಲ್ಲಿ ಸೇರುತ್ತದಾದ್ದರಿಂದ ಎರಡನೆಯ ಪಾದದಲ್ಲಿ ಸೇರಬೇಕು. ಅಥವಾ ಯುಕ್ತಿಸಂವಾದದಿಂದ ಕೂಡಿರುವ ಶ್ರುತಿ-ಸ್ಮೃತಿಗಳ ಆಧಾರವನ್ನು ಹೇಳುತ್ತಿರುವುದರಿಂದ ಮೂರನೆಯ ಅಥವಾ ನಾಕನೆಯ ಪಾದದಲ್ಲಿ ಈ ಅಧಿಕರಣವನ್ನು ಉಲ್ಲೇಖ ಮಾಡಬೇಕಿತ್ತು. ಯುಕ್ತಿವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಹೊರಟಿರುವ ಎರಡನೆಯ ಪಾದದಲ್ಲೇಕೆ ಇದನ್ನು ಸೇರಿಸಿದ್ದಾರೆ. ಆದರಲ್ಲೂ ಕೂಡ ಮೊದಲೇ ಇದನ್ನು ಉಲ್ಲೇಖ ಮಾಡಲು ಏನು ಕಾರಣ?

ಈ ಆಶಂಕೆಯನ್ನು ಇಲ್ಲಿ ಪರಿಹರಿಸಿದ್ದಾರೆ. ಸ್ಮೃತಿವಿರೋಧ ಪರಿಹಾರವನ್ನು ಮೊದಲು ಮಾಡುತ್ತಿರುವುದೇ ಸಮಂಜಸವಾಗಿದೆ. ಏಕೆಂದರೆ ಪಾಶುಪತ ಮೊದಲಾದ ಸ್ಮೃತಿಗಳು ಯುಕ್ತಿಯಿಂದ ಕೂಡಿರುವುದರಿಂದ ಯುಕ್ತಿವಿರೋಧರೂಪವೂ ಆಗಿದೆ. ಆದ್ದರಿಂದ ಯುಕ್ತಿವಿರೋಧಪರಿಹಾರಕ್ಕಾಗಿ ಹೊರಟಿರುವ ಈ ಪಾದದಲ್ಲಿ ಈ ಅಧಿಕರಣವು ಅಸಂಗತವಾಗುವುದಿಲ್ಲ. ಇನ್ನು ಎರಡನೆಯ ಅಥವಾ ಮೂರನೆಯ ಪಾದದಲ್ಲಿಯೂ ಕೂಡ

ಈ ಅಧಿಕರಣವನ್ನು ಸೇರಿಸಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಎರಡನೆಯ ಪಾದವು ಕೇವಲ ಸಮಯವಿರೋಧಪರಿಹಾರಕ್ಕಾಗಿ ಹೊರಟಿದೆ. ಮೂರನೆಯ ಪಾದವು ಶ್ರುತಿವಿರೋಧಪರಿಹಾರಕ್ಕಾಗಿ, ನಾಕನೆಯ ಪಾದವು ಶ್ರುತಿಸಹಿತಯುಕ್ತಿವಿರೋಧಪರಿಹಾರಕ್ಕಾಗಿ ಹೊರಟಿದೆ. ಪ್ರಕೃತ ಪಾಶುಪತಾದಿಸ್ಮೃತಿಗಳು ಕೇವಲ ಸಮಯರೂಪವೂ ಆಗಿಲ್ಲ, ಶ್ರುತಿರೂಪವೂ ಆಗಿಲ್ಲ. ಶ್ರುತಿ ಸಹಿತವಾದ ಯುಕ್ತಿರೂಪವೂ ಆಗಿರುವುದಿಲ್ಲ. ಆದ್ದರಿಂದ ಅವುಗಳಲ್ಲಿ ಉಲ್ಲೇಖ ಮಾಡಲು ಇದಕ್ಕೆ ಸಂಗತಿಯಿರುವುದಿಲ್ಲ.

ಹಾಗಾದರೆ ಕೇವಲ ಯುಕ್ತಿವಿರೋಧರೂಪವೂ ಅಲ್ಲದ ಕಾರಣ ಈ ಪಾದದಲ್ಲಿ ಹೇಗೆ ಸೇರುತ್ತದೆ?

ಹೌದು. ಆದ್ದರಿಂದಲೇ ಯುಕ್ತಿವಿರೋಧಪರಿಹಾರಕ್ಕೆ ಮುಂಚಿತವಾಗಿಯೇ ಈ ಅಧಿಕರಣವನ್ನು ಸೇರಿಸಿದ್ದಾರೆ. ಯುಕ್ತಿವಿರೋಧವನ್ನೂ ಕೂಡ ಪರಿಹಾರ ಮಾಡುತ್ತಿರುವುದರಿಂದ ಯುಕ್ತಿಪಾದದಲ್ಲಿ ಸಂಗತಿ ಇರುವುದಿಲ್ಲ. ಅಷ್ಟೇ ಅಲ್ಲದೇ ಎಲ್ಲಾ ಪಾದದಲ್ಲಿಯೂ ಕೂಡ ಈ ಅಧಿಕರಣವು ಸಂಗತವೇ ಆಗುತ್ತದೆ. ಆದರೆ ಯುಕ್ತಿಪಾದದಲ್ಲೂ ಸಂಗತವಾಗುವುದರಿಂದ 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಈ ಅಧಿಕರಣವನ್ನು ಉಲ್ಲೇಖ ಮಾಡಿದ್ದಾರೆ.

ಅಷ್ಟೇ ಅಲ್ಲದೇ ಯುಕ್ತಿ, ಸಮಯ, ಶ್ರುತಿ ಈ ಎಲ್ಲದರ ಸ್ವರೂಪವನ್ನು ತಾಳಿರುವುದರಿಂದ ಈ ಸ್ಮೃತಿವಿರೋಧವು ಅತ್ಯಂತ ಬಲಿಷ್ಠವಾಗಿದೆ. ಆದ್ದರಿಂದ ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿ ಮೊದಲೇ ಇದರ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಪ್ರಥಮಪಾದದ ಪ್ರಾರಂಭದಲ್ಲಿ ಸಂಗತಿಯಿರುತ್ತದೆ.

### ಪಾಶುಪತಾದಿಸ್ಮೃತಿಗಳ ವಿರೋಧವೇ ಪ್ರಬಲ

**ತत्वप्रकाशिका – अनेनास्याधिकरणस्य शास्त्रादिसङ्गतिरुक्ता भवति । वेदप्रामाण्येन जगज्जन्मादिकर्तृत्वं विष्णोरुक्तं । तस्य च पाशुपतादिस्मृतिविरोधे नोक्तजिज्ञासासम्भवतीत्यविरुद्धतां नेतव्यम् ।**

ಹೀಗೆ ಹೇಳಿದ್ದರಿಂದ ಈ ಸ್ಮೃತ್ಯಧಿಕರಣಕ್ಕೆ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳನ್ನು ಹೇಳಿದಂತಾಯಿತು.

ವೇದಪ್ರಾಮಾಣ್ಯದ ಮೂಲಕ ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ಹಿಂದಿನ ಅಧ್ಯಾಯದಲ್ಲಿ ಸಮರ್ಥಿಸಲಾಯಿತು. ಈ ಪ್ರಮೇಯಕ್ಕೆ ಪಾಶುಪತಾದಿಸ್ಮೃತಿಗಳ ವಿರೋಧವು ಪ್ರಾಪ್ತವಾದರೆ

ಪರಮಾತ್ಮನ ವಿಷಯದಲ್ಲಿ ಜಿಜ್ಞಾಸೆಯು ಯುಕ್ತವಾಗುವುದಿಲ್ಲ. ಆದ್ದರಿಂದ ಈ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು. ಅದಕ್ಕಾಗಿ ಈ ಅಧಿಕರಣವು ಹೊರಟಿದೆ.

ವಿವರಣೆ - ಈ ಅಧಿಕರಣವು ಜಗಜ್ಜನ್ಮಾದಿಕಾರಣತ್ವ ವಿಷಯದಲ್ಲಿ ಬರುವ ವಿರೋಧವನ್ನುಪರಿಹಾರಮಾಡುತ್ತಿರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಸಂಗತಿಯನ್ನು ಹೊಂದುತ್ತದೆ. ವಿರೋಧ ಪರಿಹಾರ ಮಾಡುತ್ತಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಯುಕ್ತಿವಿರೋಧ ಪರಿಹಾರ ಮಾಡುತ್ತಿರುವುದರಿಂದ ಪ್ರಥಮಪಾದದಲ್ಲಿ ಸಂಗತವಾಗುತ್ತದೆ. ಮತ್ತು 'ಯತೋ ವಾ ಇಮಾನಿ ಜಾಯಂತೇ' ಇತ್ಯಾದಿ ಶ್ರುತಿಗಳು ವಿಷ್ಣುವಿಗೆ ಜಗಜ್ಜನ್ಮಾದಿಕಾರಣತ್ವವನ್ನು ಹೇಳುತ್ತಿವೆ. ಈ ಲಕ್ಷಣಕ್ಕೆ ಪಾಶುಪತಾದಿಸ್ಮೃತಿಗಳಿಂದ ವಿರೋಧವು ಬರುತ್ತದೆಂದು ಹೇಳಿದ್ದರಿಂದ ಸ್ಮೃತಿಸಂಗತಿಯನ್ನು ಹಾಗೂ ಹಿಂದಿನ ಏತೇನಾಧಿ-ಕರಣದಲ್ಲಿ ಜಗಜ್ಜನ್ಮಾದಿಕರ್ತೃತ್ವದ ಸ್ಥಾಪನೆಯನ್ನು ವಿಷ್ಣುವಿನಲ್ಲಿ ಮಾಡಿರುವುದರಿಂದ ಅದನ್ನು ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದಲೂ ಕೂಡ ಸಂಗತಿಯನ್ನು ಹೊಂದಿರುತ್ತದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿ, ಶ್ರುತಿಸಂಗತಿ, ಅಧಿಕರಣಸಂಗತಿ ಎಂಬುದಾಗಿ ಐದು ಬಗೆಯ ಸಂಗತಿಗಳನ್ನು ಹೊಂದಿದೆಯೆಂದು ತಿಳಿಯಬೇಕು.

ಅಧಿಕರಣದ ಸಂದೇಹಾದಿಗಳು

**ತತ್ವಪ್ರಕಾಶಿಕಾ – तद्विष्णोर्जगजन्मादि कर्तृत्वं विषयः ।। युक्तं न वेति सन्देहः । समयविगानं सन्देहबीजम् । पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद्व्याचष्टे – स्मृतीति ।।**

ಈ ಅಧಿಕರಣಕ್ಕೆ ವಿಷ್ಣುವಿನ ಜಗಜ್ಜನ್ಮಾದಿಕರ್ತೃತ್ವವು ವಿಷಯವಾಗಿದೆ. ವಿಷ್ಣುವಿನಲ್ಲಿ ಜಗಜ್ಜನ್ಮಾದಿಕರ್ತೃತ್ವವು ಯುಕ್ತವಾಗುತ್ತದೋ, ಇಲ್ಲವೋ ? ಎಂಬುದು ಅಧಿಕರಣದ ಸಂದೇಹ. ಸಮಯದಲ್ಲಿರುವ ಪರಸ್ಪರ ವಿರೋಧವು ಸಂದೇಹಕ್ಕೆ ಕಾರಣ.

ಪೂರ್ವಪಕ್ಷವನ್ನು ಸೂತ್ರದಲ್ಲಿಯೇ ಹೇಳಿರುವುದರಿಂದ ಸೂತ್ರವನ್ನೇ ಉಲ್ಲೇಖ ಮಾಡಿ, ಅದರಲ್ಲಿರುವ ಪೂರ್ವಪಕ್ಷಾಂಶವನ್ನು ಭಾಷ್ಯಕಾರರು 'ಸ್ಮೃತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶ್ರುತಿಗೆ ಅನ್ಯಾರ್ಥವನ್ನೇ ಕಲ್ಪನೆ ಮಾಡಬೇಕೆಂದು ಪೂರ್ವಪಕ್ಷ

**तत्वप्रकाशिका – न विष्णोर्जगत्कारणत्वं युक्तम् । तत्प्रमाणाभावात् । न च यतो वा इमानि भूतानि जायन्त इत्यादि श्रुतिः प्रमाणम् । श्रुतेर्विष्णोः जगत्कारणत्वप्रतिपादकत्वे पाशुपतसांख्ययोगादिस्मृतिविराधेना-प्रामाण्याख्यदोषप्रसङ्गादन्यार्थतोपपत्तेः ।।**

ಅಧಿಕರಣದ ಪೂರ್ವಪಕ್ಷ - ವಿಷ್ಣುವಿಗೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣವೇ ಇಲ್ಲ.

ಪ್ರಶ್ನೆ - 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯಾವ ಬ್ರಹ್ಮನಿಂದ ಈ ಸಮಸ್ತ ಪ್ರಾಣಿಗಳು ಹುಟ್ಟುತ್ತವೆಯೋ' ಎಂಬ ಶ್ರುತಿಯು ಪ್ರಮಾಣವಾಗಿದೆಯಲ್ಲವೇ?

ಉತ್ತರ - ಈ ಶ್ರುತಿಯು ವಿಷ್ಣುವಿನ ಜಗತ್‌ಕಾರಣತ್ವವನ್ನು ಪ್ರತಿಪಾದನೆ ಮಾಡುವುದಾದರೆ, ಪಾಶುಪತ ಸ್ಮೃತಿ, ಸಾಂಖ್ಯಸ್ಮೃತಿ, ಯೋಗಸ್ಮೃತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರುತಿಯು ಅಪ್ರಮಾಣವಾಗಬೇಕಾಗುತ್ತದೆ. ಹಾಗಾಗಿ ಶ್ರುತಿಗೆ ಅನ್ಯಾರ್ಥವನ್ನೇ ಕಲ್ಪನೆ ಮಾಡಬೇಕು.

ವಿವರಣೆ - ಪಾಶುಪತ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳು ಪಶುಪತಿ, ಪ್ರಕೃತಿ ಮೊದಲಾದವುಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ವಿಷ್ಣು ಜಗತ್‌ಕಾರಣನಾಗಿದ್ದಾನೆಂಬ ವಿಷಯದಲ್ಲಿ ಅವುಗಳು ತಾತ್ಪರ್ಯವನ್ನು ಹೊಂದಿರುವುದಿಲ್ಲ. ಆದರೆ ನೀವು ವಿಷ್ಣುವೇ ಜಗತ್ ಕಾರಣನಾಗಿದ್ದಾನೆಂದು ಶ್ರುತಿಗಳ ಆಧಾರದಿಂದ ಪ್ರತಿಪಾದನೆ ಮಾಡುತ್ತಿದ್ದೀರಿ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇವೇ ಮೊದಲಾದ ಶ್ರುತಿಗಳಿಗೆ ಈ ಪಾಶುಪತಾದಿಸ್ಮೃತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯದೋಷವು ಬರುವ ಪ್ರಸಂಗವಿದೆ. ಆದ್ದರಿಂದ ಆ ಸ್ಮೃತಿಗಳಿಗೆ ವಿಷ್ಣುಪರವಾಗಿ ಅರ್ಥವನ್ನು ಮಾಡದೇ, ರುದ್ರಾದಿಪರವಾಗಿಯೇ ಅರ್ಥವನ್ನು ಮಾಡಬೇಕು. ಆಗ ಶ್ರುತಿಪ್ರಾಮಾಣ್ಯವನ್ನು ರಕ್ಷಣೆ ಮಾಡಿದಂತಾಗುತ್ತದೆ. ಹಾಗಾಗಿ ಹಿಂದಿನ ಅಧ್ಯಾಯದಲ್ಲಿ ವಿಷ್ಣು ಜಗತ್‌ಕಾರಣನಾಗಿದ್ದಾನೆಂದು ಹೇಳಿದ್ದು ಅಯುಕ್ತವಾಗಿದೆ.

ವಸ್ತುವಿನಲ್ಲಿ ವಿಕಲ್ಪವಿಲ್ಲದ್ದರಿಂದ ಸ್ಮೃತಿ ಹೇಳಿದ್ದೇ ಸತ್ಯ

**तत्वप्रकाशिका – पाशुपतादिस्मृतीनां रुद्रादेर्जगत्कारणत्वप्रतिपादकत्वात् ।। न च विरोधेऽप्यप्रामाण्याभावः । वस्तुनि विकल्पप्रसंङ्गात् । न च देशकालादिभेदेन**

**श्रुतिस्मृत्योरविरोधः । स्मृतिषु रुद्रादेः सकलजगज्जन्मादिकर्तृत्वाभिधानात् । न च वाच्यं श्रुतिविरोधेन स्मृतीनामेवान्यार्थत्वमप्रामाण्यं वा किं न स्यात् । विरोधे त्वनपेक्षं स्यादसति ह्यनुमानमिति न्यायादिति ।**

ಪ್ರಶ್ನೆ - ಪಾಶುಪತಾದಿಸ್ಮೃತಿಗಳಿಂದ ವೇದಕ್ಕೆ ವಿರೋಧ ಬಂದ ಮಾತ್ರಕ್ಕೆ ಅಪ್ರಾಮಾಣ್ಯವನ್ನೇಕೆ ಒಪ್ಪಬೇಕು?

ಉತ್ತರ - ಹಾಗಾದಲ್ಲಿ ವಸ್ತುವಿನಲ್ಲಿ ವಿಕಲ್ಪವನ್ನು ಒಪ್ಪಿದಂತಾಗುತ್ತದೆ. ಒಂದೇ ವಸ್ತುವಿಗೆ ವಿರುದ್ಧವಾದ ಎರಡು ಸ್ವರೂಪವು ಬರಬೇಕಾದೀತು.

ಪ್ರಶ್ನೆ - ಒಂದು ದೇಶ, ಒಂದು ಕಾಲದಲ್ಲಿ ಶಿವನಿಗೆ ಜಗತ್ಕಾರಣತ್ವವನ್ನು ಮತ್ತೊಂದು ದೇಶ, ಮತ್ತೊಂದು ಕಾಲದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಒಪ್ಪಿದರೆ ವಿರೋಧವು ಬರುವುದಿಲ್ಲ. ಶ್ರುತಿ-ಸ್ಮೃತಿಗಳೂ ಕೂಡ ಅವಿರುದ್ಧವಾಗುತ್ತವೆ.

ಉತ್ತರ - ಈ ಪ್ರಶ್ನೆಯೂ ಕೂಡ ತಪ್ಪು. ರುದ್ರನು ಸಕಲ ದೇಶ, ಸಕಲ ಕಾಲಗಳಲ್ಲಿ ಜಗತ್ ಕಾರಣನಾಗಿದ್ದಾನೆಂದು ಹೇಳಲಾಗಿದೆ. ಶ್ರುತಿಯಲ್ಲಿ ವಿಷ್ಣುವೇ ಸಕಲವೇದ, ಸಕಲ ಕಾಲಗಳಲ್ಲಿ ಜಗತ್ಕಾರಣನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ವಿರೋಧ ತಪ್ಪಿದ್ದಲ್ಲ.

ಪ್ರಶ್ನೆ - ಶ್ರುತಿವಿರೋಧ ಬರುವುದರಿಂದ ಸ್ಮೃತಿಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬಹುದು. ಅಥವಾ ಅಪ್ರಾಮಾಣ್ಯವನ್ನು ಹೇಳಬಹುದು. ಶ್ರುತಿಗಳಿಗೆ ಏಕೆ ಅನ್ಯಾರ್ಥವನ್ನು ಹಾಗೂ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬೇಕು ?

'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿ ಹ್ಯನುಮಾನಮ್' ಎಂಬ ಜೈಮಿನಿಸೂತ್ರದಲ್ಲಿ ಇದನ್ನೇ ಸಮರ್ಥಿಸಲಾಗಿದೆ.

ವಿವರಣೆ - ಪೂರ್ವಪಕ್ಷಕಾರರು ಪಾಶುಪತಾದಿಸ್ಮೃತಿಗಳು ಪರಮ ಪ್ರಮಾಣವಾಗಿವೆ. ಇದಕ್ಕನುಗುಣವಾಗಿ ಶ್ರುತಿಗಳಿಗೆ ಅರ್ಥವನ್ನು ಮಾಡಿದಾಗ, ಸಕಲ ಶ್ರುತಿ-ಸ್ಮೃತಿಗಳು ರುದ್ರನ ಜಗತ್ಕಾರಣತ್ವವನ್ನೇ ಸಮರ್ಥನೆ ಮಾಡುತ್ತಿದೆ ಎಂದು ಹೇಳುತ್ತಿದ್ದಾರೆ. ಪೂರ್ವಪಕ್ಷಕಾರರ ಮೇಲೆ ಬರುವ ಅಧಿಕ ಆಕ್ಷೇಪವನ್ನು ಇಲ್ಲಿ ಪರಿಹರಿಸಲಾಗಿದೆ -

ಪಾಶುಪತಾದಿಸ್ಮೃತಿಗಳಿಂದ ಶ್ರುತಿಗಳಿಗೆ ವಿರೋಧ ಬರಬಹುದು. ಅಂದಮಾತ್ರಕ್ಕೆ ಅಪ್ರಾಮಾಣ್ಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಶ್ರುತಿ ಹೇಳುವ ಅರ್ಥ ಹಾಗೂ ಸ್ಮೃತಿ ಹೇಳುವ

ಅರ್ಥ ಎರಡನ್ನೂ ಸ್ವೀಕರಿಸಿದಾಗ ಏನೂ ಸಮಸ್ಯೆ ಬರುವುದಿಲ್ಲ. ಈ ಆಕ್ಷೇಪಕ್ಕೆ ವಿರುದ್ಧವಾದ ಎರಡು ಸ್ವರೂಪವನ್ನು ಹೇಳಿದಂತಾಗುತ್ತದೆಂಬ ದೋಷವನ್ನು ಹೇಳಿದ್ದಾರೆ.

ರುದ್ರನು ಯಾವ ದೇಶದಲ್ಲಿ ಕಾರಣಪುರುಷನಾಗಿದ್ದಾನೋ, ಆ ದೇಶವನ್ನು ಬಿಟ್ಟು, ಮತ್ತೊಂದು ದೇಶದಲ್ಲಿ ವಿಷ್ಣು ಕಾರಣಪುರುಷನಾಗಿದ್ದಾನೆ. ಅಥವಾ ಈ ಕಾಲದಲ್ಲಿ ರುದ್ರನು ಜಗತ್- ಕಾರಣನಾಗಿದ್ದರೂ ಕೂಡ ಮತ್ತೊಂದು ಕಾಲದಲ್ಲಿ ವಿಷ್ಣುವು ಜಗತ್ ಕಾರಣನಾಗಿದ್ದಾನೆಂದು ಹೇಳಬಹುದು. ಹೀಗೆ ದೇಶ-ಕಾಲಗಳೆಂಬ ಉಪಾಧಿಯ ಭೇದದಿಂದ ವಿರೋಧವನ್ನು ಪರಿಹಾರ ಮಾಡಬಹುದೆಂಬುದು ಅಧಿಕಾಕ್ಷೇಪ. ಆದರೆ ಇದೂ ಕೂಡ ಸರಿಯಲ್ಲ. ಪಾಶುಪತಾದಿಸ್ಮೃತಿಗಳು, ಸಕಲ ದೇಶ, ಸಕಲ ಕಾಲಗಳಲ್ಲಿ ಶಿವನೊಬ್ಬನನ್ನೇ ಜಗತ್‌ಕಾರಣನೆಂದು ಹೇಳುತ್ತಿರುವಾಗ, ಒಂದು ದೇಶ ಅಥವಾ ಒಂದು ಕಾಲದಲ್ಲಷ್ಟೇ ಶಿವನಿಗೆ ಜಗತ್‌ಕಾರಣತ್ವವನ್ನು ಒಪ್ಪುವುದು ಸ್ಮೃತಿ ಸಮ್ಮತವಾಗುವುದಿಲ್ಲ.

ಸ್ಮೃತಿ-ಶ್ರುತಿಗಳ ಪರಸ್ಪರ ವಿರೋಧ ಬಂದರೆ, ಸ್ಮೃತಿಯು ದುರ್ಬಲವಾದ್ದರಿಂದ ಅದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು ಹೊರತು, ಶ್ರುತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬಾರದು. 'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿ ಹ್ಯನುಮಾನಮ್' ಎಂಬ ಜೈಮಿನಿಸೂತ್ರವು ಇದನ್ನೇ ಹೇಳುತ್ತಿದೆ. ಸ್ಮೃತಿಯಿಂದ ವಿರೋಧವು ಪ್ರಾಪ್ತವಾದರೆ, 'ಅನಪೇಕ್ಷಂ' ಶ್ರುತಿಯ ಪ್ರಾಮಾಣ್ಯವನ್ನು ಸ್ವೀಕಾರ ಮಾಡದೇ ಇರುವುದು ತಪ್ಪಾಗುತ್ತದೆ. ಏಕೆಂದರೆ 'ವಿರೋಧೇ ಅಸತಿ' ಸ್ಮೃತಿಗೆ ಶ್ರುತಿಯಿಂದ ವಿರೋಧವಿಲ್ಲದಿದ್ದರೆ ಮಾತ್ರ ಸ್ಮೃತಿಯು 'ಅನುಮಾನಂ' ಅನುಮಾನಪ್ರಮಾಣದ ಮೂಲಕ ಪ್ರಮಾಣವೆನಿಸುತ್ತವೆ ಎಂಬುದು ಈ ಸೂತ್ರದ ಅಭಿಪ್ರಾಯ. ಆದ್ದರಿಂದ ಶ್ರುತಿಯ ವಿರೋಧವು ಬರುವುದರಿಂದ ಸ್ಮೃತಿವಾಕ್ಯಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು ಎಂಬುದು ಪೂರ್ವಪಕ್ಷಕಾರರ ಮೇಲಿರುವ ಆಕ್ಷೇಪ. ಈ ಆಕ್ಷೇಪವನ್ನು ಮುಂದೆ ಪೂರ್ವಪಕ್ಷಕಾರರು ಪರಿಹರಿಸುತ್ತಾರೆ.

### ಶ್ರುತಿಗಳಲ್ಲಿರುವ ಅಕ್ಷರಗಳು ಆಕಸ್ಮಿಕ

**तत्वप्रकाशिका – प्रबलविराघेनैव दुर्बलस्यान्यार्थतादेः कल्पनीयत्वात् । न हि स्मृतिभ्यः श्रुतेः प्राबल्यमस्ति । स्मृतीनां रुद्रकपिलकमलासनादिभिराप्तै-र्विरचितानां दोषाभावगुणयुक्तत्वात् । रुद्रादीनां सार्वज्ञस्य जगद्धितोपदेष्टृत्वस्य च प्रसिद्धत्वात् । श्रुतेश्च कर्तृगुणशून्यत्वेन पिपीलिकालिपिनिभत्वात् ।**

ಉತ್ತರ - ಪ್ರಬಲವಾದ ವಿರೋಧ ಬಂದಾಗ ದುರ್ಬಲವಾದದ್ದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು. ಪ್ರಕೃತ ಪಾಶುಪತಾದಿಸ್ಮೃತಿಗಳಿಗಿಂತ ಶ್ರುತಿಗಳಿಗೆ ಪ್ರಾಬಲ್ಯವು ಇರುವುದಿಲ್ಲ. ಏಕೆಂದರೆ ರುದ್ರ, ಕಪಿಲ, ಚತುರ್ಮುಖಬ್ರಹ್ಮ ಮೊದಲಾದ ಆಪ್ತರಿಂದ ಸ್ಮೃತಿಗ್ರಂಥಗಳು ರಚಿತವಾಗಿವೆ. ಆಪ್ತರಾದವರಲ್ಲಿ ದೋಷವಿಲ್ಲದ ಕಾರಣ ಅವರಿಂದ ರಚಿತವಾದ ಸ್ಮೃತಿಗ್ರಂಥಗಳಲ್ಲಿಯೂ ಕೂಡ ದೋಷವು ಇರುವುದಿಲ್ಲ. ರುದ್ರಾದಿಗಳಲ್ಲಿ ಸಾರ್ವಜ್ಞ್ಯ, ಜಗತ್ತಿಗೆ ಹಿತವಾದದ್ದನ್ನು ಉಪದೇಶ ಮಾಡುವಿಕೆ ಇವೇ ಮೊದಲಾದ ಗುಣಗಳು ಪ್ರಸಿದ್ಧವಾಗಿವೆ. ಆದರೆ ಶ್ರುತಿಗಳು ಯಾರಿಂದಲೂ ರಚಿತವಾಗಿರುವುದಿಲ್ಲ. ಇರುವೆಯ ಸಾಲುಗಳಂತೆ ಆಕಸ್ಮಿಕವಾದ ಅಕ್ಷರಗಳ ಜೋಡಣೆಯಾಗಿವೆ. ಆದ್ದರಿಂದಲೇ ದುರ್ಬಲ ಎನಿಸುತ್ತವೆ.

ವಿವರಣೆ - ಪರಸ್ಪರ ವಿರೋಧ ಬಂದರೆ ಅವೆರಡರಲ್ಲಿ ಯಾವುದು ಪ್ರಬಲ ಎಂಬುದನ್ನು ವಿಚಾರ ಮಾಡಬೇಕು. ಪ್ರಬಲವಾದ್ದರಿಂದ ದುರ್ಬಲಕ್ಕೆ ಬಾಧ ಹೇಳಬೇಕೇ ಹೊರತು, ದುರ್ಬಲವಾದ್ದರಿಂದ ಪ್ರಬಲಕ್ಕೆ ಬಾಧವನ್ನು ಹೇಳಲೇಬಾರದು. ಪ್ರಕೃತ ಶ್ರುತಿಯು ವಿಷ್ಣುವಿನ ಜಗತ್ಕಾರಣತ್ವವನ್ನು ಹೇಳುತ್ತಿದೆ. ಸ್ಮೃತಿಯು ರುದ್ರನ ಜಗತ್ಕಾರಣತ್ವವನ್ನು ಹೇಳುತ್ತಿದೆ. ಹೀಗೆ ಶ್ರುತಿ-ಸ್ಮೃತಿಗಳಲ್ಲಿ ಪರಸ್ಪರ ವಿರೋಧವು ಬಂದಿರುವುದರಿಂದ ಯಾವುದಕ್ಕೆ ಬಾಧವನ್ನು ಹೇಳಬೇಕು ಎಂದರೆ ಶ್ರುತಿಗಳಿಗೆ ಬಾಧವನ್ನು ಹೇಳಬೇಕು ಹೊರತು, ಸ್ಮೃತಿಗಳಿಗೆ ಹೇಳಬಾರದು. ಶ್ರುತಿಗಳಿಗಿಂತಲೂ, ಸ್ಮೃತಿಗಳು ಬಲಿಷ್ಠವಾಗಿವೆ. ಜಗತ್ತಿಗೆ ಹಿತವಾದದ್ದನ್ನೇ ಉಪದೇಶ ಮಾಡುವ ಗುಣಗಳನ್ನು ಹೊಂದಿರುವ ಯಥಾರ್ಥವಾದ ಸಾರ್ವಜ್ಞ್ಯವನ್ನು ಹೊಂದಿರುವ ರುದ್ರಾದಿ ಆಪ್ತರು ಈ ಪಾಶುಪತಾದಿಸ್ಮೃತಿಗಳನ್ನು ರಚನೆ ಮಾಡಿರುತ್ತಾರೆ. ಆದ್ದರಿಂದ ಇವುಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡುವುದು ತಪ್ಪಾಗುತ್ತದೆ. ಆದರೆ ಶ್ರುತಿಗಳನ್ನು ಯಾರೊಬ್ಬರೂ ಕೂಡ ರಚನೆ ಮಾಡಿರುವುದಿಲ್ಲವಾದ್ದರಿಂದ ದುರ್ಬಲವಾಗಿವೆ ಎಂದು ಸಿದ್ಧವಾಗುತ್ತದೆ.

### ಶ್ರುತಿಗೆ ಮೂಲ ಸ್ಮೃತಿ

**तत्वप्रकाशिका – कचिच्छ्रुतिविरोधेन स्मृतेरर्थान्तरकल्पनादि तु स्मृतेः श्रुतिमूलत्व एव भवति । मूलमूलिनोर्मूलस्य प्रबलत्वात् ।**

ಕೆಲವೆಡೆ ಸ್ಮೃತಿವಿರೋಧ ಬಂದಾಗ ಸ್ಮೃತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡುವುದು ಕಂಡಿದೆ. ಆದರೆ ಆ ಸ್ಮೃತಿಯು ಶ್ರುತಿಯನ್ನು ಉಪಜೀವಿಸಿಕೊಂಡಿದ್ದಾಗ ಮಾತ್ರ ಹೀಗೆ

ಅನ್ಯಾರ್ಥವನ್ನು ಕಲ್ಪನೆ ಮಾಡಲಾಗುತ್ತದೆ. ಏಕೆಂದರೆ ಮೂಲ ಹಾಗೂ ಮೂಲಿಗಳಲ್ಲಿ ಮೂಲವೇ ಪ್ರಬಲವಾಗಿರುತ್ತದೆಂಬುದು ನಿಯಮಸಿದ್ಧವಾಗಿದೆ.

ವಿವರಣೆ - ಶ್ರುತಿ-ಸ್ಮೃತಿಗಳಿಗೆ ವಿರೋಧ ಬಂದರೆ ಸ್ಮೃತಿಯೇ ಬಲಿಷ್ಠ ಎಂಬುದು ಸಾಮಾನ್ಯನಿಯಮ. ಕೆಲವೊಮ್ಮೆ ಈ ಸ್ಮೃತಿಯು ದುರ್ಬಲವಾಗುತ್ತದೆ. ಯಾವಾಗ ಸ್ಮೃತಿಯು ಶ್ರುತಿಯನ್ನು ಅವಲಂಬಿಸಿರುತ್ತದೋ, ಆಗ ಶ್ರುತಿಯು ಮೂಲವಾಯಿತು. ಸ್ಮೃತಿಯು ಮೂಲಿಯಾಯಿತು. ಮೂಲ ಹಾಗೂ ಮೂಲಿಗಳಲ್ಲಿ ಮೂಲವೇ ಪ್ರಬಲವೆಂಬುದು ನಿಯಮ. ಆದ್ದರಿಂದ ಸ್ಮೃತಿಯು ಎಲ್ಲಿ ಶ್ರುತಿಯನ್ನು ಅವಲಂಬಿಸಿರುವುದಿಲ್ಲವೋ, ಅಲ್ಲಿ ಮಾತ್ರ ಪ್ರಬಲವಾಗಿರುತ್ತದೆ. ಒಂದು ವೇಳೆ ಶ್ರುತಿಯನ್ನು ಅವಲಂಬಿಸಿದರೆ ಆಗ ಶ್ರುತಿಯನ್ನು ಅವಲಂಬಿಸಿದೆ ಎಂಬ ಕಾರಣದಿಂದಲೇ ಅದು ದುರ್ಬಲವಾಗುತ್ತದೆಂದು ತಿಳಿಯಬೇಕು.

ವಿಷ್ಣುವಿನ ಜಿಜ್ಞಾಸೆಯು ಅನಾವಶ್ಯಕವೆಂದು ಪೂರ್ವಪಕ್ಷ

**ತत्वप्रकाशिका – न च पाशुपतादिस्मृतीनां श्रुतिमूलत्वम् । रुद्रादिप्रत्यक्षस्यैव तन्मूलत्वात् । अतः पाशुपतादिस्मृतीनामाप्तप्रणीतानां प्रबलत्वेन निरवकाशत्वाच्छ्रुतेश्च तद्विरुद्धाभिधायकत्वेऽप्रामाण्यस्यैव प्रसङ्गान्न तया विष्णोर्जगत्कारणत्वं सिध्यति तस्मान्न तस्य जिज्ञास्यतेति भावः ॥ सिद्धान्तांशं व्याचष्टे ॥ नेति ॥**

ಪಾಶುಪತಾದಿಸ್ಮೃತಿಗಳು ಶ್ರುತಿಮೂಲಕವಲ್ಲ, ರುದ್ರಾದಿಪ್ರತ್ಯಕ್ಷಗಳೇ ಅದಕ್ಕೆ ಮೂಲ ಎನಿಸಿವೆ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಆಪ್ತಪ್ರಣೀತವಾದ್ದರಿಂದ ಪ್ರಬಲವಾಗಿವೆ. ಆದ್ದರಿಂದಲೇ ನಿರವಕಾಶವಾಗಿವೆ. ಶ್ರುತಿಗಳು ಇಂಥ ಸ್ಮೃತಿಗಳಿಗೆ ವಿರುದ್ಧವಾದ ವಿಷಯವನ್ನು ಪ್ರತಿಪಾದನೆ ಮಾಡುವುದಾದರೆ ಅಪ್ರಾಮಾಣ್ಯವನ್ನೇ ಹೊಂದುತ್ತವೆ. ಇಂಥ ಅಪ್ರಮಾಣವಾದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ವಿಷ್ಣುವಿನ ಜಿಜ್ಞಾಸೆಯು ಮಾಡಬೇಕಾಗಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ವಿಷ್ಣುವಿನ ಜಿಜ್ಞಾಸೆ ಅತ್ಯವಶ್ಯವೆಂದು ಸಿದ್ಧಾಂತ

**तत्वप्रकाशिका – युक्तमेव विष्णोर्जगत्कारणत्वं श्रुत्युदितत्वात् । न च श्रुतेर्विष्णोर्जगत्कारणत्वाभिप्राये पाशुपतादिस्मृतिविरोधेनाप्रामाण्यप्रसङ्गादर्थान्तरत्व-**

**मिति वाच्यम् । श्रुतिविरोधेन स्मृतीनामेवाप्रामाण्याख्यदोषप्रसङ्गात् ।**

ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ ಆಗಿದೆ. ಈ ವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗಿವೆ.

ಪ್ರಶ್ನೆ - ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ. ಈಗಾಗಲೇ ಪೂರ್ವಪಕ್ಷದಲ್ಲಿ ಹೇಳಿದಂತೆ ಪಾಶುಪತಾದಿಸ್ಮೃತಿಗಳ ವಿರೋಧ-ವಿರುವುದರಿಂದ ಶ್ರುತಿಗೆ ಅಪ್ರಾಮಾಣ್ಯಪ್ರಸಂಗವಿದೆ. ಹಾಗಾಗಿ ಅರ್ಥಾಂತರವನ್ನೇ ಹೇಳಬೇಕಲ್ಲವೇ?

ಉತ್ತರ - ಈ ಪ್ರಶ್ನೆ ತಪ್ಪು. ಶ್ರುತಿ ವಿರೋಧವಿರುವುದರಿಂದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯದೋಷ ಬರುತ್ತದೆ.

ಪಾಶುಪತಾದಿ ಸ್ಮೃತಿಗಳಿಗಿಂತಲೂ ಶ್ರುತಿಯಲ್ಲಿ ಆಧಿಕ್ಯವಿದೆ

**तत्वप्रकाशिका – न च स्मृतिभ्यः श्रुतेराधिक्याभावेनाबाधकत्वम् । पञ्चरादिस्मृत्यनुकूलत्वेन पाशुपतादिस्मृतिभ्यः श्रुतेराधिक्यसिद्धेः । न च वक्तव्यं पञ्चरात्रादिस्मृत्यानुकूल्येऽपि कथं श्रुतेराधिक्यमिति । तासां विष्ण्वादिभिर्नितरां सर्वज्ञैर्जगद्धितोपदेष्टृभिः प्रणीतत्वात् ।**

ಪ್ರಶ್ನೆ - ಸ್ಮೃತಿಗಳಿಗಿಂತ ಶ್ರುತಿಯಲ್ಲಿ ಯಾವುದೇ ಆಧಿಕ್ಯವಿಲ್ಲ. ಆದ್ದರಿಂದ ಸ್ಮೃತಿಗಳನ್ನು ಶ್ರುತಿಗಳು
ಬಾಧಿಸುವುದಿಲ್ಲ.

ಉತ್ತರ - ಪಂಚರಾತ್ರಾದಿಸ್ಮೃತಿಗಳ ಆನುಕೂಲ್ಯವು ಶ್ರುತಿಗಳಿಗಿರುವುದರಿಂದ ಪಾಶುಪತಾದಿ-ಸ್ಮೃತಿಗಳಿಗಿಂತಲೂ ಶ್ರುತಿಗೆ ಆಧಿಕ್ಯವಿರುತ್ತದೆ.

ಪ್ರಶ್ನೆ - ಪಂಚರಾತ್ರಾದಿಸ್ಮೃತಿಗಳಿಂದ ಆನುಕೂಲ್ಯವಿದ್ದ ಮಾತ್ರಕ್ಕೆ ಶ್ರುತಿಯಲ್ಲಿ ಆಧಿಕ್ಯವು ಹೇಗೆ ಸಿದ್ಧವಾಗುತ್ತವೆ ?

ಉತ್ತರ - ಆ ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞತಮನಾದ ಮಹಾವಿಷ್ಣುವಿನಿಂದ ರಚಿತವಾಗಿವೆ. ಮತ್ತು ಆ ವಿಷ್ಣುವು ಜಗತ್ತಿಗೆ ಅತ್ಯಂತ ಹಿತವಾದದ್ದನ್ನೇ ಉಪದೇಶ ಮಾಡುತ್ತಾನೆ.

**ವಿವರಣೆ** - ಪೂರ್ವಪಕ್ಷದಲ್ಲಿ ವೇದಗಳಿಗಿಂತ ಪಂಚರಾತ್ರಾದಿಸ್ಮೃತಿಗಳೇ ಪ್ರಬಲವಾಗಿವೆ ಎಂದು ಆಕ್ಷೇಪ ಮಾಡಲಾಗಿತ್ತು. ಅದಕ್ಕೆ ವಿರುದ್ಧವಾಗಿ ಇಲ್ಲಿ ಶ್ರುತಿಯೇ ಪ್ರಬಲವಾಗಿದೆಯೆಂದು ಸಮರ್ಥನೆ ಮಾಡುತ್ತಿದ್ದಾರೆ. ಪ್ರಬಲವಾದ ಶ್ರುತಿಗಳಿಂದ ವಿರೋಧವಿರುವ ಕಾರಣ ಪಾಶುಪತಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗುತ್ತವೆ. ಪಂಚರಾತ್ರಾದಿಸ್ಮೃತಿಗಳ ಸಹಾಯವಿದ್ದ ಮಾತ್ರಕ್ಕೆ ಶ್ರುತಿಯು ಪಾಶುಪತಾದಿಸ್ಮೃತಿಗಳಿಗಿಂತ ಹೇಗೆ ಪ್ರಬಲವಾಗುತ್ತದೆಂದು ಪೂರ್ವಪಕ್ಷಕಾರರು ಇಲ್ಲಿ ಆಕ್ಷೇಪ ಮಾಡಬಹುದು ಆದರೆ ಪಾಶುಪತಾದಿಸ್ಮೃತಿಗಳನ್ನು ರಚನೆ ಮಾಡುವ ರುದ್ರನಲ್ಲಿ ಎಷ್ಟು ಆಪ್ತತ್ವವಿದೆಯೋ, ಅದಕ್ಕಿಂತಲೂ ಹೆಚ್ಚು ಆಪ್ತತ್ವ ಪಂಚರಾತ್ರಸ್ಮೃತಿಯನ್ನು ರಚನೆ ಮಾಡಿದ ಮಹಾವಿಷ್ಣುವಿನಲ್ಲಿದೆ. ಏಕೆಂದರೆ ರುದ್ರನಿಗಿಂತ ಹೆಚ್ಚಿನ ಸಾರ್ವಜ್ಞ್ಯ ವಿಷ್ಣುವಿನಲ್ಲಿದೆ. ರುದ್ರನಿಗಿಂತ ಹೆಚ್ಚು ಜಗತ್ತಿಗೆ ಹಿತೋಪದೇಶಕತ್ವವೂ ಕೂಡ ವಿಷ್ಣುವಿನಲ್ಲಿದೆ. ಹಾಗಾಗಿ ರುದ್ರಾದಿಗಳಿಗಿಂತ ವಿಷ್ಣು ಹೆಚ್ಚು ಆಪ್ತನಾದ ಕಾರಣ ಪಂಚರಾತ್ರಸ್ಮೃತಿಯು ಪಾಶುಪತಸ್ಮೃತಿಗಿಂತ ಶ್ರೇಷ್ಠವಾಗುತ್ತದೆ. ಇಂಥ ಸ್ಮೃತಿಸಂವಾದವಿರುವ ಪ್ರಯುಕ್ತ ಶ್ರುತಿಯು ಇನ್ನಷ್ಟು ಪ್ರಬಲವಾಗುತ್ತದೆ.

### ಪಂಚರಾತ್ರಾದಿಸ್ಮೃತಿಗಳ ಬೆಂಬಲ ಶ್ರುತಿಗಳಿಗಿದೆ

**तत्वप्रकाशिका – कुतो विष्ण्वादीनां रुद्रादिभ्योऽप्याप्ततमत्वम् । तदुक्तस्य श्रुतौ संवाददर्शनात्। रुद्राद्युक्तस्य संवादहीनत्वात् । अतो वैष्णवस्मृतीनां परमाप्तैः पुरषोत्तमादिभिः तत्साहाय्यवत्या श्रुत्या विरोधेऽप्रमाण्यप्रसङ्ग इति युक्तमेव विष्णोर्जगत्करणत्वं जिज्ञास्यात्वं चेति भावः ।।**

ಪ್ರಶ್ನೆ - ವಿಷ್ಣುವಿಗೆ ರುದ್ರಾದಿಗಳಿಗಿಂತ ಹೆಚ್ಚು ಆಪ್ತತಮತ್ವವು ಹೇಗೆ ಬರುತ್ತದೆ ?

ಉತ್ತರ - ವಿಷ್ಣುವಿನಿಂದ ಹೇಳಲ್ಪಟ್ಟ ವಿಷಯವು ಶ್ರುತಿಸಂವಾದವುಳ್ಳದ್ದಾಗಿದೆ. ರುದ್ರಾದಿಗಳಿಗೆ ಹೇಳಲ್ಪಟ್ಟ ವಿಷಯವು ಶ್ರುತಿಸಂವಾದ ಹೀನವಾಗಿದೆ. ಆದ್ದರಿಂದ ವೈಷ್ಣವಸ್ಮೃತಿಗಳೆನಿಸಿದ ಪಂಚರಾತ್ರಾದಿಗಳೆಲ್ಲವೂ ಪರಮಾಪ್ತತಮನಾದ ಪುರುಷಾಗ್ರಣಿಯಾದ ಮಹಾವಿಷ್ಣುವಿನಿಂದ

ಪ್ರಣೀತವಾದ ಕಾರಣ ನಿರವಕಾಶ ಎನಿಸಿವೆ. ಪಾಶುಪತಾದಿಸ್ಮೃತಿಗಳಿಗೆ ಈ ಪಂಚರಾತ್ರಾದಿ-ಸ್ಮೃತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯವೇ ಪ್ರಾಪ್ತವಾಗುತ್ತದೆ. ಹೀಗಿರುವಾಗ ಪಂಚರಾತ್ರಾದಿಸ್ಮೃತಿಗಳ ಸಹಾಯವುಳ್ಳ ಶ್ರುತಿಯಿಂದ ವಿರೋಧವು ಬಂದರೆ ಅಪ್ರಾಮಾಣ್ಯವು ಬಂದೇ ಬರುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಹೀಗೆ ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುತ್ತದೆ. ಅವನ ಜಿಜ್ಞಾಸ್ಯತ್ವವೂ ಯುಕ್ತವಾಗುತ್ತದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

**भावदीपः –**

श्रीमद्धनुमद्भीममध्वान्तर्गतरामकृष्णवेदव्यासात्मकक्ष्मीहबग्रीवाय नमः।

### ಮಂಗಳಾಚರಣೆ

यत्पादपद्मे संस्मृत्य लोकोऽवद्यान्यवद्यति ।
तं वन्दे परमा(नन्द)त्मानमिन्दिरामन्दिरोरसम्॥ १ ॥

ಯಾರ ಪಾದಪದ್ಮಗಳನ್ನು ಸ್ಮರಣೆ ಮಾಡುವ ಮಾತ್ರದಿಂದ ಲೋಕವು ದೋಷದಿಂದ ಮುಕ್ತವಾಗುತ್ತದೋ, ಯಾರ ವಕ್ಷಸ್ಥಳದಲ್ಲಿ ಇಂದಿರೆಯು ಮನೆ ಮಾಡಿರುವಳೋ ಅಂತಹ ಪರಮಾನಂದರೂಪಿಯಾದ ಪರಮಾತ್ಮನನ್ನು ಭಕ್ತಿಯಿಂದ ನಮಿಸುವೆ.

### 'ಉಕ್ತೇ ಅರ್ಥೇ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – स्मृत्यनवकाशदोषप्रसङ्ग इति चेन्नान्यस्मृत्यनवकाश-दोषप्रसङ्गात् ।। १ ।।** उक्तेऽर्थ इत्यादेरुपयोगस्यास्पष्टत्वादाह **– पूर्वाध्यायेति ।।** अर्थेति ग्राह्यम्। उक्तेऽर्थे मानोक्तिं विना अविरोधोक्तिरसङ्गतेत्यतो व्याचष्टे – **अशेषेति ।।**

'ಸ್ಮೃತ್ಯನವಕಾಶದೋಷಪ್ರಸಂಗಃ ಇತಿ ಚೇನ್ನಾನ್ಯತ್ ಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದಿಂದ ಎರಡನೇ ಅಧ್ಯಾಯವು ಪ್ರಾರಂಭವಾಗುತ್ತಿದೆ. ಭಾಷ್ಯದಲ್ಲಿ 'ಉಕ್ತೇ ಅರ್ಥೇ' 'ಅವಿರೋಧಂ ದರ್ಶಯತಿ' ಎಂದು ಹೇಳಿದ್ದಾರೆ. ಹಿಂದೆ ಹೇಳಿದ ಯಾವ ಅರ್ಥವೆಂಬುದು ಇದರಿಂದ ಸ್ಪಷ್ಟವಾಗುವುದಿಲ್ಲ. ಆದ್ದರಿಂದ ಈ ಭಾಷ್ಯದ ಮಾತಿಗೆ ಸ್ಪಷ್ಟವಾದ ಅರ್ಥವನ್ನು ತಿಳಿಸುವುದಕ್ಕಾಗಿ ಟೀಕೆಯಲ್ಲಿ 'ಪೂರ್ವಾಧ್ಯಾಯಾರ್ಥಸಂಗತತ್ವೇನ' ಎಂದು ಹೇಳಿದ್ದಾರೆ. ಇಲ್ಲಿ 'ಪೂರ್ವಾಧ್ಯಾಯಾರ್ಥಸಂಗತತ್ವೇನ' ಎಂಬುದಾಗಿ ಅರ್ಥಪದವನ್ನು ಸೇರಿಸಿ ಪಠನ ಮಾಡಬೇಕು. ಹಿಂದಿನ ಅಧ್ಯಾಯದ ಯಾವ ಅರ್ಥವಿದೆಯೋ ಅದಕ್ಕೆ ಸಂಗತವಾಗುವಂತೆ ಎರಡನೇ ಅಧ್ಯಾಯದ ಅರ್ಥವನ್ನು 'ಉಕ್ತೇ ಅರ್ಥೇ' ಎಂಬ ಭಾಷ್ಯದ ಮಾತಿನಲ್ಲಿ ತೋರಿಸುತ್ತಿದ್ದಾರೆ. ಹಿಂದಿನ ಅಧ್ಯಾಯದಲ್ಲಿ ಯಾವ ಅರ್ಥವನ್ನು ಹೇಳಲಾಗಿದೆಯೋ ಅದಕ್ಕೆ ಪ್ರಮಾಣವನ್ನು ಹೇಳದೇ ಎರಡನೇ ಅಧ್ಯಾಯದಲ್ಲಿ ಅವಿರೋಧವನ್ನು ಹೇಳುವುದು ಅಸಂಗತವಾಗುತ್ತದಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಅದಕ್ಕಾಗಿ ಭಾಷ್ಯದ ಮಾತನ್ನೇ ಮತ್ತಷ್ಟು ಸ್ಪಷ್ಟವಾಗಿ ವ್ಯಾಖ್ಯಾನ ಮಾಡಲು 'ಅಶೇಷಶಾಸ್ತ್ರ' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ.

### ಪ್ರಥಮಾಧ್ಯಾಯಾರ್ಥದಲ್ಲಿ ಅಶೇಷಶಾಸ್ತ್ರಗಳೇ ಆಧಾರ

**भावदीपः –** स्वरवर्णपदवाक्यात्मकाशेषशास्त्रस्य शक्तितात्पर्याभ्यां कारणत्वादिना भगवत्प्रमाजनकत्वेनेत्यर्थः॥ **कर्तेति ।।** उक्तदिशाऽनन्तगुणत्वं चोपलक्ष्यते । उक्तं च संक्षेपभाष्ये उक्ता गुणाश्चाविरुद्धास्तस्य वेदेन सर्वश इति॥ **प्रतिपादित इति ।।** न्यायैरुपपादित इत्यर्थः।

ಹಿಂದಿನ ಅಧ್ಯಾಯದಲ್ಲಿ ಯಾವ ಅರ್ಥವು ಹೇಳಲ್ಪಟ್ಟಿತ್ತೋ ಅದಕ್ಕೆ ಅಶೇಷಶಾಸ್ತ್ರಗಳೇ ಆಧಾರವಾಗಿವೆ. ಅಶೇಷ ಶಾಸ್ತ್ರದಲ್ಲಿರುವ ಪ್ರತಿಯೊಂದು ಸ್ವರಗಳು, ವರ್ಣಗಳು, ಪದಗಳು, ವಾಕ್ಯಗಳು ಶಕ್ತಿ ಹಾಗೂ ತಾತ್ಪರ್ಯಗಳಿಂದ ಕೂಡಿದವುಗಳಾಗಿ ಭಗವಂತನ ಜಗಜ್ಜನ್ಮಾದಿಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಿವೆ. ಏತನ್ಮೂಲಕವಾಗಿಯೇ ಭಗವತ್‌ಪ್ರಮಾಜನಕವಾಗಿವೆ. ಹೀಗೆ ಪ್ರಥಮಾಧ್ಯಾಯದಲ್ಲಿ ಉಪಪಾದನೆ ಮಾಡಿದ್ದಾಗಿದೆ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಯಾವುದೇ ಪ್ರಮಾಣವೇ ಇಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ಜಗಜ್ಜನ್ಮಾದಿಕರ್ತಾ ಎಂಬುದರಿಂದ ಅನಂತಗುಣಪರಿಪೂರ್ಣತ್ವವನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಇದನ್ನೇ ಅನುಭಾಷ್ಯದಲ್ಲಿ 'ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ' ಸಮಸ್ತ

ವೇದಗಳಿಂದ ತಿಳಿಯುವ ಗುಣಪರಿಪೂರ್ಣತ್ವವು ಪ್ರಥಮಾಧ್ಯಾಯದ ಅರ್ಥವೆಂದು ಹೇಳಿರುತ್ತಾರೆ. 'ಪ್ರತಿಪಾದಿತಃ' ಎಂಬುದಕ್ಕೆ ನ್ಯಾಯಗಳಿಂದ ಉಪಪಾದನೆ ಮಾಡಲಾಗಿದೆ ಎಂಬರ್ಥವನ್ನು ವಿವಕ್ಷಿಸಬೇಕು.

### ಪ್ರಥಮಾಧ್ಯಾಯಕ್ಕೂ ದ್ವಿತೀಯಾಧ್ಯಾಯಕ್ಕೂ ಪರಸ್ಪರ ಸಂಗತಿ

**भावदीपः** – न प्रेक्षावदिति नञो न स्यादिति क्रियया अन्वयः॥ **अत इति**॥ अविरोध एवोक्तार्थस्योपादेयत्वसम्भवादित्यर्थः। अनेन पूर्वाध्यायः एतन्निरसनीयविरोधशङ्काविषयभूतार्थोपस्थापकतयाऽस्य हेतुः। अयं वोक्तार्थे विरोधनिरा सेनोक्तार्थस्थैर्यसाधकत्वात्तस्य हेतुरित्यध्याययोर्हेतुहेतुमद्भावरूपा सङ्गतिरुक्तेति ध्येयम्।

'ನ ಪ್ರೇಕ್ಷಾವತ್' ಎಂಬ ಟೀಕಾವಾಕ್ಯದಲ್ಲಿರುವ ನಞ್ ಗೆ 'ಸ್ಯಾತ್' ಎಂಬ ಕ್ರಿಯೆಯ ಜೊತೆ ಅನ್ವಯವನ್ನು ಮಾಡಬೇಕು. ಆಗ ಪ್ರೇಕ್ಷಾವಂತರು ಸ್ವೀಕಾರ ಮಾಡಲಾರರು ಎಂಬರ್ಥವನ್ನು ಹೇಳಿದಂತಾಗುತ್ತದೆ. 'ಅತಃ' ಎಂಬ ಪದಕ್ಕೆ ವಿರೋಧ ಇಲ್ಲದಿದ್ದರೆ ಮಾತ್ರ ಪ್ರಥಮಾಧ್ಯಾಯದ ಅರ್ಥವು ಉಪಾದೇಯವಾಗುತದೆ ಎಂದರ್ಥ. 'ಅತಃ' ಇತ್ಯಾದಿ ವಾಕ್ಯದಿಂದ ಹಿಂದಿನ ಅಧ್ಯಾಯಕ್ಕೂ, ಈ ಅಧ್ಯಾಯಕ್ಕೂ ಸಂಗತಿಯನ್ನು ಹೇಳಿರುತ್ತಾರೆ. ಅದು ಹೀಗೆ – ಪ್ರಥಮಾಧ್ಯಾಯವು ಈ ಅಧ್ಯಾಯದಿಂದ ಪರಿಹಾರ ಮಾಡಲ್ಪಡುವ ಯಾವ ವಿರೋಧ ಶಂಕೆಗಳು ಇವೆಯೋ ಅದಕ್ಕೆ ವಿಷಯೀಭೂತವಾದ ಅರ್ಥವನ್ನು ಉಪಸ್ಥಾಪನೆ ಮಾಡುತ್ತಿದೆ. ಆದ್ದರಿಂದ ದ್ವಿತೀಯಾಧ್ಯಾಯಕ್ಕೆ ಪ್ರಥಮಾಧ್ಯಾಯವು ಹೇತುವಾಗಿದೆ. ಅಥವಾ ಪ್ರಥಮಾಧ್ಯಾಯದಲ್ಲಿ ಯಾವ ಜಗಜ್ಜನ್ಮಾದಿಕಾರಣತ್ವ ಮತ್ತು ಗುಣಪರಿಪೂರ್ಣತ್ವವನ್ನು ಸಮರ್ಥನೆ ಮಾಡಲಾಯಿತೋ ಈ ವಿಷಯದಲ್ಲಿ ಪ್ರಾಪ್ತವಾಗುವ ವಿರೋಧವನ್ನು ಎರಡನೇ ಅಧ್ಯಾಯವು ಪರಿಹಾರ ಮಾಡುತ್ತಿದೆ. ಆದ್ದರಿಂದಲೇ ಪ್ರಥಮಾಧ್ಯಾಯದ ಅರ್ಥವು ದೃಢವಾಗಿ ಸಾಧಿತವಾಗುತ್ತದೆ. ಆದ್ದರಿಂದ ದ್ವಿತೀಯಾಧ್ಯಾಯವು ಪ್ರಥಮಾಧ್ಯಾಯಕ್ಕೆ ಹೇತುವಾಗಿದೆ. ಹೀಗೆ ಪ್ರಥಮಾಧ್ಯಾಯಕ್ಕೆ ಹಾಗೂ ದ್ವಿತೀಯಾಧ್ಯಾಯಕ್ಕೆ ಪರಸ್ಪರ ಹೇತುಹೇತುಮದ್ಭಾವ-ರೂಪವಾದ ಸಂಗತಿಯನ್ನು ಹೇಳಿದಂತಾಯಿತು.

### ನ್ಯಾಯಸುಧೆಗೂ ತತ್ವಪ್ರಕಾಶಿಕೆಗೂ ಸಂಗತಿ ವಿಷಯದಲ್ಲಿ ಒಂದು ಸಣ್ಣ ವ್ಯತ್ಯಾಸ

**भावदीपः** – विवृता चैवमेव सुधायां सङ्गतिः। परं तु उक्तः समन्वयः साक्षादविरोधोऽत्र साध्यत इत्यनुभाष्यसुधयोः समन्वयप्राधान्येन सङ्गतिरुक्ता। अत्र तु भाष्यटीकयोः समन्वयार्थप्राधान्येनेत्येव भेदः।

ಮೇಲೆ ಹೇಳಿದಂತೆ ಹೇತುಹೇತುಮದ್ಭಾವರೂಪವಾದ ಸಂಗತಿಯನ್ನೇ ನ್ಯಾಯಸುಧೆಯಲ್ಲಿ ವಿವರಣೆ ಮಾಡಿದ್ದಾರೆ. ಆದರೆ ಅನುವ್ಯಾಖ್ಯಾನ-ನ್ಯಾಯಸುಧೆಗಳಿಗೂ ಪ್ರಕೃತ ಭಾಷ್ಯ-ಟೀಕೆಗಳಿಗೂ ಒಂದು ವ್ಯತ್ಯಾಸವಿದೆ– ಹಿಂದಿನ ಅಧ್ಯಾಯದಲ್ಲಿ ಸಕಲ ಶಬ್ದಗಳ ಸಮನ್ವಯವು ಸಾಧಿತವಾಗಿದೆ. ಈ ವಿಷಯದಲ್ಲಿ ಪ್ರಾಪ್ತವಾಗುವ ವಿರೋಧವನ್ನು ಸಾಕ್ಷಾತ್ತಾಗಿ ಎರಡನೇ ಅಧ್ಯಾಯವು ಪರಿಹಾರ ಮಾಡುತ್ತಿದೆ ಎಂಬುದಾಗಿ ಸಮನ್ವಯಪ್ರಾಧಾನ್ಯದ ವಿವಕ್ಷೆಯಿಂದ ಸಂಗತಿಯನ್ನು ಹೇಳಿದ್ದಾರೆ. ಆದರೆ ಈ ಭಾಷ್ಯ ಹಾಗೂ ಟೀಕೆಯಲ್ಲಿ ಸಮನ್ವಯದಿಂದ ಸಿದ್ಧವಾಗುವ ಜಗತ್ಕಾರಣತ್ವ ಹಾಗೂ ಗುಣಪರಿಪೂರ್ಣತ್ವವನ್ನೇ ಪ್ರಧಾನವನ್ನಾಗಿ ವಿವಕ್ಷಿಸಿ ಸಂಗತಿಯನ್ನು ಹೇಳಿರುತ್ತಾರೆ. ಈ ಒಂದು ಸಣ್ಣ ವ್ಯತ್ಯಾಸವನ್ನು ಗಮನಿಸಬೇಕು.

### ಪ್ರಥಮಾಧ್ಯಾಯದಲ್ಲೂ ಕೆಲವು ಸೂತ್ರಗಳು ವಿರೋಧವನ್ನು ಪರಿಹರಿಸುತ್ತವಲ್ಲವೇ?

**भावदीपः** – यद्यपि विकारशब्दान्नेति चेन्न प्राचुर्यात् उपदेशभेदान्नेति चेन्नोभयस्मिन्नप्यविरोधात् साक्षादप्यविरोधं जैमिनिः कल्पनोपदेशाच्च मध्वादिवदविरोध इत्यादिभिर्विरोधाभावं पूर्वत्राप्यदर्शयत्सूत्रकारः।

ವಾಸ್ತವಿಕವಾಗಿ 'ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್', 'ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯ ವಿರೋಧಾತ್', 'ಸಾಕ್ಷಾದಪ್ಯವಿರೋಧಂ ಜೈಮಿನಿಃ', 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಇವೇ ಮೊದಲಾದ ಪ್ರಥಮಾಧ್ಯಾಯದಲ್ಲಿ ಪ್ರಸಕ್ತವಾಗುವ ಸೂತ್ರಗಳಲ್ಲೂ ಕೂಡ ವಿರೋಧಗಳನ್ನು ಸೂತ್ರಕಾರರೇ ಪರಿಹರಿಸಿದ್ದಾರೆ. ಹೀಗಿರುವಾಗ ಕೇವಲ ಸಮನ್ವಯವನ್ನಷ್ಟೇ ಪ್ರಥಮಾಧ್ಯಾಯದಲ್ಲಿ ಮಾಡಲಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಮತ್ತು ಈ ಅಧ್ಯಾಯದಲ್ಲಿ ಮಾತ್ರ ವಿರೋಧವನ್ನು ಪರಿಹರಿಸಲಾಗಿದೆ ಎಂದು ಹೇಳಲು ಸಾಧ್ಯವಿಲ್ಲ, ಅಲ್ಲವೇ?

### ಈ ಅಧ್ಯಾಯದಲ್ಲಿ ಎಲ್ಲಾ ಸೂತ್ರಗಳೂ ವಿರೋಧ ಪರಿಹಾರಕ

**भावदीपः** – तथापि क्वचित्क्वचिदेवात्र तु सर्वथेति सुधायामेव व्यक्तम्। युक्तीत्युक्त्या सूचिश्रतावान्तरभेदं वक्ष्यमाणद्वितीयादिपादाद्यभाष्यदिशा विभज्यात्र दर्शयन्नत्र बीजमाह – **उक्तेऽर्थइति**।।

ಹೌದು. ಪ್ರಥಮಾಧ್ಯಾಯದಲ್ಲಿ ಕೆಲವು ಸೂತ್ರಗಳು ಮಾತ್ರ ವಿರೋಧವನ್ನು ಪರಿಹರಿಸಿವೆ. ಈ ದ್ವಿತೀಯಾಧ್ಯಾಯದಲ್ಲಿ ಎಲ್ಲಾ ಸೂತ್ರಗಳೂ ಕೂಡ ವಿರೋಧವನ್ನು ಪರಿಹರಿಸಿವೆ. ಆದ್ದರಿಂದ ಇವುಗಳಿಗೆ 'ಅವಿರೋದ' ಎಂಬ ಹೆಸರು ಸಾರ್ಥಕವಾಗಿವೆ. ಈ ವಿಷಯವನ್ನು ನ್ಯಾಯಸುಧಾದಲ್ಲೇ ಸ್ಪಷ್ಟಪಡಿಸಿದ್ದಾರೆ.

ಭಾಷ್ಯದಲ್ಲಿ 'ಯುಕ್ತ್ಯವಿರೋಧಂ' ಎಂದಿದ್ದಾರೆ. ಇದರಿಂದ ಎರಡನೇ ಅಧ್ಯಾಯದಲ್ಲಿರುವ ನಾಲ್ಕು ಪಾದಗಳಲ್ಲಿ ಅವಾಂತರಭೇದವು ಸೂಚಿತವಾಯಿತು. ಮುಂದೆ ಎರಡು, ಮೂರು ಹಾಗೂ ನಾಲ್ಕನೇ ಪಾದಗಳಲ್ಲಿ ಭಾಷ್ಯಕಾರರೇ ಈ ಅವಾಂತರ ಭೇದಕ್ಕೆ ಕಾರಣವನ್ನು ತೋರಿಸುತ್ತಾರೆ. ಅದರ ಆಧಾರದಲ್ಲಿ ಪ್ರಕೃತ ಟೀಕಾಕಾರರು ವಿರೋಧಗಳನ್ನು ವಿಭಾಗ ಮಾಡಿ ಯುಕ್ತಿಯ ವಿರೋಧ ಪರಿಹಾರಕ್ಕೆ ಪ್ರಾಥಮ್ಯವನ್ನೂ ಕೂಡ 'ಉಕ್ತೇ ಅರ್ಥೇ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

### ಶೈವ ಸ್ಮೃತಿಗಳೂ ಕೂಡ ಯುಕ್ತಿ ಸಮಯಾದಿ ರೂಪ

**भावदीपः – द्विविधेति ।।** केवलश्रुतियुक्तियुक्तश्रुतिभेदादित्यर्थः । क्वचित्तु श्रुतिन्यायोपेतश्रुतिविरोधेति पाठः। स्मृत्यविरोधोक्तेः असाङ्गत्यमाशङ्क्य व्याचष्टे – **यद्यपीत्यादिना ।। युक्तीति ।।** शैवादिस्मृतयः स्वयमभियुक्तवाक्यतया स्मृति (समय) रूपा अपि स्वोक्तार्थे युक्तीः श्रुतीश्च संवादयन्तीति युक्तिसमयादिरूपत्वेनेत्युक्तम् ।।

ಟೀಕೆಯಲ್ಲಿ 'ದ್ವಿವಿಧಶ್ರುತಿವಿರೋಧಭೇದಾತ್' ಎಂದು ಹೇಳಿದ್ದಾರೆ. ಕೇವಲ ಶ್ರುತಿಯಿಂದ ಕೂಡಿದ ವಿರೋಧ, ಯುಕ್ತಿಯಿಂದ ಸಹಿತವಾದ ಶ್ರುತಿಗಳ ವಿರೋಧ ಎಂಬುದು ಇದರ ಅರ್ಥ. ಕೆಲವೊಂದು ಪುಸ್ತಕಗಳಲ್ಲಿ ಶ್ರುತಿ, ನ್ಯಾಯೋಪೇತಶ್ರುತಿವಿರೋಧ ಎಂಬ ಪಾಠವಿದೆ. ಈ ಪಾಠವೂ ಕೂಡ ಗ್ರಾಹ್ಯವೇ ಆಗಿದೆ.

ಈ ಅಧಿಕರಣದಲ್ಲಿ ಸ್ಮೃತಿವಿರೋಧವನ್ನು ಪರಿಹರಿಸುತ್ತಿರುವುದು ಅಸಂಗತವಾಗಿದೆ. ಏಕೆಂದರೆ ಯುಕ್ತಿ ವಿರೋಧವನ್ನಷ್ಟೇ ಈ ಪಾದದಲ್ಲಿ ಪರಿಹರಿಸಬೇಕಲ್ಲವೇ? ಈ ಆಶಂಕೆಗೆ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಯುಕ್ತಿಸಮಯಾದಿರೂಪತ್ವೇನ' ಎಂಬುದರ ಅಭಿಪ್ರಾಯ ಹೀಗಿದೆ– ಶೈವಾದಿ ಸ್ಮೃತಿಗಳು ಸ್ವತಃ ಅಭಿಯುಕ್ತ ವಾಕ್ಯವಾಗಿರುವುದರಿಂದ ಸಮಯರೂಪವೇ ಆಗಿವೆ. ಆದರೆ ತಾವು ಹೇಳಿದ ಅರ್ಥದಲ್ಲಿ ಯುಕ್ತಿಯನ್ನು ಹಾಗೂ ಶ್ರುತಿಯನ್ನು ಸಂವಾದ ಪ್ರಮಾಣವನ್ನಾಗಿ ಉಲ್ಲೇಖ ಮಾಡುವುದರಿಂದ ಟೀಕೆಯಲ್ಲಿ ಶೈವಾದಿಸ್ಮೃತಿಗಳನ್ನು ಯುಕ್ತಿರೂಪ ಹಾಗೂ ಸಮಯರೂಪವೆಂದು ಉಲ್ಲೇಖ ಮಾಡಿದ್ದಾರೆ.

### ಮಹಾಮಲ್ಲಭಂಗನ್ಯಾಯದಿಂದ ಸ್ಮೃತ್ಯಧಿಕರಣಕ್ಕೆ ಸಂಗತಿ

**भावदीपः – प्राथम्येति ।।** महामल्लभङ्गन्यायेनैकैकविरोधनिरासकात्प्राथम्योपपत्ते–

रित्यर्थः ॥ **न कोऽपीति ॥** अध्याये पादेऽनन्तर्भावदोषो वा अप्राथम्यदोषो वा नेत्यर्थः ॥

'ಪ್ರಾಥಮ್ಯೋಪಪತ್ತೇಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ಸ್ಮೃತ್ಯಧಿಕರಣವು ಯುಕ್ತಿ ಸಮಯಾದಿ ರೂಪವಾಗಿರುವುದರಿಂದ ಅತ್ಯಂತ ಬಲಿಷ್ಠವಾಗಿದೆ. ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿ ಬಲಿಷ್ಠವಾದ ಈ ವಿರೋಧವನ್ನು ಮೊದಲೇ ಪರಿಹರಿಸುವುದು ಯುಕ್ತವಾಗಿದೆ ಎಂಬ ಅಭಿಪ್ರಾಯದಿಂದ ಇದಕ್ಕೆ ಪ್ರಾಥಮ್ಯವು ಯುಕ್ತವಾಗುತ್ತದೆ ಎಂದರ್ಥ.

'ನ ಕೋಪಿ ದೋಷಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ಸ್ಮೃತ್ಯಧಿಕರಣಕ್ಕೆ ಪಾದಾರ್ಥತ್ವವು ಇರುವುದರಿಂದ ಪ್ರಥಮ ಪಾದದಲ್ಲಿ ಅಂತರ್ಭಾವ ಆಗುವುದಿಲ್ಲ ಎಂಬ ದೋಷವಾಗಲೀ, ಅಥವಾ ಪ್ರಥಮ ಪಾದದಲ್ಲಿ ಮೊದಲು ಅಂತರ್ಭಾವ ಹೊಂದುವುದಿಲ್ಲ ಎಂಬ ದೋಷವಾಗಲಿ ಬರುವುದಿಲ್ಲ ಎಂಬುದು ಇದರ ಅರ್ಥ.

### ಈ ಅಧಿಕರಣಕ್ಕೆ ಎಲ್ಲಾ ಬಗೆಯ ಸಂಗತಿಗಳೂ ಇವೆ ಮತ್ತು ಫಲವೂ ಇದೆ

**भावदीपः – अनेनेति ॥** प्रथमत इति भाष्येण । शैवादिस्मृतिविरोधस्य युक्त्यादिविरोधरूपत्वात् हरेर्जगजन्मादिकर्तृत्वे युक्त्यादिविरोधात्मकस्मृतिविरोधपरिहारकथनाच्छास्त्राध्यायपादसङ्गतिरित्युक्तं भवतीत्यर्थः । श्रुत्यधिकरणसङ्गती आह – **वेदेति ॥** जन्मादिसूत्रे यतो वा इमानि भूतानीत्यादिवेदवाक्यानां कारणतया विष्णोरेव प्रमापकत्वेनेत्यर्थः । एतेनैतद्विचारस्य फलमपि दर्शितं भवति ।

'ಅನೇನ' ಎಂಬುದಕ್ಕೆ 'ಪ್ರಥಮತಃ' ಭಾಷ್ಯದ ಮಾತಿನಿಂದ ಎಂದರ್ಥ. ಶೈವಾದಿ ಸ್ಮೃತಿಗಳ ವಿರೋಧವು ಯುಕ್ತಿ ಸಮಯಾದಿ ವಿರೋಧರೂಪವೂ ಆಗಿರುತ್ತದೆ. ಆದ್ದರಿಂದ ಶ್ರೀಹರಿಯು ಜಗಜ್ಜನ್ಮಾದಿಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಯುಕ್ತಿಸಮಯಾದಿವಿರೋಧ ರೂಪವಾದ ಸ್ಮೃತಿವಿರೋಧ ಪರಿಹಾರವನ್ನು ಹೇಳಲು ಈ ಅಧಿಕರಣ ಹೊರಟಿದೆ. ಆದ್ದರಿಂದಲೇ ಶಾಸ್ತ್ರದಲ್ಲಿ, ಅಧ್ಯಾಯದಲ್ಲಿ ಪಾದದಲ್ಲಿ ಸ್ಮೃತ್ಯಧಿಕರಣವು ಸಂಗತವಾಗುತ್ತದೆ ಎಂಬುದನ್ನು 'ಶಾಸ್ತ್ರಾದಿಸಂಗತಿಃ ಉಕ್ತಾ ಭವತಿ' ಎಂಬ ಟೀಕಾ ಮಾತಿನಲ್ಲಿ ಹೇಳಿರುತ್ತಾರೆ.

ಈ ಅಧಿಕರಣಕ್ಕೆ ಶ್ರುತಿಸಂಗತಿ, ಅಧಿಕರಣಸಂಗತಿಗಳನ್ನು ಉಪಪಾದನೆ ಮಾಡಲು 'ವೇದಪ್ರಾಮಾಣ್ಯೇನ' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. ಜನ್ಮಾದಿ ಸೂತ್ರದಲ್ಲಿ 'ಯತೋ ವಾ ಭೂತಾನಿ' ಇತ್ಯಾದಿ ವೇದವಾಕ್ಯಗಳು ವಿಷ್ಣುವೇ ಜಗತ್ಕಾರಣನಾಗಿದ್ದಾನೆ ಎಂದು ಹೇಳುತ್ತವೆ ಎಂಬುದಾಗಿ ಸಮರ್ಥನೆ ಮಾಡಲಾಯಿತು. ಈ ಅಧಿಕರಣದಿಂದ ವಿರೋಧ ಪರಿಹರಿಸಿದಾಗ ಈ ಪ್ರಮೇಯವು ಸಿದ್ಧವಾಗುತ್ತದೆ. ಆದ್ದರಿಂದ ಸ್ಮೃತಿವಿರೋಧಪರಿಹಾರಕ್ಕೆ ಫಲವನ್ನೂ ಕೂಡ ತೋರಿಸಿದಂತಾಯಿತು. ಹೀಗೆ ಎಲ್ಲಾ ಬಗೆಯ ಸಂಗತಿಗಳು ಹಾಗೂ ಅಧಿಕರಣದ ಫಲವು ಸ್ಮೃತ್ಯಧಿಕರಣಕ್ಕೆ ಇದೆ ಎಂದು ಟೀಕೆಯಲ್ಲಿ ನಿರೂಪಣೆ ಮಾಡಿದ್ದಾರೆ.

## ಸೂತ್ರದಲ್ಲಿರುವ ಸ್ಮೃತಿ ಪದಕ್ಕೆ ವ್ಯಾಖ್ಯಾನ

**भावदीपः** – अस्य शास्त्रयोनिसूत्रादगतार्थत्वं तत्रैव चन्द्रिकायां व्यक्तम्। भाष्यं व्याख्यातुं परिष्करोति ॥ **नेति**॥ तेषां वचनेत्येतत् सौत्रस्मृतिपदस्य व्याख्यानमिति भावेनार्थमाह – **पाशुपतेति**॥ विरोध इति निमित्तसप्तमीति भावेन विरोधेनेत्युक्तम्।

ಈ ಸ್ಮೃತ್ಯಧಿಕರಣವು ಶಾಸ್ತ್ರಯೋನಿತ್ವಾಧಿಕರಣದಿಂದ ಗತಾರ್ಥವಾಗಿದೆಯಲ್ಲವೇ? ಇತ್ಯಾದಿ ಆಶಂಕೆಯ ಬಗ್ಗೆ ಹಾಗೂ ಪರಿಹಾರದ ಬಗ್ಗೆ ತಾತ್ಪರ್ಯಚಂದಿಕಾ ಗ್ರಂಥದಲ್ಲಿಯೇ ಸ್ಪಷ್ಟಪಡಿಸಲಾಗಿದೆ.

ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ವಿಷ್ಣೋಃ' ಇತ್ಯಾದಿಯಾಗಿ ಪೀಠಿಕೆಯನ್ನು ಹೇಳುತ್ತಿದ್ದಾರೆ. ಭಾಷ್ಯದಲ್ಲಿ 'ತೇಷಾಂ ವಚನವಿರೋಧೇ' ಎಂದು ಹೇಳಿದ್ದಾರೆ. ಇದು ಸೂತ್ರದಲ್ಲಿರುವ 'ಸ್ಮೃತಿ' ಎಂಬ ಪದದ ವ್ಯಾಖ್ಯಾನವಾಗಿದೆ. ಇದನ್ನು ಟೀಕೆಯಲ್ಲಿ ಪಾಶುಪತ, ಸಾಂಖ್ಯ ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿ ವಿರೋಧೇ ಎಂಬುದು ನಿಮಿತ್ತಸಪ್ತಮ್ಯಂತವಾಗಿದೆ. ಇದನ್ನು ತೋರಿಸಲು 'ಯೋಗಾದಿಸ್ಮೃತಿವಿರೋಧೇನ' ಎಂದು ಟೀಕೆಯಲ್ಲಿ ಹೇಳಿದ್ದಾರೆ.

## ಸೂತ್ರದಲ್ಲಿರುವ ದೋಷಪ್ರಸಂಗಾತ್ ಎಂಬುದರ ವ್ಯಾಖ್ಯಾನ

**भावदीपः** – अप्रामाण्यमेव स्यादित्येतद्दोषप्रसङ्गादित्यस्य व्याख्येति मत्वाऽऽह – **अप्रामाण्याख्येति**॥ **अन्यार्थतेति**॥ श्रुतेरित्यनुषङ्गः। स्मृत्यनुरोधेन शिवादिकर्तृत्वार्थ कत्वोपपत्तेरित्यर्थः।

ಸೂತ್ರದಲ್ಲಿ 'ದೋಷಪ್ರಸಂಗಾತ್' ಎಂಬುದರ ವ್ಯಾಖ್ಯಾನವನ್ನು ಭಾಷ್ಯದಲ್ಲಿ 'ಅಪ್ರಾಮಾಣ್ಯಮೇವ ಸ್ಯಾತ್' ಎಂದು ಮಾಡಿದ್ದಾರೆ. ಇದನ್ನು ಟೀಕೆಯಲ್ಲಿ 'ಅಪ್ರಾಮಾಣ್ಯಾಖ್ಯದೋಷಪ್ರಸಂಗಾತ್' ಎಂಬುದರಿಂದ ತೋರಿಸಿದ್ದಾರೆ. 'ಅನ್ಯಾರ್ಥೋಪಪತ್ತೇಃ' ಎಂದು ಟೀಕೆಯಲ್ಲಿರುವ ಮಾತಿನ ಜೊತೆ 'ಶ್ರುತೇಃ' ಎಂಬುದನ್ನು ಅನುಷಂಗ ಮಾಡಬೇಕು. ಆಗ ಶ್ರುತಿಗೆ ಬೇರೆ ಅರ್ಥವನ್ನೇ ಮಾಡಬೇಕಾಗುತ್ತದೆ ಎಂಬರ್ಥವನ್ನು ಹೇಳಿದಂತಾಗುತ್ತದೆ. ಸ್ಮೃತಿಗೆ ಅನುಗುಣವಾಗಿ ಶಿವಾದಿಗಳೇ ಜಗತ್ತಿಗೆ ಕಾರಣರಾಗಿದ್ದಾರೆ ಎಂಬರ್ಥವನ್ನೇ ಶ್ರುತಿಗೆ ಹೇಳಬೇಕು ಎಂಬುದು ಇದರ ಅಭಿಪ್ರಾಯ.

### ವಿರೋಧಕ್ಕೆ ಅಸಿದ್ಧಿ ಹಾಗೂ ಅಪ್ರಯೋಜಕತ್ವಗಳ ನಿರಾಸ

**भावदीपः** – विरोधं व्यनक्ति – **पाशुपतेति ।।** विरोधस्यासिद्धिं निरस्याप्रयोजकत्वं निराह – **न चेति ।।**

ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಯಾವ ವಿರೋಧವು ಪ್ರಾಪ್ತವಾಗುತ್ತದೋ ಅದನ್ನು 'ಪಾಶುಪತಾದಿಸ್ಮೃತೀನಾಂ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಈ ಪಾಶುಪತಾದಿ ಸ್ಮೃತಿವಿರೋಧಕ್ಕೆ ಅಸಿದ್ಧಿಯು ಬರುವುದಿಲ್ಲ. ಏಕೆಂದರೆ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಇದು ಪ್ರತಿಪಾದನೆ ಮಾಡುತ್ತಿದೆ. ಹೀಗೆ ಅಸಿದ್ಧಿ ದೋಷವನ್ನು ಪರಿಹರಿಸಿ ಪಾಶುಪತಾದಿಗಳ ವಿರೋಧವಿದ್ದರೂ ಕೂಡ ವಿಷ್ಣುವಿನ ಜಗತ್ಕಾರಣತ್ವವು ಇರಲಿ ಎಂಬ ಅಪ್ರಯೋಜಕಾ ಶಂಕೆಯನ್ನು 'ನ ಚ ವಿರೋಧೇಪಿ' ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

### ವಸ್ತುವಿನಲ್ಲಿ ವಿಕಲ್ಪ ಕೂಡದು

**भावदीपः – वस्तुनीति ।।** पूर्वविकल्पः प्रकरणात् स्यात् क्रियामानसवदित्यादौ वक्ष्यमाणदिशा गुरूपादानत्यागादिरूपक्रियाया अव्यवस्थितविकल्पस्य विकल्पो विशिष्टफलत्वादित्यादौ वक्ष्यमाणादिशा फलविशेषकामनादिना नृसिंहध्यानादिक्रियाया व्यवस्थितविकल्पस्य सम्भवेऽपि विष्णवादिरर्थः कर्ताऽकर्ता वेति वस्तुनि विकल्पो न युक्त इत्यर्थः। वस्तुन्यपि व्यवस्थितविकल्पमाशङ्क्य निराह – **न च देशेति ।।**

'ವಸ್ತುನಿ ವಿಕಲ್ಪಪ್ರಸಂಗಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು– 'ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್' (೩-೩-೪೬)

'ಸಮಾನ ಫಲವುಳ್ಳ ಮಾನಸ ಕ್ರಿಯಾ ರೂಪವಾದ ಧ್ಯಾನದಂತೆ ಪೂರ್ವದಲ್ಲಿ ಪ್ರಾಪ್ತನಾದ ಗುರುವಿಗೆ ಸಮಾನನಾದ ಮತ್ತೊಬ್ಬ ಗುರುವನ್ನು ಸ್ವೀಕರಿಸಬಹುದು ಅಥವಾ ಬಿಡಬಹುದು' ಎಂಬುದು ವಿಕಲ್ಪವೇ ಆಗಿದೆ ಹೊರತು ವಿಧಿಯಲ್ಲ. ಏಕೆಂದರೆ ಪ್ರಕೃಷ್ಟ ಅನುಗ್ರಹವನ್ನು ಅಪೇಕ್ಷಿಸಿ ಗುರುವು ಸ್ವೀಕಾರ್ಯನಾಗಿರುತ್ತಾನೆ ಎಂಬುದಾಗಿ ಈ ಸೂತ್ರದಲ್ಲಿ ಮುಂದೆ ಹೇಳುತ್ತಾರೆ. ಇಲ್ಲಿ ಗುರುವನ್ನು ಬಿಡುವಿಕೆ ಎಂಬ ಕ್ರಿಯೆಯಲ್ಲಿ ಅವ್ಯವಸ್ಥಿತವಾದ ವಿಕಲ್ಪವಿದೆ.

'ವಿಕಲ್ಪೋವ ವಿಶಿಷ್ಟಫಲತ್ವಾತ್' (೩-೩-೬೧) 'ಬಿಂಬವಲ್ಲದ ನರಸಿಂಹಾದಿ ರೂಪವನ್ನು ಉಪಾಸನೆ ಮಾಡಬಹುದು ಅಥವಾ ಮಾಡದೇ ಇರಬಹುದು, ಎರಡೂ ಪ್ರಕಾರಗಳಿವೆ. ಏಕೆಂದರೆ ದುರಿತನಿವೃತ್ತಿ ಎಂಬ ವಿಶೇಷ ಫಲ ಇರುವುದರಿಂದ' ಎಂಬ ಈ ಸೂತ್ರದಲ್ಲಿ ಮುಂದೆ ವ್ಯವಸ್ಥಿತ ವಿಕಲ್ಪವನ್ನು ಹೇಳುವವರಿದ್ದಾರೆ. ಫಲವಿಶೇಷ ಕಾಮನಾದಿಗಳಿಂದ ನರಸಿಂಹ ಧ್ಯಾನವೆಂಬ ಕ್ರಿಯೆಯಲ್ಲಿ ವ್ಯವಸ್ಥಿತವಾದ ವಿಕಲ್ಪವಿದೆ. ಹೀಗೆ ಅವ್ಯವಸ್ಥಿತ ವಿಕಲ್ಪವನ್ನು ಅಥವಾ ವ್ಯವಸ್ಥಿತವಿಕಲ್ಪವನ್ನು ಪ್ರಕೃತ ವಿಷ್ಣುವಿನ ಜಗತ್ಕರ್ತೃತ್ವ ವಿಷಯದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ವಿಷ್ಣುವು ಕರ್ತೃವೂ ಆಗಬಹುದು ಹಾಗೂ ಅಕರ್ತೃವೂ ಆಗಬಹುದು ಎಂಬುದಾಗಿ ವಸ್ತುವಿನಲ್ಲಿ ವಿಕಲ್ಪವು ಯುಕ್ತವಲ್ಲ ಎಂಬುದು ಇದರ ಅರ್ಥ. ವಸ್ತುವಿನಲ್ಲೂ ಕೂಡ ವ್ಯವಸ್ಥಿತವಿಕಲ್ಪವನ್ನು ಆಶಂಕಿಸಿ ನಿರಾಕರಣೆ ಮಾಡಲು 'ನ ಚ ದೇಶ' ಇತ್ಯಾದಿ ಟೀಕಾ ಪಂಕ್ತಿಯು ಹೊರಟಿದೆ.

### ಶ್ರುತಿವಿರೋಧ ಬಂದಾಗ ಸ್ಮೃತಿಗೆ ಅಪ್ರಾಮಾಣ್ಯ ಹೇಳಬೇಕಲ್ಲವೇ?

**भावदीपः** – सौत्रानवकाशपदव्याख्यानं सर्वज्ञा हीत्यादिभाष्यं तद्व्यावर्त्योक्तिपूर्वं व्याचष्टे – **न च वाच्यमिति ।।** प्रामाण्यमुपेत्याह – **अन्यार्थत्वमिति ।। विरोधे त्विति ।।** पूर्वतन्त्रे प्रथमे तृतीयपादे धर्मस्य शब्दमूलत्वादशब्दमनपेक्षं स्यादिति स्मृतिनये सर्वस्मृतीनां मूलश्रुत्यनुमापकत्वेन प्रामाण्यमुक्त्वा विरुद्धानामप्रामाण्यं वक्तुमिदं सूत्रम्। स्मृतेः श्रुतिविरोधे सति अनपेक्षं स्मृतिप्रामाण्यमनादरणीयं स्यात्। न चैवं तत्रत्यपूर्वाधिकरणविरोधः। असति ह्यनुमानम्। स्मृतेः श्रुतिविरोधे असति अविद्यमान एव स्मृतिरनुमानं मूलभूतश्रुत्यनुमापिका श्रुती प्रमाणमित्युक्तं स्मृत्यधिकरण इत्यर्थः।

ಸೂತ್ರದಲ್ಲಿರುವ 'ಅನವಕಾಶ' ಎಂಬ ಪದಕ್ಕೆ ಭಾಷ್ಯದಲ್ಲಿ 'ಸರ್ವಜ್ಞಾದಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದ ಈ ಮಾತಿನಿಂದ ಯಾವ ಶಂಕೆಯು ಪರಿಹಾರವಾಗುತ್ತದೋ ಆ ಶಂಕೆಯನ್ನು

ಉಲ್ಲೇಖ ಮಾಡುವ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ ಮಾಡುತ್ತಿದ್ದಾರೆ 'ನ ಚ ವಾಚ್ಯಂ' ಇತ್ಯಾದಿ ಟೀಕೆಯಿಂದ. ಶೈವಾದಿ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿ 'ಅನ್ಯಾರ್ಥತ್ವಂ' ಎಂಬ ಪದವನ್ನು ಪ್ರಯೋಗ ಮಾಡಿದ್ದಾರೆ.

'ವಿರೋಧೇತ್ವನಪೇಕ್ಷಂ ಸ್ಯಾತ್ ಅಸತಿಹ್ಯನುಮಾನಂ' (೧-೩) ಪೂರ್ವಮೀಮಾಂಸೆಯ ಪ್ರಥಮಾಧ್ಯಾಯದ ತೃತೀಯ ಪಾದದಲ್ಲಿ 'ಧರ್ಮಸ್ಯ ಶಬ್ದಮೂಲತ್ವಾತ್ ಅಶಬ್ದಂ ಅನಪೇಕ್ಷಂ ಸ್ಯಾತ್' ಎಂಬ ಸ್ಮೃತ್ಯಧಿಕರಣದಲ್ಲಿ ಸಕಲ ಸ್ಮೃತಿಗಳು ಮೂಲಶ್ರುತಿಗೆ ಅನುಮಾಪಕವಾಗಿವೆ. ಆದ್ದರಿಂದ ಸ್ಮೃತಿಗಳು ಪ್ರಮಾಣವಾಗುತ್ತವೆ ಎಂದು ಸಮರ್ಥನೆ ಮಾಡಿ ವಿರುದ್ಧವಾದವುಗಳಿಗೆ ಅಪ್ರಾಮಾಣ್ಯವನ್ನು ಹೇಳಲು 'ವಿರೋಧೇತ್ವನಪೇಕ್ಷಂ ಸ್ಯಾತ್' ಎಂಬ ಸೂತ್ರವು ಹೊರಟಿದೆ. ವಿರೋಧೇ = ಸ್ಮೃತಿಗೆ ಶ್ರುತಿವಿರೋಧವು ಪ್ರಾಪ್ತವಾದರೆ, ಅನಪೇಕ್ಷಂ = ಸ್ಮೃತಿಗೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಬಾರದು. ಹೀಗೆ ಹೇಳಿದರೆ ಪೂರ್ವಾಧಿಕರಣದಿಂದ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ವಿರೋಧೇ ಅಸತಿ ತು' = ಸ್ಮೃತಿಗೆ ಶ್ರುತಿಯಿಂದ ವಿರೋಧ ಇಲ್ಲದಿದ್ದರೆ ಮಾತ್ರ ಸ್ಮೃತಿಯು, ಅನುಮಾನಂ = ಮೂಲಭೂತವಾದ ಶ್ರುತಿಯನ್ನು ಅನುಮಾನ ಪ್ರಮಾಣದ ಮೂಲಕ ಸಾಧಿಸುತ್ತದೆ. ಹೀಗೆ ಸ್ಮೃತ್ಯಧಿಕರಣದಲ್ಲಿ ಹೇಳಲಾಗಿದೆ ಎಂದರ್ಥ.

**भावदीपः** – जैमिनीयन्यायवैषम्यं वक्तुकामः भाष्यस्थतेषामिति पदे प्रकृतिप्रत्ययार्थं वदन् तत्तात्पर्यमाह – **स्मृतीनामिति** ।।

ಜೈಮಿನೀಯನ್ಯಾಯದಿಂದ ವೈಷಮ್ಯವನ್ನು ತೋರಿಸಲು ಇಚ್ಛಿಸಿದರೆ ಹಾಗೂ ಭಾಷ್ಯದಲ್ಲಿರುವ 'ತೇಷಾಂ' ಎಂಬ ಪದದಲ್ಲಿ ಪ್ರಕೃತಿಪ್ರತ್ಯಯಾರ್ಥಗಳನ್ನು ಹೇಳಲು ಬಯಸಿದ್ದಾರೆ. ಹಾಗಾಗಿ ತಾತ್ಪರ್ಯವನ್ನಷ್ಟೆ ತೋರಿಸಲು 'ಸ್ಮೃತೀನಾಮ್' ಎಂದು ಹೇಳಿದ್ದಾರೆ.

### ರುದ್ರಾದಿಗಳು ದೋಷರಹಿತರಷ್ಟೇ ಅಲ್ಲ, ಗುಣಭರಿತರೂ ಆಗಿದ್ದಾರೆ

**भावदीपः** – भ्रमप्रमादादिदोषाभावेन यथार्थज्ञानपूर्वकत्वरूपगुणेन च युक्तत्वादित्यर्थः। सर्वज्ञा हीत्यादि व्यनक्ति॥ **रुद्रादीनामिति** ।। हिशब्दार्थः प्रसिद्धत्वादिति। सार्वज्ञमुपलक्षणं मत्त्वोक्तं जगदिति – **श्रुतेश्चेति** ।।

'ಸ್ಮೃತೀನಾಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ವಾಕ್ಯದಲ್ಲಿ ರುದ್ರ, ಕಪಿಲ ಮೊದಲಾದವರಿಗೆ ಯಾವುದೇ ದೋಷವಿಲ್ಲವೆಂದು ಹೇಳಿದ್ದಾರೆ. ದೋಷವೆಂದರೆ ಭ್ರಮ, ಪ್ರಮಾದ ಮೊದಲಾದವುಗಳು ಎಂದರ್ಥ. ಈ ದೋಷಗಳು ಇಲ್ಲ ಎಂದಷ್ಟೇ ಅಲ್ಲ. ರುದ್ರಾದಿಗಳು ಯಥಾರ್ಥಜ್ಞಾನವುಳ್ಳವರಾಗಿದ್ದಾರೆ. ಹೀಗೆ ಯಥಾರ್ಥಜ್ಞಾನ ಪೂರ್ವಕತ್ವವೆಂಬ ಗುಣದಿಂದಲೂ ಯುಕ್ತವಾಗಿರುವುದರಿಂದ ಆ ಸ್ಮೃತಿಗಳು ಪ್ರಮಾಣವಾಗುತ್ತವೆ ಎಂಬುದು ಈ ವಾಕ್ಯದ ಅರ್ಥ. 'ಸರ್ವಜ್ಞಾ ಹಿ' ಇತ್ಯಾದಿ ಭಾಷ್ಯವನ್ನು 'ರುದ್ರಾದೀನಾಂ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿರುವ 'ಹಿ' ಶಬ್ದಕ್ಕೆ 'ಪ್ರಸಿದ್ಧತ್ವಾತ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಸಾರ್ವಜ್ಞವು ಉಪಲಕ್ಷಣವಾಗಿದೆ ಎಂದು ತಿಳಿದು 'ಜಗದ್ಧಿತೋಪದೇಷ್ಟೃತ್ವಸ್ಯ' ಎಂದು ಟೀಕೆಯಲ್ಲಿ ಹೇಳಿದ್ದಾರೆ.

### ಶ್ರುತಿಗೆ ಸ್ಮೃತಿಯನ್ನು ವಿರೋಧಿಸಲು ಸಾಧ್ಯವಿಲ್ಲ

**भावदीपः** – 'आप्तैः प्रत्यक्षतो दृष्ट्वा प्रोक्तमर्थं कथं श्रुतिः। पिपीलिकालिपिनिभा वारयेत्सर्वगाहिते' इत्यनुभाष्योक्तेरिति भावः। जैमिनीयन्यायस्य गतिमाह – **क्वचिदिति**।। भट्टमते अर्थान्तरकल्पनं प्राभाकरमते अप्रामाण्यमादिपदार्थः।। छ ।।

'ಆಪ್ತೈಃ ಪ್ರತ್ಯಕ್ಷತೋ ದೃಷ್ಟ್ವಾ ಪ್ರೋಕ್ತಮರ್ಥಂ ಕಥಂ ಶ್ರುತಿಃ ಪಿಪೀಲಿಕಾಲಿಪಿನಿಭಾ ವಾರಯೇತ್ ಸರ್ವಗಾ ಹಿ ತೇ' ಆಪ್ತರು ಪ್ರತ್ಯಕ್ಷದಿಂದ ಕಂಡು ಯಾವುದನ್ನು ಹೇಳಿರುತ್ತಾರೋ ಇಂತಹ ಪರಮಪ್ರಮಾಣವಾದ ಅರ್ಥವನ್ನು ಇರುವೆಯ ಸಾಲಿಗೆ ಸಮಾನವಾದ ಶ್ರುತಿಯು ಹೇಗೆ ತಾನೇ ನಿವಾರಣೆ ಮಾಡೀತು? ಎಂಬ ಅನುವ್ಯಾಖ್ಯಾನದ ಮಾತಿನಂತೆ ಶ್ರುತಿಯು ಸ್ಮೃತಿಯನ್ನು ವಿರೋಧ ಮಾಡಲು ಸಾಧ್ಯವಿಲ್ಲ ಎಂಬುದನ್ನು 'ಶ್ರುತೇಶ್ಚ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ. ಜೈಮಿನೀಯ ನ್ಯಾಯದಿಂದ ಮಾಡಿದ ಪ್ರಶ್ನೆಗೆ ಉತ್ತರವನ್ನು 'ಕ್ವಚಿತ್' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಭಟ್ಟ ಮತದ ಪ್ರಕಾರ ಸ್ಮೃತಿಗೆ ಅರ್ಥಾಂತರವನ್ನು ಕಲ್ಪನೆ ಮಾಡಬೇಕು. ಪ್ರಾಭಾಕರರ ಮತದ ಪ್ರಕಾರ ಅಪ್ರಾಮಾಣ್ಯವನ್ನೇ ಹೇಳಬೇಕು. ಇದನ್ನು ಟೀಕೆಯಲ್ಲಿ 'ಅರ್ಥಾಂತರಕಲ್ಪನಾದಿ' ಎಂಬಲ್ಲಿರುವ ಆದಿ ಪದದಿಂದ ತಿಳಿಸಿದ್ದಾರೆ.

### ಸಿದ್ಧಾಂತ ಭಾಷ್ಯಕ್ಕೆ ವ್ಯಾಖ್ಯಾನ

**भावदीपः** – अस्य पूर्वोक्तविरोधनिरासकत्वद्योतनाय प्रतिज्ञाहेतू बहिरेवाह – **युक्तमिति**।। भाष्योपात्तस्य सौत्रनञः पूर्वकृतचोद्येनान्वय इति भावेनाह – **न च**

**श्रुतेरिति ।।** तत्र हेतुत्वेन दोषप्रसङ्गादिति सूत्रांशं आकाङ्क्षितपूर्त्या योजयति श्रुतिविरोधेनेति ॥

ಜಗತ್ಕಾರಣತ್ವ ವಿಷಯದಲ್ಲಿ ಹಿಂದೆ ಹೇಳಿದ ವಿರೋಧಕ್ಕೆ ಅವಕಾಶವಿಲ್ಲ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ರತಿಜ್ಞೆ ಮತ್ತು ಹೇತುಗಳನ್ನು ಹೊರಗಡೆಯೇ ಹೇಳಿದ್ದಾರೆ ಎಂಬುದನ್ನು 'ಯುಕ್ತಂ' ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. ಭಾಷ್ಯದಲ್ಲಿ ಸ್ವೀಕರಿಸಿದ ಸೂತ್ರದಲ್ಲಿರುವ 'ನಞ್' ಗೆ ಹಿಂದೆ ಮಾಡಿದ ಪೂರ್ವಪಕ್ಷದ ಜೊತೆ ಅನ್ವಯವನ್ನು ತಿಳಿಯಬೇಕು. ಈ ವಿಷಯವನ್ನು ಟೀಕೆಯಲ್ಲಿ 'ನ ಚ ಶ್ರುತೇಃ' ಎಂಬ ವಾಕ್ಯದಿಂದ ತಿಳಿಸಿದ್ದಾರೆ. ಸೂತ್ರದಲ್ಲಿರುವ 'ದೋಷಪ್ರಸಂಗಾತ್' ಎಂಬುದು ಈ ವಿಷಯದಲ್ಲಿ ಹೇತುವಾಗಿದೆ. ಹೀಗೆ ಸೂತ್ರಾಂಶವನ್ನು ಆಕಾಂಕ್ಷದ ಪೂರಣೆಯ ಮೂಲಕ ಯೋಜನೆ ಮಾಡಲು 'ಶ್ರುತಿವಿರೋಧೇನ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿಷ್ಣುವಿನಲ್ಲಿರುವ ಸಾರ್ವಜ್ಞವು ನಿರತಿಶಯ ಹಾಗೂ ನಿಸ್ಸಂಶಯ

**भावदीपः – प्रसङ्गादिति ।।** प्रकृष्टसंबन्धादित्यर्थः। इदानीं तु श्रुतेरित्यादिभाष्यां (शव्यावर्त्यपूर्व)शं अवतार्य शेषपूर्त्या व्याचष्टे॥ **न चेति ।।** अन्येत्याद्यंशं व्यावर्त्यपूर्वं व्याचष्टे– **न च वक्तव्यमिति ।।** विष्णुमनुप्रभृतिभिरित्यर्थः। नितरां निरतिशयं निस्संशयं वा। भाष्यस्थैवकारभावमाह – **जगदिति ।।**

'ದೋಷಪ್ರಸಂಗಾತ್' ಎಂಬಲ್ಲಿರುವ ಪ್ರಸಂಗ ಶಬ್ದಕ್ಕೆ ದೋಷದ ಜೊತೆ ಪ್ರಕೃಷ್ಟವಾದ ಸಂಬಂಧ ಬರಬೇಕಾಗುತ್ತದೆ ಎಂದರ್ಥ.

'ಶ್ರುತೇಃ' ಇತ್ಯಾದಿ ಭಾಷ್ಯದ ಅಂಶಕ್ಕೆ ಅವತಾರಿಕೆ ನೀಡಿ ಭಾಷ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದದ್ದನ್ನು ಉಲ್ಲೇಖ ಮಾಡುವ ಮೂಲಕ ವ್ಯಾಖ್ಯಾನ ಮಾಡಲು 'ನ ಚ' ಇತ್ಯಾದಿ ವಾಕ್ಯವು ಹೊರಟಿದೆ. 'ಅನ್ಯ' ಎಂಬ ಅಂಶದಿಂದ ವ್ಯಾವೃತ್ತವಾದ ಪೂರ್ವಪಕ್ಷವನ್ನು ಉಲ್ಲೇಖ ಮಾಡುವುದರ ಮೂಲಕ ಭಾಷ್ಯವನ್ನು 'ನ ಚ ವಕ್ತವ್ಯಂ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಷ್ಣು, ಮನು ಮೊದಲಾದ ಪರಮಾಪ್ತರಿಂದ ರಚಿತವಾದ ಪಂಚರಾತ್ರಾದಿಸ್ಮೃತಿ ಎಂದು ತಿಳಿಯಬೇಕು. ಇದು ಆದಿ ಪದದ ಅರ್ಥ. 'ನಿತರಾಂ' ಎಂಬ ಪದಕ್ಕೆ ನಿರತಿಶಯವಾದ ಎಂದರ್ಥ. ಆಥವಾ

ಸಂಶಯವಿಲ್ಲದ ಎಂದರ್ಥ. ವಿಷ್ಣ್ವಾದಿಗಳಲ್ಲಿರುವ ಸಾರ್ವಜ್ಞ್ಯವು ನಿರತಿಶಯವಾಗಿದೆ ಮತ್ತು ಸಂಶಯರಹಿತವಾಗಿದೆ. ಆದರೆ ರುದ್ರಾದಿಗಳಲ್ಲಿರುವ ಸಾರ್ವಜ್ಞ್ಯದಲ್ಲಿ ನಿರತಿಶಯತ್ವವಿಲ್ಲ ಹಾಗೂ ಸಂಶಯವುಳ್ಳದ್ದೇ ಆಗಿದೆ ಎಂಬುದು ಧ್ವನಿತಾರ್ಥ. ಭಾಷ್ಯದಲ್ಲಿರುವ 'ಏವಕಾರ'ದ ಅಭಿಪ್ರಾಯವನ್ನು 'ಜಗದ್‌ಹಿತೋಪದೇಷ್ಟೃಭಿಃ' ಎಂದು ಹೇಳಿದ್ದಾರೆ.

### ವಿಷ್ಣುವಿನಲ್ಲಿ ಆಪ್ತತಮತ್ವವಿದೆ

**भावदीपः** – श्रुत्यनुसारित्वादित्यन्यत्रोक्तं हेतुमत्र व्यावर्त्यशङ्कापूर्वं योजयति॥ **कुत इति**॥ भाष्ये नितरां सर्वज्ञैरेवेत्येतद्रुद्रादीनां सकाशाद्विष्ण्वादीनामेवाप्तत्व-मित्यन्यत्रोक्ताप्तशब्दार्थविवरणमिति भावेनाप्ततमत्वमित्यनुवादः।

'ಶ್ರುತ್ಯನುಸಾರಿತ್ವಾತ್' ಎಂಬುದಾಗಿ ಬೇರೆಡೆ ಹೇಳಿದ ಹೇತುವನ್ನು ಪ್ರಕೃತ ಪೂರ್ವಪಕ್ಷಕ್ಕೆ ಪರಿಹಾರಕವಾಗಿ ಯೋಜನೆ ಮಾಡಲು 'ಕುತಃ' ಇತ್ಯಾದಿ ವಾಕ್ಯವು ಹೊರಟಿದೆ. ಭಾಷ್ಯದಲ್ಲಿ 'ನಿತರಾಂ ಸರ್ವಜ್ಞೈರೇವ' ಎಂದು ಹೇಳಿದ್ದಾರೆ. ಇದರ ವ್ಯಾಖ್ಯಾನವನ್ನು ಹೀಗೆ ತಿಳಿಯಬೇಕು. ರುದ್ರಾದಿಗಳಿಗಿಂತಲೂ ವಿಷ್ಣುವಿನಲ್ಲಿ ಸಾರ್ವಜ್ಞ್ಯವು ನಿರತಿಶಯವಾಗಿದೆ. ಆದ್ದರಿಂದಲೇ ರುದ್ರಾದಿಗಳಿಗಿಂತಲೂ ಹೆಚ್ಚಿನ ಆಪ್ತತ್ವವು ವಿಷ್ಣುವಿನಲ್ಲಿದೆ. ಈ ಹೇತುವನ್ನು ಬೇರೆ ಕಡೆ ಹೇಳಲಾಗಿದೆ. ಅದನ್ನು ಇಲ್ಲಿ ವಿವಕ್ಷಿಸುವ ಮೂಲಕ ಭಾಷ್ಯದಲ್ಲಿರುವ ಆಪ್ತಶಬ್ದಾರ್ಥದ ವಿವರಣೆಯನ್ನು ಟೀಕೆಯಲ್ಲಿ 'ಆಪ್ತತಮತ್ವಂ' ಎಂದು ಅನುವಾದ ಮಾಡಿದ್ದಾರೆ.

### ಪಂಚರಾತ್ರದಲ್ಲಿ ಹೇಳಿದ್ದಕ್ಕೆ ಶ್ರುತಿಸಂವಾದ ಇದ್ದೇ ಇದೆ

**भावदीपः** – यत्तु श्रुतावनुक्तमेव जीवोत्पत्त्यादि पञ्चरात्रे कथ्यत इत्यादि तत्तु अनुव्याख्यानसुधाचन्द्रिकासु समयपादान्ते निरस्तं ध्येयम् । अन्यस्मृतीनां इत्यादिसूत्रांशस्य शेषपूर्त्या बाधातिबाधयोरुक्तिपरत्वेन द्वेधार्थं वदन् उपसंहरति॥ **अत इति**॥

ಶ್ರುತಿಯಲ್ಲಿ ಜೀವೋತ್ಪತ್ತ್ಯಾದಿ ವಿಷಯವು ಇರುವುದಿಲ್ಲ. ಪಂಚರಾತ್ರದಲ್ಲಿ ಇದರ ಬಗ್ಗೆ ಹೆಚ್ಚಿನ ಮಾಹಿತಿ ಸಿಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ಹೇಳದ್ದನ್ನೂ ಕೂಡ ಪಂಚರಾತ್ರದಲ್ಲಿ ಹೇಳಿದ್ದಾರೆ ಇತ್ಯಾದಿ ವಿಷಯವನ್ನು ಅನುವ್ಯಾಖ್ಯಾನ, ನ್ಯಾಯಸುಧಾ ಹಾಗೂ ಚಂದ್ರಿಕಾ ಮೊದಲಾದ ಗ್ರಂಥಗಳಲ್ಲಿ ಸಮಯ ಪಾದದ ಕೊನೆಯಲ್ಲಿ ನಿರಾಕರಣೆ ಮಾಡಲಾಗಿದೆ.

ಸೂತ್ರದಲ್ಲಿರುವ 'ಅನ್ಯಸ್ಮೃತೀನಾಂ' ಎಂಬ ಅಂಶವನ್ನು ಶೇಷಪೂರಣ ಮಾಡಿಕೊಳ್ಳುವ ಮೂಲಕ ವ್ಯಾಖ್ಯಾನ ಮಾಡುತ್ತಿದ್ದಾರೆ. ಪಾಶುಪತಾದಿ ಇತರ ಸ್ಮೃತಿಗಳಿಗೆ ಬಾಧವನ್ನು ಅಥವಾ ಅತಿಬಾಧವನ್ನು ಹೇಳಬೇಕು ಎಂದು ಸಮರ್ಥನೆ ಮಾಡುವ ಮೂಲಕ ಎರಡು ಅರ್ಥಗಳನ್ನು ಹೇಳುವ ಮೂಲಕ 'ಅತಃ' ಎಂಬ ಗ್ರಂಥದಿಂದ ಉಪಸಂಹಾರ ಮಾಡುತ್ತಿದ್ದಾರೆ.

## ಪಾಶುಪತಾದಿ ಸ್ಮೃತಿಗೆ ಬಾಧವಷ್ಟೇ ಅಲ್ಲ, ಅತಿಬಾಧವಿದೆ

**भावदीपः –** तदुक्तस्येत्यादिहेतुद्वयपरामर्शः। आप्तत्वे हेतुरयं निरवकाशत्वादिति। अप्रामाण्याख्यस्य वाऽर्थान्तरपरत्वरूपस्य वा अवकाशस्याभावादित्यर्थः। अत्रापि प्रसङ्गशब्दः प्रकृष्टसङ्ग(संबन्ध)वाची । एतेन श्रुतेरित्यतःपूर्वं भाष्यं बाधोक्तिपरं श्रुतेरित्यादित्वतिबाधोक्तिपरमिति भाष्याभिप्रायः उक्तो ध्येयः॥ १ ॥

'ಅತಃ' ಎಂಬ ಪದಕ್ಕೆ ಪಂಚರಾತ್ರಾದಿಗಳಲ್ಲಿ ಹೇಳಿದ್ದಕ್ಕೆ ಶ್ರುತಿಸಂವಾದ ಇರುವುದರಿಂದ ಮತ್ತು ಪಾಶುಪತಾದಿಗಳಲ್ಲಿ ಹೇಳಿದ್ದಕ್ಕೆ ಶ್ರುತಿಸಂವಾದ ಇಲ್ಲದೇ ಇರುವುದರಿಂದ ಎಂದು ಎರಡು ಅರ್ಥ. ವಿಷ್ಣುವಿಗೆ ಆಪ್ತತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಈ ಹೇತುವೆಂದು ತಿಳಿಯಬೇಕು. 'ನಿರವಕಾಶತ್ವಾತ್' ಎಂಬುದರ ಅಭಿಪ್ರಾಯ ಹೀಗಿದೆ – ಪುರುಷೋತ್ತಮನಿಂದ ಪ್ರಣೀತವಾದ ಪಂಚರಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವೇ ಇಲ್ಲ ಮತ್ತು ಅರ್ಥಾಂತರವನ್ನು ಕಲ್ಪನೆ ಮಾಡಲೂ ಕೂಡ ಸಾಧ್ಯವೇ ಇಲ್ಲ ಎಂದು.

'ಅಪ್ರಾಮಾಣ್ಯಪ್ರಸಂಗಾತ್' ಎಂಬಲ್ಲಿರುವ ಪ್ರಸಂಗ ಶಬ್ದಕ್ಕೆ ಹಿಂದೆ ಹೇಳಿದಂತೆ ಅಪ್ರಾಮಾಣ್ಯವೆಂಬ ದೋಷದ ಪ್ರಕೃಷ್ಟವಾದ ಸಂಬಂಧವುಳ್ಳದ್ದಾಗಿದೆ ಎಂದರ್ಥ. ಹೀಗೆ ಹೇಳಿದ್ದರಿಂದ 'ಶ್ರುತೇಃ' ಎಂಬಲ್ಲಿರುವ ತನಕ ಇರುವ ಭಾಷ್ಯವು ಪಾಶುಪತಾದಿ ಸ್ಮೃತಿಗೆ ಬಾಧವನ್ನು ಹೇಳಲು ಹೊರಟಿದೆ. 'ಶ್ರುತೇಃ' ಇತ್ಯಾದಿ ಮುಂದಿನ ಭಾಷ್ಯವಾಕ್ಯವು ಅತಿಬಾಧವನ್ನು ಹೇಳಲು ಹೊರಟಿದೆ ಎಂಬುದಾಗಿ ವ್ಯಾಖ್ಯಾನ ಮಾಡಿದಂತಾಯಿತು.

## ಬ್ರಹ್ಮಸೂತ್ರ

### 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – ।। इतरेषां चानुपलब्धेः ।।२।।**

ಸೂತ್ರಾರ್ಥ - ಪಾಶುಪತಾದಿ ಸ್ಮೃತಿಗಳಲ್ಲಿ ಕೆಲವೆಡೆ ದೃಷ್ಟ ಪ್ರಯೋಜನವು ದೊರೆಯುತ್ತದೆಂದು ಹೇಳಲಾಗಿದೆ. ಆದರೆ ಅಂತಹ ಪ್ರಯೋಜನಗಳು ದೊರೆಯುತ್ತಿಲ್ಲ. ಹಾಗಾಗಿ ಆ ಸ್ಮೃತಿಗಳು ಅಪ್ರಮಾಣವಾಗಿವೆ. ಕೆಲವು ಫಲಗಳು ದೊರೆಯಬಹುದೆಂಬುದನ್ನು ಚ ಶಬ್ದದಿಂದ ಸೂಚಿಸಿದ್ದಾರೆ.

ಅರ್ಥ -- ಸೂತ್ರದಲ್ಲಿ 'ಅನುಪಲಬ್ಧೇಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಆವಾಗ 'ಅನುಪಲಬ್ಧೇಃ ಇತರೇಷಾಂ ಅನುಪಲಬ್ಧೇಃ' ಎಂದು ಹೇಳಿದಂತಾಗುತ್ತದೆ. ಚಶಬ್ದವು ಕೆಲವು ದೃಷ್ಟಫಲಗಳು ದೊರೆಯುವುದನ್ನು ನಾವೂ ಕೂಡ ಅಂಗೀಕರಿಸಿದ್ದೇವೆ ಎಂಬುದನ್ನು ಸೂಚನೆ ಮಾಡುತ್ತಿದೆ. ಆದ್ದರಿಂದ ಅನುಪಲಬ್ಧೇಃ = ಅತೀಂದ್ರಿಯವಾದ ಜಗತ್ಕರ್ತೃತ್ವಾದಿಗಳಿಗಿಂತ, ಇತರೇಷಾಂ = ಭಿನ್ನವಾದ ಪ್ರತ್ಯಕ್ಷಯೋಗ್ಯವಾದ ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಫಲಗಳು, ಅನುಪಲಬ್ಧೇಃ = ಪ್ರತ್ಯಕ್ಷವಾಗಿ ಕಾಣಸುತ್ತಿಲ್ಲ. ಅನಿಷ್ಟವಾದ ಆಚರಣೆಯಿಂದ ಕ್ರಿಯಾಪರಿಲೋಪವಾದರೂ ದುಷ್ಪರಿಣಾಮ ಕಾಣಸುತ್ತಿಲ್ಲ. ಮತ್ತು ವಿಧಾನ ಮಾಡಲ್ಪಟ್ಟ ಸತ್ಕರ್ಮಾಚರಣೆಯಿಂದ ಶುಭಫಲಗಳು ದೊರೆಯುತ್ತಿಲ್ಲ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಿವೆ ಎಂದರ್ಥ.

## ಬ್ರಹ್ಮಸೂತ್ರಭಾಷ್ಯ

### ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ಫಲ ದೊರೆಯುತ್ತಿಲ್ಲ

**ब्रह्मसूत्रभाष्यम् – ।। इतरेषां चानुपलब्धेः ।।२।।**

**इतरेषां तासु स्मृतिषूक्तानां फलानां प्रत्यक्षतोऽनुपलब्धेरप्रामाण्यं तासां युक्तम् ।**

ಅನುವಾದ - ಪಾಶುಪತಾದಿಸ್ಮೃತಿಗಳಲ್ಲಿ ಹೇಳಲ್ಪಟ್ಟ ದೃಷ್ಟಫಲಕವಾದ ಕರ್ಮಗಳ ಫಲವು ಪ್ರತ್ಯಕ್ಷವಾಗಿ ಸಿದ್ಧವಾಗುತ್ತಿಲ್ಲ. ಆದ್ದರಿಂದ ಅವುಗಳಿಗೆ ಅಪ್ರಾಮಾಣ್ಯವನ್ನು ಹೇಳುವುದೇ ಯುಕ್ತ.

ಪ್ರತಿಪದಾರ್ಥ -- ವೈಷ್ಣವ ಸ್ಮೃತಿಗಳು ಪರಮಾತ್ಮನಾದ ಮಹಾವಿಷ್ಣುವಿನಿಂದ ಪ್ರಣೀತವಾದ ಕಾರಣ ಇವುಗಳ ಸಹಾಯ

ಹೊಂದಿದ ಶ್ರುತಿಗಳು ಪ್ರಬಲವಾಗಿವೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ ಎಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಸರಿಯಲ್ಲ. ಹಾಗಾದಲ್ಲಿ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯದೋಷವು ಬರಬೇಕಾದೀತು. ಆಪ್ತೋಕ್ತವಾದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ತಪ್ಪಲ್ಲವೇ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಇತರೇಷಾಂ = ರುದ್ರಾದಿಗಳ, ತಾಸು = ಕೃತಿಯೆನಿಸಿದ, ಸ್ಮೃತಿಷು = ಪಾಶುಪತಾದಿ ಸ್ಮೃತಿಗಳಲ್ಲಿ, ಉಕ್ತಾನಾಂ = ಹೇಳಲ್ಪಟ್ಟ, ಫಲಾದೀನಾಂ = ಫಲಗಳು, ಪ್ರತ್ಯಕ್ಷತಃ = ಪ್ರತ್ಯಕ್ಷವಾಗಿ, ಅನುಪಲಬ್ಧೇಃ = ಉಂಟಾಗುವುದು ಕಾಣಿಸುತ್ತಿಲ್ಲ. ಆದ್ದರಿಂದ ತಾಸಾಂ = ಪಾಶುಪತಾದಿಸ್ಮೃತಿಗಳಿಗೆ, ಅಪ್ರಾಮಾಣ್ಯಂ = ಅಪ್ರಾಮಾಣ್ಯವನ್ನು ಹೇಳುವುದು, ಯುಕ್ತಂ = ಯುಕ್ತವಾಗುತ್ತದೆ

### ಕೆಲವು ವಾಕ್ಯಗಳು ಪ್ರಮಾಣವಾದರೆ ಸಾಲದು

**ब्रह्मसूत्रभाष्यम् — च शब्देन भागोपलब्धिरङ्गीकृता ॥२॥**

ಅನುವಾದ - ಸೂತ್ರದಲ್ಲಿರುವ ಚಶಬ್ದದಿಂದ ಪಾಶುಪತಾದಿ ಸ್ಮೃತಿಗಳಲ್ಲಿ ಕೆಲವು ಭಾಗಗಳಲ್ಲಿ ಹೇಳಲ್ಪಟ್ಟ ಪ್ರತ್ಯಕ್ಷಫಲಗಳು ಕಾಣಿಸುತ್ತಿವೆ ಎಂಬುದನ್ನು ನಾವೂ ಕೂಡ ಅಂಗೀಕರಿಸಿದ್ದೇವೆ ಎಂಬುದನ್ನು ಸೂಚಿಸಿದ್ದಾರೆ.

ಪ್ರತಿಪದಾರ್ಥ -- ಪಾಶುಪತಾದಿ ಸ್ಮೃತಿಗಳಲ್ಲಿ ವಿಹಿತವಾದ ಅನುಷ್ಠಾನವನ್ನು ಮಾಡಿದಾಗ ಫಲವು ದೊರೆಯುವುದು ಕಂಡಿದೆ. ಅದರಲ್ಲಿ ನಿಷೇಧ ಮಾಡಿದ್ದನ್ನು ಅನುಷ್ಠಾನ ಮಾಡಿದಾಗ ಅನರ್ಥವುಂಟಾಗುವುದೂ ಕೂಡ ಕಂಡಿದೆ. ಹೀಗಿರುವಾಗ ಸೂತ್ರದಲ್ಲಿ ಅನುಪಲಬ್ಧಿಯನ್ನು ಹೇಗೆ ಹೇಳಿದರು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಚ ಶಬ್ದೇನ = ಸೂತ್ರದಲ್ಲಿರುವ ಚ ಶಬ್ದದಿಂದ, ಭಾಗೋಪಲಬ್ಧಿಃ = ಕೆಲವು ಭಾಗಗಳಲ್ಲಿ ಹೇಳಲ್ಪಟ್ಟ ಅನುಷ್ಠಾನಗಳಿಂದ ಫಲವು ದೊರೆಯುತ್ತದೆ ಎಂಬುದನ್ನು, ಅಂಗೀಕೃತಾ = ಅಂಗೀಕರಿಸಿದ್ದೇವೆ.

## ಸತ್ತರ್ಕದೀಪಾವಳಿ

### ಅನುಮಾನ ಅಸಾಧಕ

**सत्तर्कदीपावळिः – क्वचिदर्थे प्रत्यक्षसंवादिपशुपतिवाक्यदृष्टान्तेन पशुपतिर्जगत्कारणम् इत्यागमोपि प्रामाण्यम् । पशुपतिवाक्यत्वात् इत्येतदनुमानुकूलत्वेन तदागमस्यापि प्रामाण्यं किं न स्यात्? इति न वाच्यम्। प्रत्यक्षविसंवादिपशुपतिवाक्यदृष्टान्तेन पाशुपतागमाप्रामाण्यस्यापि अनुमातुं शक्यत्वात् तदाह – इतरेषामित्यादिना ।।**

"ಪಶುಪತಿಃ ಜಗತ್‌ಕಾರಣಮ್ ಇತ್ಯಾಗಮಃ, ಪ್ರಮಾಣಮ್, ಪಶುಪತಿವಾಕ್ಯತ್ವಾತ್, ಪ್ರತ್ಯಕ್ಷಸಂವಾದಿಪಶುಪತಿವಾಕ್ಯವತ್'' ಕೆಲವು ಪಶುಪತಿವಾಕ್ಯಗಳು ಪ್ರತ್ಯಕ್ಷಸಂವಾದಿಯಾಗಿವೆ. ಆದ್ದರಿಂದ ಇವನ್ನು ಪ್ರಮಾಣವೆಂದು ಒಪ್ಪಲೇಬೇಕು. ಇದರಂತೆ ಉಳಿದ ಪಶುಪತಿವಾಕ್ಯಗಳೂ ಕೂಡ ಪಶುಪತಿವಾಕ್ಯವಾಗಿರುವುದರಿಂದಲೇ ಪ್ರಮಾಣ ಎಂಬುದಾಗಿ ಅನುಮಾನದಿಂದ ಸಾಧನೆ ಮಾಡುತ್ತೇವೆ. ಆದ್ದರಿಂದ ಪಶುಪತಿಯು ಜಗತ್‌ಕಾರಣನಾಗಿದ್ದಾನೆಂಬ ಆಗಮವನ್ನು ಪ್ರಮಾಣವೆಂದು ಏಕೆ ಹೇಳಬಾರದು ?

ಇದು ತಪ್ಪು. ಅನುಮಾನದಿಂದ ವಿಪರೀತವಾಗಿಯೂ ಕೂಡ ಸಾಧನೆ ಮಾಡಬಹುದು - 'ಪಶುಪತಿಃ ಜಗತ್ಕಾರಣ ಇತ್ಯಾಗಮಃ, ಅಪ್ರಮಾಣಮ್, ಪಶುಪತಿವಾಕ್ಯತ್ವಾತ್, ಪ್ರತ್ಯಕ್ಷವಿಸಂವಾದಿ ಪಶುಪತಿವಾಕ್ಯವತ್' ಪಶುಪತಿ ಹೇಳಿದ ಕೆಲವು ವಾಕ್ಯಗಳು ಪ್ರತ್ಯಕ್ಷಕ್ಕೆ ಸಂವಾದಿಯಾಗಿರುವುದಿಲ್ಲ. ಆದ್ದರಿಂದ ಅಪ್ರಾಮಾಣವಾಗಿವೆ. ಇದರ ಉದಾಹರಣೆಯಿಂದ ಉಳಿದೆಲ್ಲವೂ ಪಶುಪತಿವಾಕ್ಯ-ಗಳಾಗಿರುವುದರಿಂದ ಅಪ್ರಮಾಣವಾಗಿವೆ. ಪಶುಪತಿಯು ಜಗತ್‌ಕಾರಣನಾಗಿದ್ದಾನೆಂದು ಪ್ರತಿಪಾದನೆ ಮಾಡುವ ಆಗಮವೂ ಕೂಡ ಅಪ್ರಮಾಣವಾಗುತ್ತದೆ ಎಂದು ವಿಪರೀತವಾಗಿ ಅನುಮಾನವನ್ನು ಮಾಡುತ್ತೇವೆ. ಇದನ್ನೇ 'ಇತರೇಷಾಂ ಚಾನುಪಲಬ್ಧೇ' ಎಂಬ ಭಾಷ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

### ತತ್ವಪ್ರದೀಪ

**तत्वप्रदीपः – इतरेषां चानुपलब्धेः ।। इतरेषां दृष्टोक्तानां फलानां प्रत्यक्षतोऽनुपलब्धेः अदृष्टोक्तानां चानुदयनिर्णयः स्यात् । यद्यपि तत्र क्वापि यथोदितं तदुपलभ्यते। तथापि नादृष्टप्रवृत्तिः स्यात् । व्यभिचारदर्शनात् ।**

'ಇತರೇಷಾಂ' ಪ್ರತ್ಯಕ್ಷ ಯೋಗ್ಯವಾದ ಫಲಗಳು, ಪ್ರತ್ಯಕ್ಷದಿಂದ ದೊರೆಯುವುದು ಕಾಣಿಸುತ್ತಿಲ್ಲವಾದ್ದರಿಂದ ಅದೃಷ್ಟಫಲಗಳ ವಿಷಯದಲ್ಲಿ ಇವು ಪ್ರಮಾಣವಾಗಿದೆ ಎಂದು ನಿರ್ಣಯ ಮಾಡಲು ಸಾಧ್ಯವಿಲ್ಲ. ವಾಸ್ತವಿಕವಾಗಿ ಕೆಲವೆಡೆ ಹೇಳಲ್ಪಟ್ಟ ಫಲಗಳು ದೊರೆಯುತ್ತವೆ. ಆದರೂ ಕೂಡ ಇಷ್ಟರಿಂದಲೇ ಅದೃಷ್ಟಾರ್ಥದಲ್ಲಿ ಪ್ರವೃತ್ತಿ ಉಂಟಾಗುವುದಿಲ್ಲ. ಏಕೆಂದರೆ ಅನೇಕ ಕಡೆ ವ್ಯಭಿಚಾರವು ಕಂಡಿರುತ್ತದೆ.

### ತತ್ವಪ್ರಕಾಶಿಕಾ

ಆಪ್ತವಾಕ್ಯಕ್ಕೆ ಅಪ್ರಾಮಾಣ್ಯವನ್ನು ಒಪ್ಪಬಹುದೇ ?

**तत्वप्रकाशिका – यदुदितं(क्तं) वैष्णवस्मृतीनां परमाप्तप्रणीतत्वेन तत्साह्य्ययुक्तश्रुत्या विष्णोर्जगत्कारणत्वसिद्धिरिति न तद्युक्तम् । तथा सति पाशुपतादिस्मृतीनामप्रामाण्यसङ्गात् । न चाप्तोक्तानां तासामप्रामाण्यं युज्यत इत्याशङ्क्य परिहरत्सूत्रं पठित्वा व्याचष्टे – इतरेषां चेति ।।**

ಹಿಂದಿನ ಸೂತ್ರದಲ್ಲಿ ವೈಷ್ಣವಸ್ಮೃತಿಗಳು ಪರಮಾತ್ಮನಾದ ವಿಷ್ಣುವಿನಿಂದ ಪ್ರಣೀತವಾಗಿದೆ. ಇಂಥ ಸ್ಮೃತಿಗಳ ಸಹಾಯವುಳ್ಳ ಶ್ರುತಿಗಳು ಅತ್ಯಂತ ಬಲಿಷ್ಠವಾಗಿವೆ. ಈ ಶ್ರುತಿಯಿಂದ ವಿಷ್ಣುವಿನ ಜಗತ್‌ಕಾರಣತ್ವವು ಸಿದ್ಧವಾಗುತ್ತದೆಂದು ಸಮರ್ಥಿಸಲಾಯಿತು. ಇದು ಅಯುಕ್ತ. ಹಾಗಾದಲ್ಲಿ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕಾಗುತ್ತದೆ. ಆಪ್ತವಾಕ್ಯವೆನಿಸಿದ ಈ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಒಪ್ಪುವುದು ಯುಕ್ತವಾಗುವುದಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ಇತರೇಷಾಂ' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ವಿಷ್ಣುವು ಪರಮಾಪ್ತನಾಗಿದ್ದಾನೆ. ಅವನಿಂದ ರಚಿತವಾದ ಪಂಚರಾತ್ರಸ್ಮೃತಿಯು ಪ್ರಮಾಣವಾಗಲಿ, ಅಂದಮಾತ್ರಕ್ಕೆ ಪಾಶುಪತಸ್ಮೃತಿಯು ಏಕೆ ಅಪ್ರಮಾಣವಾಗಬೇಕು? ಎಂಬ ಪ್ರಶ್ನೆಗೆ ಉತ್ತರಿಸಲು ಈ ಸೂತ್ರ ಹೊರಟಿದೆ.

ರುದ್ರಾದಿಗಳು ಆಪ್ತರಾಗಿದ್ದಾರೆ

**तत्वप्रकाशिका – यदुक्तं श्रुत्या विष्णोर्जगत्कारणत्वाभ्युपगमेऽन्यस्मृतीनामप्रामाण्यं प्रसजत इति तत्र यक्तमेव तासामप्रामाण्यमिति वक्तव्यम् । आप्तप्रणीतानां कथं तदिति चेत् ।**

ಶ್ರುತಿಗೆ ಅನುಸಾರಿಯಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡಿದರೆ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವು ಬರುತ್ತದೆ ಎಂದು ಏನು ಆಕ್ಷೇಪ ಮಾಡಲಾಯಿತೋ, ಅದು ತಪ್ಪು. ಏಕೆಂದರೆ ಪಾಶುಪತಾದಿಸ್ಮೃತಿಗಳೆಲ್ಲವೂ ಅಪ್ರಮಾಣವಾಗಿವೆ ಎಂದು ಹೇಳಲೇಬೇಕು.

ಪ್ರಶ್ನೆ - ರುದ್ರಾದಿಗಳೂ ಕೂಡ ಆಪ್ತರಾಗಿದ್ದಾರೆ. ತತ್ಪ್ರಣೀತವಾದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಹೇಗೆ ಸರಿ ?

ಪಾಶುಪತಾದಿಸ್ಮೃತಿಗಳು ಆಪ್ತೋಕ್ತವೇ ಅಲ್ಲ

**तत्वप्रकाशिका – मैवम् । तासु स्मृतिषूक्तानामदृष्टादितरेषां फलानर्थानामुक्तानुष्ठानपरित्यागयोः कृतयोरपि प्रत्यक्षतोऽनुपलब्धेराप्तोक्तत्वानिश्चयादिति भावः । प्रत्यक्षयोग्यत्वमितरेषामित्यनेनोच्यते । ननु पाशुपतादिस्मृतिविहितनिषिद्धाचरणे फलानर्थयोरूपलम्भात्कथं तदनुपलब्धिमसूत्रयदित्यत आह – चशब्देनेति ।।**

ಉತ್ತರ - ಮೇಲಿನ ಪ್ರಶ್ನೆ ಅಯುಕ್ತ. ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ಪ್ರತ್ಯಕ್ಷಯೋಗ್ಯವಾದ ಕರ್ಮಗಳನ್ನು ಅನುಷ್ಠಾನ ಮಾಡಿದರೆ ಫಲವು ದೊರಕುತ್ತಿಲ್ಲ. ಮತ್ತು ಯಾವ ಕರ್ಮವನ್ನು ಪರಿತ್ಯಾಗ ಮಾಡಿದರೆ ಅನರ್ಥವಾಗುತ್ತದೆಂದು ಹೇಳಲಾಗಿದೆಯೋ, ಆ ಕರ್ಮವನ್ನು ಪರಿತ್ಯಾಗ ಮಾಡಿದರೂ ಕೂಡ ಅನರ್ಥವಾಗುವುದು ಕಾಣಿಸುತ್ತಿಲ್ಲ. ಆದ್ದರಿಂದ ಈ ಶಾಸ್ತ್ರವು ಆಪ್ತೋಕ್ತವಾಗಿದೆಯೆಂದು ನಿಶ್ಚಯವೇ ಆಗುವುದಿಲ್ಲ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

ಸೂತ್ರದಲ್ಲಿರುವ 'ಇತರೇಷಾಂ' ಎಂಬ ಪದವು ಪ್ರತ್ಯಕ್ಷಯೋಗ್ಯವಾದ ವಸ್ತುವನ್ನು ಹೇಳುತ್ತದೆ.

ಪ್ರಶ್ನೆ - ಪಾಶುಪತಾದಿ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ವಿಧಾನ ಮಾಡಲಾಗಿದೆಯೋ, ಅದನ್ನು ಆಚರಿಸಿದಾಗ ಫಲವು ದೊರಕುವುದು ಕಾಣಸುತ್ತಿದೆ. ನಿಷೇಧ ಮಾಡಿದ ಕರ್ಮವನ್ನು ಆಚರಣೆ ಮಾಡಿದಾಗ ಅನರ್ಥವಾಗುವುದೂ ಕೂಡ ಕಾಣಸುತ್ತಿದೆ. ಕೆಲವು ಕಡೆ ಹೀಗೆ ಕಾಣಿಸುತ್ತಿರುವುದರಿಂದ ಫಲಾನುಲಬ್ಧಿಯನ್ನು ಸೂತ್ರಕಾರರು ಹೇಗೆ ಹೇಳಿದರು ?

ಉತ್ತರ - ಈ ಪ್ರಶ್ನೆಗೆ ಉತ್ತರವನ್ನು 'ಚ'ಶಬ್ದೇನ ಎಂಬ ಭಾಷ್ಯದಿಂದ ಹೇಳಿರುತ್ತಾರೆ.

ವಿವರಣೆ - ಸೂತ್ರಕಾರರು ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಿಹಿತಕರ್ಮದ ಆಚರಣೆಯಿಂದ ಫಲ ದೊರಕುವುದು ನಿಷಿದ್ಧ ಧರ್ಮಾಚರಣೆಯಿಂದ ಅನರ್ಥವಾಗುವುದು ಕಾಣಿಸುತ್ತಿಲ್ಲವೆಂದು ಹೇಳಿದ್ದಾರೆ. ಫಲ ಹಾಗೂ ಅನರ್ಥಗಳು ಸರ್ವಥಾ ಆಗುವುದೇ ಇಲ್ಲ ಎಂದಭಿಪ್ರಾಯವಲ್ಲ. ಕೆಲವೊಮ್ಮೆ ಫಲ ಸಿಗುವುದಿಲ್ಲ ಮತ್ತು ಅನರ್ಥವಾಗುತ್ತಿಲ್ಲ ಎಂದಷ್ಟೇ ಅಭಿಪ್ರಾಯ. ಆದ್ದರಿಂದ ರುದ್ರಾದಿಗಳನ್ನು ಪರಮಾಪ್ತರೆಂದು ನಿಶ್ಚಯಿಸಲು ಸಾಧ್ಯವಿಲ್ಲ. ರುದ್ರಾದಿಗಳು ಹೇಳಲ್ಪಟ್ಟ ಯಾವುದೇ ವಿಷಯದಲ್ಲೂ ಫಲಾನುಪಲಬ್ಧಿಯು ಉಂಟಾಗಬಾರದು. ಕೆಲವು ವಿಷಯದಲ್ಲಿ ಉಂಟಾಗುತ್ತಿರುವುದರಿಂದ ಪರಮಾಪ್ತತ್ವವನ್ನು ನಿರ್ಣಯಿಸಲಾಗದು ಎಂಬುದಷ್ಟೇ ಸೂತ್ರಕಾರರ ಅಭಿಪ್ರಾಯ.

### ಪಾಶುಪತಸ್ಮೃತಿಯು ಅಪ್ರಮಾಣ

**तत्त्वप्रकाशिका – न सूत्रकृता सर्वात्मनाऽनुपलब्धिरभ्युपगता यया प्रत्यक्षविरोधः किन्तु भागेनोपलब्धिरप्यङ्गीकृता । चशब्देन तस्याः सूचनात् । न च तथा सत्युपलब्धार्थभागवत्सर्वस्याप्तोक्तत्वम् । भागान्तरवदनाप्तोक्तत्वसम्भवादिति भावः ।।**

ಸೂತ್ರಕಾರರು ಸರ್ವಾತ್ಮನಾ ಫಲದ ಅನುಪಲಬ್ಧಿಯನ್ನು ಅಂಗೀಕರಿಸುವುದಿಲ್ಲ. ಹಾಗಾದಲ್ಲಿ ಪ್ರತ್ಯಕ್ಷ ವಿರೋಧ ಬರುತ್ತಿತ್ತು. ಆದ್ದರಿಂದ ಭಾಗಶಃ ಉಪಲಬ್ಧಿಯನ್ನು ಸೂತ್ರಕಾರರು ಅಂಗೀಕರಿಸಿದ್ದಾರೆ. ಸೂತ್ರದಲ್ಲಿರುವ 'ಚ'ಶಬ್ದವು ಇದನ್ನು ಸೂಚನೆ ಮಾಡುತ್ತಿದೆ.

ಪ್ರಶ್ನೆ - ಹಾಗಾದರೆ ಫಲದ ಉಪಲಬ್ಧಿಯಿಂದ ಯಾವ ವಾಕ್ಯಗಳಿಗೆ ಆಪ್ತೋಕ್ತತ್ವವು

ಸಿದ್ಧವಾಗುತ್ತದೋ, ಅದರ ದೃಷ್ಟಾಂತದಿಂದ ಉಳಿದ ಭಾಗಗಳೂ ಕೂಡ ಆಪ್ತೋಕ್ತವೆಂದು ಸಮರ್ಥಿಸಬಹುದಲ್ಲವೇ?

ಉತ್ತರ - ಇದು ತಪ್ಪು. ಇದೇ ನ್ಯಾಯದಿಂದ ಯಾವ ಭಾಗವು ಫಲ ಅನುಪಲಬ್ಧಿಯಿಂದ ಆಪ್ತೋಕ್ತವಲ್ಲವೆಂದು ನಿರ್ಣಯವಾಗಿದೆಯೋ, ಇದರ ದೃಷ್ಟಾಂತದಿಂದ ಉಳಿದ ವಾಕ್ಯಗಳೂ ಕೂಡ ಅನಾಪ್ತೋಕ್ತವಾಗಿವೆ ಎಂದು ವಿಪರೀತವಾಗಿಯೂ ಸಾಧಿಸಬಹುದು. ಆದ್ದರಿಂದ ಪಾಶುಪತಾದಿಸ್ಮೃತಿಗಳಿಗೆ ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ.

## ಭಾವದೀಪ

### ಭಾಷ್ಯದ ಪ್ರತಿಜ್ಞೆ ಹಾಗೂ ಹೇತುಗಳ ವ್ಯಾಖ್ಯಾನ

**भावदीपः – इतरेषां चानुपलब्धेः ।।** भाष्ये प्रतिज्ञांशं तावद् व्याचष्टे – **यदुदितमित्यादिना ।।** हेत्वंशं व्यनक्ति ।। तास्विति ।। अयोग्यानामनुपलब्धिरदोषायेत्यतोऽदृष्टादितरेषामिति फलादीनामित्यस्यार्थः फलानर्थानामिति। पुमर्थापुमर्थानामित्यर्थः ।

ಭಾಷ್ಯದಲ್ಲಿ ಪ್ರತಿಜ್ಞಾಂಶವನ್ನು ವ್ಯಾಖ್ಯಾನ ಮಾಡಲು 'ಯದುದಿತಂ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಹೇತ್ವಂಶವನ್ನು ವ್ಯಾಖ್ಯಾನ ಮಾಡಲು 'ತಾಸು' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಕಣ್ಣಿಗೆ ಕಾಣಿಸದ ಪದಾರ್ಥವು ಅನುಪಲಬ್ಧವಾದರೆ ದೋಷವೇ ಆಗುವುದಿಲ್ಲ? ಎಂಬ ಪ್ರಶ್ನೆಗೆ 'ಅದೃಷ್ಟಾತ್ ಇತರೇಷಾಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅರ್ಥವನ್ನೇ 'ಫಲಾನರ್ಥಾನಾಂ' ಎಂದು ವಿವರಿಸಿದ್ದಾರೆ. 'ಫಲಾನರ್ಥಾನಾಂ' ಎಂದರೆ ಪುರುಷಾರ್ಥ ಹಾಗೂ ಅಪುರುಷಾರ್ಥಗಳಿಗೆ ಎಂದರ್ಥ.

### ಸೂತ್ರದಲ್ಲಿರುವ ಅನುಪಲಬ್ಧೇಃ ಎಂಬ ಪದಕ್ಕೆ ಎರಡು ಕಡೆ ಅನ್ವಯ

**भावदीपः** – ततश्च किमित्यतो भावमाह – **आप्तेति ।।** अनुपलब्धिमात्रेण कथमसत्वनिर्णय इत्यत आह – **प्रत्यक्षेति ।।** एतेन सूत्रे न विद्यते उपलब्धिर्यस्य

तदनुपलब्धि उपलब्ध्ययोग्यं तस्माददृष्टादितरेषां प्रत्यक्षयोग्यानां फलानामनुपलब्धेरनु-पलम्भादित्येवमनुपलब्धिशब्दः काकाक्षिवदुभयत्रान्वेतीत्युक्तं भवति॥२॥

ಏನು ಹೇಳಿದಂತಾಯಿತು? ಎಂಬುದರ ಅಭಿಪ್ರಾಯವನ್ನು 'ಆಪ್ತ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ. ಕಣ್ಣಿಗೆ ಕಾಣಿಸುವುದಿಲ್ಲ ಎಂಬ ಮಾತ್ರಕ್ಕೆ ಅಪ್ರಮಾಣವೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ 'ಪ್ರತ್ಯಕ್ಷಯೋಗ್ಯತ್ವಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಹೀಗೆ ಹೇಳಿದ್ದರಿಂದ ಸೂತ್ರದಲ್ಲಿರುವ 'ಅನುಪಲಬ್ಧೇಃ' ಎಂಬ ಪದವು ಕಾಕಾಕ್ಷಿನ್ಯಾಯದಿಂದ 'ಅನುಪಲಬ್ಧೇಃ' ಎಂಬ ಪದದ ಮೊದಲು ಮತ್ತು ಅನಂತರವೂ ಅನ್ವಯವನ್ನು ಹೊಂದುತ್ತದೆ. ಮೊದಲಿರುವ 'ಅನುಪಲಬ್ಧೇಃ' ಎಂಬ ಪದಕ್ಕೆ ಪ್ರತ್ಯಕ್ಷ ಅಯೋಗ್ಯವಾದ ಎಂದರ್ಥ. ಎರಡನೇ 'ಅನುಪಲಬ್ಧೇಃ' ಪದಕ್ಕೆ ಕಾಣಿಸುತ್ತಿಲ್ಲವಾದ್ದರಿಂದ ಎಂದರ್ಥ. ಆದ್ದರಿಂದ 'ನ ವಿದ್ಯತೇ ಉಪಲಬ್ಧಿರ್ಯಸ್ಯ ತದನುಪಲಬ್ಧಿಃ' ಎಂಬ ನಿಷ್ಪತ್ತಿಯನ್ನು ಮಾಡಿ ಪ್ರತ್ಯಕ್ಷಕ್ಕೆ ಅಯೋಗ್ಯವಾದ ಎಂದರ್ಥವನ್ನು ಮೊದಲ ಅನುಲಬ್ಧಿ ಶಬ್ದಕ್ಕೆ ತಿಳಿಯಬೇಕು.

## ಬ್ರಹ್ಮಸೂತ್ರ

### 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – एतेन योगः प्रत्युक्तः ॥**

ಯೋಗ ಶಾಸ್ತ್ರದಲ್ಲಿ ಹೇಳಿದ ಫಲಗಳು ಪ್ರತ್ಯಕ್ಷವಾಗಿ ದೊರೆಯುತ್ತಿರುವುದರಿಂದ ಯೋಗ ಶಾಸ್ತ್ರವು ಪ್ರಮಾಣವಲ್ಲವೇ ಎಂದು ಪ್ರಶ್ನಿಸಬಾರದು. ಆದೇ ಯೋಗಶಾಸ್ತ್ರವು ಹೇಳುವಂತೆ ಕೆಲವೊಮ್ಮೆ ಯೋಗವನ್ನು ಅಭ್ಯಾಸ ಮಾಡಿದಾಗ ಯೋಗದ ಉತ್ಕರ್ಷಾವಸ್ಥೆಯಲ್ಲಿಯೂ ಫಲವು ದೊರೆಯುವುದಿಲ್ಲ. ಆದ್ದರಿಂದ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗಿದೆ.

ಅರ್ಥ -- ಏತೇನ = ಫಲ ಅದರ್ಶನವೆಂಬ ಹಿಂದಿನ ಹೇತುವಿನಿಂದಲೇ ಯೋಗಃ = ಯೋಗಶಾಸ್ತ್ರವು, ಪ್ರತ್ಯುಕ್ತಃ = ನಿರಾಕೃತವಾಯಿತು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಪಾತಂಜಲಯೋಗದಲ್ಲಿ ಹೇಳಿದ್ದೂ ಕೂಡ ಸರಿಯಿಲ್ಲ

**ब्रह्मसूत्रभाष्यम् – ।। एतेन योगः प्रत्युक्तः ।।३।।**

**योगफलं प्रत्यक्षोपलभ्यमिति न मन्तव्यम् ।**
**उक्ताभ्यासे तत्काल एव फलादृष्टेः ।।३।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये स्मृत्यधिकरणम् ।। १ ।।**

ಅನುವಾದ - ಯೋಗಶಾಸ್ತ್ರದಲ್ಲಿ ಯಾವ ಫಲವು ಹೇಳಲ್ಪಟ್ಟದೆಯೋ, ಅದು ಪ್ರತ್ಯಕ್ಷವಾಗಿ ಉಪಲಬ್ಧವಾಗುವುದು ಕಂಡಿದೆ. ಆದ್ದರಿಂದ ಯೋಗಶಾಸ್ತ್ರ ಪ್ರಮಾಣವಾಗುತ್ತದಲ್ಲವೇ? ಎಂದು ತಿಳಿಯಬಾರದು. ಏಕೆಂದರೆ ಯೋಗಶಾಸ್ತ್ರದಲ್ಲಿಯೇ ಹೇಳಿದಂತೆ ಯೋಗಾಭ್ಯಾಸ ಮಾಡಿದಾಗ ಆದರ ಉತ್ಕರ್ಷಕಾಲದಲ್ಲಿ ಅದೇ ಶಾಸ್ತ್ರದಲ್ಲಿ ಹೇಳಲ್ಪಟ್ಟ ಫಲವು ಕೆಲವೊಮ್ಮೆ ಉಂಟಾಗುವುದಿಲ್ಲ. ಆದ್ದರಿಂದ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗಿವೆ.

ಪ್ರತಿಪದಾರ್ಥ -- ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಬಹುದು. ಅಂದ ಮಾತ್ರಕ್ಕೆ ಎಲ್ಲಾ ಅವೈಷ್ಣವಶಾಸ್ತ್ರಗಳು ಅಪ್ರಮಾಣ- ವಾಗುತ್ತವೆಂಬುದಕ್ಕೆ ಹಿಂದಿನ ಸೂತ್ರದಲ್ಲಿ ಹೇಳಿದ್ದು ಕಾರಣವಾಗುವುದಿಲ್ಲ. ಏಕೆಂದರೆ ಯೋಗಸ್ಮೃತಿಯಲ್ಲಿ ಹೇಳಿದ ಫಲಗಳು ನಿಯಮೇನ ಉಂಟಾಗುವುದು ಕಾಣಸುತ್ತಿದೆ. ಆದ್ದರಿಂದ ಯೋಗಶಾಸ್ತ್ರವು ಆಪ್ತಪ್ರಣೀತವಾದ್ದರಿಂದ ಪ್ರಮಾಣವೆಂದು ನಿಶ್ಚಯಿಸಬಹುದಲ್ಲವೇ? ಈ ಆಶಂಕೆಗೆ ಮುಂದಿನ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - ಯೋಗಫಲಂ = ಯೋಗಶಾಸ್ತ್ರದಲ್ಲಿ

ಹೇಳಿದ ಫಲವು, ಪ್ರತ್ಯಕ್ಷತಃ = ಪ್ರತ್ಯಕ್ಷಪ್ರಮಾಣದಿಂದ, ಉಪಲಭ್ಯತೇ = ದೊರೆಯುತ್ತಿದೆ. ಇತಿ = ಹೀಗೆ, ನ ಮಂತವ್ಯಮ್ = ತಿಳಿಯಬಾರದು. ಏಕೆಂದರೆ ಉಕ್ತಾಭ್ಯಾಸೇ = ಯೋಗಶಾಸ್ತ್ರದಲ್ಲಿ ಹೇಳಿದಂತೆ ಪರಿಶ್ರಮ ಪಟ್ಟರೂ, ತತ್ಕಾಲ ಏವ = ಅದೇ ಕಾಲದಲ್ಲಿ ನಿರ್ದೇಶಿಸಲ್ಪಟ್ಟ , ಫಲಾದೃಷ್ಟೇಃ = ಸ್ವೇದನ ಮೊದಲಾದ ಫಲಗಳು ಕಾಣಿಸುತ್ತಿಲ್ಲ. ಆದ್ದರಿಂದ ಅವೈಷ್ಣವಸ್ಮೃತಿಗಳೆಲ್ಲವೂ ಅಪ್ರಮಾಣವೆಂದು ನಿರ್ಧಾರವಾಯಿತು.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### 'ವಾಚಾ ವಿರೂಪ ನಿತ್ಯಯಾ' ಎಂಬುದರಿಂದ ವೇದವು ನಿತ್ಯವೆಂದು ಸಿದ್ಧವಾಗಿದೆ

**सत्तर्कदीपावळिः – श्रुतिस्मृतिविहितैहिककर्मणोऽनुष्ठानेऽपि क्वचित् फलाभावदर्शनात् अन्यागमवत् श्रुत्यादेरप्रामाण्यं किं न स्यादिति न वाच्यम्। 'वाचा विरूप नित्यया' इत्यादिप्रमाणसिद्धत्वेन वेदानां नित्यत्वात् निर्दोषत्वेन तत्प्रामाण्यस्य अपरिहार्यत्वात् वेदमूलत्वेन पञ्चरात्रादेरपि प्रामाण्यसिद्धेः । यत् वेदायुक्तस्यैहिककाम्यकर्मणोऽनुष्ठानेऽपि फलादर्शनं तत्कर्तृवैगुण्यात् प्रतिबन्धककर्मवशाद् वा इति मन्तव्यम् ॥१॥**

ಶ್ರುತಿ-ಸ್ಮೃತಿ ಇವುಗಳಲ್ಲಿ ಯಾವ ಕರ್ಮಗಳನ್ನು ವಿಧಾನ ಮಾಡಲಾಗಿದೆಯೋ, ಅವುಗಳನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮೆ ಫಲವು ದೊರಕುತ್ತಿಲ್ಲ. ಆದ್ದರಿಂದ ಪಾಶುಪತ್ಯಾದಗಮಗಳಂತೆ ಶ್ರುತ್ಯಾದಿಗಳಿಗೂ ಕೂಡ ಅಪ್ರಾಮಾಣ್ಯವನ್ನು ಏಕೆ ಹೇಳಬಾರದು?

ಈ ಅಶಂಕೆಯು ಅಸಾಧುವಾಗಿದೆ. ಏಕೆಂದರೆ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಪ್ರಮಾಣಗಳಿಂದ ವೇದವು ನಿತ್ಯವೆಂದು ಸಿದ್ಧವಾಗಿದೆ. ನಿತ್ಯವಾಗಿದ್ದರಿಂದಲೇ ನಿರ್ದುಷ್ಟವಾಗಿದೆ.

ಆದ್ದರಿಂದಲೇ ತತ್ಪ್ರಾಮಾಣ್ಯವನ್ನು ಒಪ್ಪಲೇ ಬೇಕು. ಇಂಥ ಸ್ವತಃಪ್ರಮಾಣವಾದ ಪಂಚರಾತ್ರಾದಿಗಳಿಗೂ ಕೂಡ ವೇದಮೂಲಕವಾದ್ದರಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಕೆಲವೊಮ್ಮೆ ಇಂಥ ನಿತ್ಯವಾದ ವೇದಗಳಲ್ಲಿ ಹೇಳಲ್ಪಟ್ಟ ಐಹಿಕವಾದ ಕಾಮ್ಯಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲ ದೊರಕದೆಯೇ ಇರುವುದು ಕಂಡಿದೆ. ಇದು ಕರ್ತೃವೈಗುಣ್ಯನಿಮಿತ್ತಕವಾಗಿ ಅಥವಾ ಪ್ರತಿಬಂಧಕವಾದ ಕರ್ಮದ ಅಧೀನವಾಗಿ ಫಲ ದೊರಕುತ್ತಿಲ್ಲ ಎಂಬುದಾಗಿ ತಿಳಿಯಬೇಕು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಸ್ಮೃತ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

**तत्वप्रदीपः – एवमपि योगशास्त्रोदितानां प्रस्वेदकम्पादिदृष्टफलानाम् उपलभ्यत्वात् तत् प्रमाणम् इत्यत आह – एतेन योगः प्रत्युक्तः ॥ योगशास्त्रोदितयोगाभ्यासफलं प्रत्यक्षोपलभ्यम् इति न मन्तव्यम् । यथोक्ताभ्यासे कृते यथोक्तकाल एव तत्तत्फलादृष्टेः ।**

**इति स्मृत्यधिकरणम् ॥**

ಇದರಂತೆ ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಬೆವರು ಬರುವಿಕೆ, ಶರೀರದ ಕಂಪನ ಮೊದಲಾದ ದೃಷ್ಟಫಲಗಳು ಕಾಣಿಸಿರುವುದರಿಂದ ಯೋಗಶಾಸ್ತ್ರಕ್ಕೂ ಕೂಡ ಪ್ರಾಮಾಣ್ಯವನ್ನು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಭಾಷ್ಯವು ಹೊರಟಿದೆ. ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಯಾವ ಯೋಗಾರ್ಥದ ಫಲವಿದೆಯೋ,

ಅದು ಪ್ರತ್ಯಕ್ಷತಃ ಉಪಲಬ್ಧವಾಗಿದೆಯೆಂದು ತಿಳಿಯಬಾರದು. ಏಕೆಂದರೆ ಯೋಗಶಾಸ್ತ್ರದಲ್ಲಿ ಹೇಳಿದಂತೆ ಕ್ರಮಪ್ರಕಾರವಾಗಿ ಆಚರಣೆ ಮಾಡಿದರೂ ಕೂಡ, ಆ ಶಾಸ್ತ್ರವು ಹೇಳುವ ಕಾಲದಲ್ಲಿಯೇ ಫಲವು ದೊರಕುವುದು ಕಾಣಿಸುತ್ತಿಲ್ಲ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಸ್ಮೃತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಯೋಗಸ್ಮೃತಿಗಳಲ್ಲಿ ಹೇಳಿದ್ದು ನಿಯಮೇನ ದೊರಕುತ್ತಿಲ್ಲ

**तत्वप्रकाशिका – न तथापि सर्वासामवैष्णवस्मृतीनामप्रामाण्यं योगस्मृत्युक्तफलादीनामव्यभिचारेणोपलम्भादाप्तप्रणीतत्वनिश्चयोपपत्तेरित्याशङ्कां परिहरत्सूत्रमुपन्यस्य व्याचष्टे – एतेनेति ।।**

ಆದರೂ ಕೂಡ ಎಲ್ಲಾ ಅವೈಷ್ಣವ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಯೋಗಸ್ಮೃತಿಗಳಲ್ಲಿ ಹೇಳಲ್ಪಟ್ಟ ವಾಕ್ಯಗಳಿಂದ ನಿಯಮೇನ ಫಲ ದೊರಕುವುದು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಅದನ್ನು ಬರೆದ ಪತಂಜಲಿ ಮೊದಲಾದ ಋಷಿಗಳು ಆಪ್ತರೆಂದು ನಿರ್ಣಯ ಮಾಡಬಹುದಲ್ಲವೇ? ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ಏತೇನ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಯಾವುದೇ ಅವೈದಿಕ ಸ್ಮೃತಿಗಳು ಆಪ್ತೋಕ್ತವಲ್ಲ

**तत्वप्रकाशिका – योगस्मृत्युक्तफलादीनामव्यभिचारेणोपलम्भादाप्तोक्तत्व-निश्चयोपपत्तेरप्रामाण्यायोग इति न मन्तव्यम् । तदुक्तफलानां स्वेदनगात्रभन्जनादीनां प्रत्यक्षोपलब्धावपि प्रथमं स्वेदनं द्वितीयं गात्रभन्जनमित्या-द्युक्ताभ्यासावस्थोत्कर्षसम्पत्तिकाल एव स्वेदनादीनामदृष्टेरा**

प्तोक्तत्वानिश्चयादिति भावः । अतोऽवैदिकस्मृतीनामप्रमाणत्वान्न श्रुत्युक्तस्य विष्णोर्जगत्कारणत्वस्य तद्विरोध इति सिद्धम् ।। ३ ।।

।। इति श्रीमज्जयतीर्थभिक्षुविरचितायां तत्वप्रकाशिकायाम् स्मृत्यधिकरणम् ।।

ಯೋಗಸ್ಮೃತಿಯಲ್ಲಿ ಹೇಳಲ್ಪಟ್ಟ ಫಲವು ನಿಯಮೇನ ದೊರಕುತ್ತಿದೆ. ಆದ್ದರಿಂದ ಅದನ್ನು ರಚನೆ ಮಾಡಿದ ಪತಂಜಲಿ ಮೊದಲಾದವರು ಆಪ್ತರೇ ಆಗಿದ್ದಾರೆಂದು ನಿಶ್ಚಯ ಮಾಡಬಹುದು. ತದುಕ್ತವಾದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬ ವಿಷಯವು ಅಯುಕ್ತವಾಗಿದೆ. ಏಕೆಂದರೆ ಅಲ್ಲಿಯೂ ಕೂಡ ಫಲನುಪಲಬ್ಧಿಯು ಇದ್ದೇ ಇದೆ. ದೇಹ ಬೆವರುವುದು, ಶರೀರ ಕುಗ್ಗುವುದು ಇವೇ ಮೊದಲಾದ ಯೋಗಶಾಸ್ತ್ರದಲ್ಲಿ ಹೇಳಿದ ಫಲಗಳು ಪ್ರತ್ಯಕ್ಷತಃ ಸಿದ್ಧವಾಗಿವೆ. ಆದರೂ ಕೂಡ ಮೊದಲು ಬೆವರುವುದು, ಅನಂತರ ದೇಹ ಕುಗ್ಗುವುದು ಇತ್ಯಾದಿಯಾಗಿ ಯೋಗಾಭ್ಯಾಸದ ಉತ್ಕರ್ಷಾವಸ್ಥೆಯನ್ನು ಹೊಂದಿದಾಗಲೇ ಕೆಲವೊಮ್ಮೆ ದೇಹ ಬೆವರುವುದಿಲ್ಲ. ಆದ್ದರಿಂದ ಇವರ ಮಾತು ಸುಳ್ಳಾಯಿತಲ್ಲವೇ? ಹೀಗಿರುವಾಗ ಪತಂಜಲಿ ಮೊದಲಾದವರನ್ನು ಆಪ್ತರೆಂದು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಅವೈದಿಕವಾದ ಎಲ್ಲಾ ಸ್ಮೃತಿಗ್ರಂಥಗಳು ಅನಾಪ್ತೋಕ್ತವಾಗಿವೆ ಎಂಬುದು ಸೂತ್ರಕಾರರ ಅಭಿಪ್ರಾಯ.

ಆದ್ದರಿಂದ ಅವೈದಿಕ ಸ್ಮೃತಿಗಳು ಅಪ್ರಮಾಣವಾಗಿವೆ ಎಂದು ಸಿದ್ಧವಾಯಿತು. ಶ್ರುತಿಯಿಂದ ಪ್ರತಿಪಾದ್ಯವಾದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಯಾವುದೇ ವಿರೋಧವಿಲ್ಲ ಎಂಬ ಪ್ರಮೇಯವು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಸ್ಮೃತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ಭಾವದೀಪ

### ಈ ಸೂತ್ರ ಬೇರೆ ಅಧಿಕರಣಕ್ಕೆ ಸೇರಿದ್ದಲ್ಲ

**भावदीपः – ।। एतेन योगः प्रत्युक्तः ।।** परीत्याधिकरणान्तरत्वशङ्काव्युदासाय पूर्वसूत्रोक्तस्योपर्यभ्यधिकाशङ्का मेतेनेत्यतिदेशोपयुक्तामाह **– न तथापीति ।। अत** इति ।। प्रबलश्रुतिविरोधात् फलादृष्ट्या आप्तोक्तत्वानिश्चयाच्चेत्यर्थः। फलं त्वाद्यसूत्रार्थोपसंहार एवोक्तमिति भावः ।।

**।। इति राघवेन्द्रयतिकृते भावदीपे स्मृत्यधिकरणम् ।।**

ಪರಮತದ ಪ್ರಕಾರ ಈ ಸೂತ್ರವು ಬೇರೆ ಅಧಿಕರಣವಾಗಿದೆಯಲ್ಲವೇ? ಎಂಬ ಆಶಂಕೆಯ ಪರಿಹಾರಕ್ಕೋಸ್ಕರ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ವಿಷಯದ ಮೇಲೆ ಅಭ್ಯಧಿಕಾಶಂಕೆಯನ್ನು 'ಏತೇನ' ಎಂಬುದರಿಂದ ಅತಿದೇಶ ಮಾಡಲು ಉಪಯುಕ್ತವಾದದ್ದನ್ನು 'ನ ತಥಾಪಿ' ಎಂಬುದರಿಂದ ನಿರೂಪಣೆ ಮಾಡಿದ್ದಾರೆ. 'ನ ತಥಾ' ಎಂಬ ಪದಕ್ಕೆ ಪ್ರಬಲಶ್ರುತಿವಿರೋಧವಿರುವುದರಿಂದ ಫಲವು ಕಾಣಿಸದ ಕಾರಣ ಆಪ್ತೋಕ್ತತ್ವವು ನಿಶ್ಚಯವಾಗಿಲ್ಲ ಎಂದರ್ಥ. ಅಧಿಕರಣದ ಫಲವನ್ನು ಪ್ರಥಮಸೂತ್ರಾರ್ಥದ ಉಪಸಂಹಾರದಲ್ಲಿಯೇ ಹೇಳಿದ್ದಾಗಿದೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಸ್ಮೃತ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## स्मृत्यधिकरणम् (२।१।१)

ದ್ವಿತೀಯಾಧ್ಯಾಯ ಏಕೆ ಹೊರಟಿದೆ ?

पूर्वेणोक्तसमन्वयेऽनेनाध्यायेन विरोधो निरस्यते । युक्ति-समय-श्रुति-युक्त्युपेतश्रुतिविरोधाः पादेषु क्रमेण निरस्यन्ते । आद्यपादे प्रबलत्वाद्युक्तिविरोधः, स्मृतिविरोधश्चतूरूपत्वादाद्यनये निरस्यते ।।

ಹಿಂದಿನ ಅಧ್ಯಾಯದಲ್ಲಿ ಮಹಾವಿಷ್ಣುವಿನಲ್ಲಿ ಸಕಲಶಬ್ದಗಳ ಸಮನ್ವಯವನ್ನು ಸಾಧಿಸಿದ್ದಾಯಿತು. ಈ ವಿಷಯದಲ್ಲಿ ಯಾವ ವಿರೋಧವು ಪ್ರಾಪ್ತವಾಗುತ್ತದೋ, ಅದರ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯವು ಹೊರಟಿದೆ. ಆ ವಿರೋಧವು ಒಟ್ಟು ನಾಕುವಿಧ - ೧. ಯುಕ್ತಿವಿರೋಧ, ೨. ಸಮಯವಿರೋಧ, ೩. ಶ್ರುತಿವಿರೋಧ, ೪. ಯುಕ್ತಿಸಹಿತವಾದ ಶ್ರುತಿವಿರೋಧ ಎಂದು. ಕ್ರಮವಾಗಿ ನಾಕು ಪಾದಗಳಲ್ಲಿ ಈ ನಾಕುಬಗೆಯ ವಿರೋಧಗಳನ್ನು ಪರಿಹರಿಸುವವರಿದ್ದಾರೆ. ಪ್ರಥಮಪಾದವು ಯುಕ್ತಿವಿರೋಧವನ್ನು ಪರಿಹರಿಸುತ್ತಿದೆ. ಏಕೆಂದರೆ ಮೇಲಿನ ನಾಕುಬಗೆಯ ವಿರೋಧಗಳಲ್ಲಿ ಯುಕ್ತಿವಿರೋಧವೇ ಪ್ರಬಲವಾಗಿದೆ. ಅದರಲ್ಲೂ ಸ್ಮೃತಿವಿರೋಧ ಪರಿಹಾರಕ್ಕಾಗಿ ಮೊದಲನೆಯ ಅಧಿಕರಣ ಹೊರಟಿದೆ. ಏಕೆಂದರೆ ಸ್ಮೃತಿವಿರೋಧವು ಮೇಲಿನ ನಾಕುಬಗೆಯ ವಿರೋಧರೂಪವನ್ನು ತಾಳಿದೆ.

### ಸ್ಮೃತ್ಯಧಿಕರಣ ಏಕೆ ಹೊರಟಿದೆ ?

**स्मृत्यनवकाशदोषप्रसङ्ग इति चेन्नान्यस्मृत्यवकाशदोषप्रसङ्गात् ।। २-१-१ ।।**

अत्र स्मार्तस्तावत् वेदप्रामाण्यवादिनस्तदवादिन इति द्वेधा । आद्येऽपि तदपौरुषेयत्ववादिनस्तदवादिन इति द्वेधा । तत्सर्वस्मृत्यविरोधोऽत्रोच्यते।

ಸ್ಮೃತಿಯನ್ನು ಪ್ರಮಾಣವೆಂದು ಒಪ್ಪುವವರು ಎರಡುವಿಧ - ೧. ವೇದಪ್ರಾಮಾಣ್ಯವಾದಿಗಳು, ೨. ವೇದಪ್ರಾಮಾಣ್ಯವನ್ನು ಒಪ್ಪದವರು ಎಂದು. ಇವರಿಬ್ಬರಲ್ಲಿ ವೇದಪ್ರಾಮಾಣ್ಯವಾದಿಗಳು ಪುನಃ ಎರಡು ವಿಧ - ೧. ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪುವವರು. ೨. ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪದವರು. ಈ ಎಲ್ಲಾ ಬಗೆಯ ಸ್ಮಾರ್ತರು ಯಾವ ವಿರೋಧವನ್ನು ಆಕ್ಷೇಪ ಮಾಡುವರೋ, ಅದರ ಪರಿಹಾರಕ್ಕಾಗಿ ಈ ಮೊದಲನೇ ಅಧಿಕರಣವು ಪ್ರವೃತ್ತವಾಗಿವೆ.

### ಸೂತ್ರದ ಪೂರ್ವಪಕ್ಷ ಭಾಗಕ್ಕೆ ಅರ್ಥ

स्मृतीनां शैवसाङ्ख्यकाणादादिस्मृतीनां अन्यपरत्वाभावरूपानवकाशेन विष्णुकर्तृत्वादिबोधकश्रुतेरप्रामाण्यदोषप्रसङ्ग इति तदनुरोधेन श्रुतिर्नेयेति चेन्न ।

ಸೂತ್ರದ 'ಸ್ಮೃತ್ಯನವಕಾಶದೋಷಪ್ರಸಂಗಃ ಇತಿ ಚೇತ್' ಎಂಬ ಪೂರ್ವಪಕ್ಷ ಭಾಗದ ಅರ್ಥ ಹೀಗಿದೆ - ಸ್ಮೃತೀನಾಂ = ಶೈವ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳಿಗೆ, ಅನವಕಾಶ = ಶಿವ, ಪ್ರಕೃತಿ ಮೊದಲಾದ ವಿಷಯಗಳನ್ನು ಬಿಟ್ಟು, ಬೇರೆ ವಿಷಯದಲ್ಲಿ ತಾತ್ಪರ್ಯ ಇಲ್ಲದಿರುವುದರಿಂದ ನಿರವಕಾಶಗಳಾಗಿವೆ. ಆದ್ದರಿಂದ ವಿಷ್ಣುವಿಗೆ ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗೆ ದೋಷಪ್ರಸಂಗಃ = ಅಪ್ರಾಮಾಣ್ಯ ಎಂಬ ದೋಷಪ್ರಸಂಗವಿದೆ. ಆದ್ದರಿಂದ ಶೈವಾದಿಸ್ಮೃತಿಗಳಿಗೆ ಅನುಗುಣವಾಗಿಯೇ ಶ್ರುತಿಗೆ ರುದ್ರಾದಿಜಗತ್ಕಾರಣತ್ವಪರವಾಗಿ ವ್ಯಾಖ್ಯಾನವನ್ನು ಮಾಡಬೇಕು.

ಇತಿ ಚೇನ್ನ = ಈ ಪೂರ್ವಪಕ್ಷವು ತಪ್ಪು.

### ಸೂತ್ರದ ಸಿದ್ಧಾಂತ ಭಾಗಕ್ಕೆ ಅರ್ಥ

**अन्यासां पञ्चरात्रस्मृतीनां विष्णुकर्तृत्वादर्थान्तरपरत्वाभावरूपानवकाशेन तद्विरुद्धत्वादितरस्मृतीनामेवाप्रामाण्यदोषप्रसङ्गात् । एवञ्च शैवादिस्मृतिषु श्रौतस्मृतिभिः प्रतिरुद्धास्वप्रतिबद्धश्रुतिभिरेव विष्णुकर्तृत्वादिसिद्धिरिति भावः ।**

'ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದ ಭಾಗಕ್ಕೆ ಹೀಗರ್ಥ - ಅನ್ಯಸ್ಮೃತಿ = ಪಾಶುಪತಾದಿಸ್ಮೃತಿಗಳಿಗಿಂತ ಬೇರೆಯಾದ ಪಂಚರಾತ್ರಾದಿಸ್ಮೃತಿಗಳಿಗೆ, ಅನವಕಾಶ = ವಿಷ್ಣುಕರ್ತೃತ್ವವನ್ನು ಬಿಟ್ಟು ಬೇರೆ ವಿಷಯದಲ್ಲಿ ತಾತ್ಪರ್ಯವನ್ನು ಹೊಂದದ ಕಾರಣ ನಿರವಕಾಶವಾಗಿವೆ. ಇಂಥ ನಿರವಕಾಶವಾದ ಪಂಚರಾತ್ರಸ್ಮೃತಿಗಳಿಗೆ ವಿರುದ್ಧವಾದ ಪಾಶುಪತಾದಿಸ್ಮೃತಿಗಳಿಗೆ, ದೋಷಪ್ರಸಂಗಾತ್ = ಅಪ್ರಾಮಾಣ್ಯ ಎಂಬ ದೋಷಪ್ರಸಂಗವಿದೆ.

ಯಾವಾಗ ಶ್ರುತಿಗೆ ಅನುಗುಣವಾದ ಸ್ಮೃತಿಗಳಿಂದ ಪಾಶುಪತಾದಿಸ್ಮೃತಿಗಳು ವಿರುದ್ಧವಾದ್ದರಿಂದ ಬಾಧಿತವಾಗಿವೆಯೋ, ಆ ಕಾರಣದಿಂದಲೇ ವಿಷ್ಣುವಿಗೆ ಜಗತ್‌ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆ ಯಾವುದೇ ಸ್ಮೃತಿಗಳ ವಿರೋಧವಿಲ್ಲವೆಂದು ಸಿದ್ಧವಾಯಿತು. ಹೀಗೆ ಅಪ್ರತಿಬದ್ಧವಾದ ಶ್ರುತಿಗಳಿಂದ ವಿಷ್ಣುಕರ್ತೃತ್ವವು ಸಿದ್ಧವಾಗುತ್ತದೆ. ಇಷ್ಟು ಸೂತ್ರಾರ್ಥ.

### ಸೂತ್ರದ ಸಿದ್ಧಾಂತ ಭಾಗಕ್ಕೆ ಮತ್ತೊಂದು ವ್ಯಾಖ್ಯಾನ

**यद्वा अन्यासां श्रौतस्मृतीनां श्रुतिसंवादेन बलवत्त्वादनवकाशेन शैवादि स्मृतीनामप्रामाण्याख्यदोषस्य प्रकर्षेण सङ्गात् सम्बन्धादत्यन्ताप्रामण्यादित्यर्थः । तत्त्वित्यत्रोपक्रमाद्यैरेव वेदार्थो निर्णेय इति सिद्धावपीहोपक्रमादयोऽपि स्मृत्यनुरोधेन नेया इति शङ्केति ध्येयम् ।**

'ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸಿದ್ಧಾಂತಭಾಗಕ್ಕೆ ಎರಡನೆಯ ವ್ಯಾಖ್ಯಾನ ಹೀಗಿದೆ - ಅನ್ಯಸ್ಮೃತಿ = ಶ್ರುತ್ಯನುಸಾರಿಯಾದ ಪಂಚರಾತ್ರಾದಿಸ್ಮೃತಿಗಳಿಗೆ ಶ್ರುತಿಸಂವಾದವಿರುವುದರಿಂದ ಪ್ರಾಬಲ್ಯವಿದೆ. ಆದ್ದರಿಂದಲೇ ನಿರವಕಾಶಗಳಾಗಿವೆ. ದೋಷಪ್ರಸಂಗಾತ್ =

ಶ್ರುತಿಯ ಬೆಂಬಲವಿಲ್ಲದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯವೆಂಬ ದೋಷಪ್ರಸಂಗವಿದೆ ಹೆಚ್ಚಿನ ದೋಷದ ಸಂಪರ್ಕವಿದೆ. ಹಾಗಾಗಿ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ ಎಂದರ್ಥ.

ವಾಸ್ತವಿಕವಾಗಿ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಉಪಕ್ರಮೋಪಸಂಹಾರಾದಿ ಷಡ್ವಿಧ ತಾತ್ಪರ್ಯದಿಂದ ವೇದಾರ್ಥವನ್ನು ನಿರ್ಣಯ ಮಾಡಬೇಕೆಂದು ಸಾಧಿಸಿದ್ದಾಗಿದೆ. ಆದರೆ ಪ್ರಕೃತ ಪೂರ್ವಪಕ್ಷಿಯು ಅಂಥ ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗಗಳನ್ನೂ ಕೂಡ ಸ್ಮೃತಿಗೆ ಅನುಗುಣವಾಗಿಯೇ ವ್ಯಾಖ್ಯಾನ ಮಾಡಬೇಕೆಂದು ಆಕ್ಷೇಪ ಮಾಡುತ್ತಿದ್ದಾನೆ. ಹೀಗೆ ಪೂರ್ವಪಕ್ಷವು ಬಲಿಷ್ಠವಾಗಿರುವುದರಿಂದ ಈ ಅಧಿಕರಣವು ಆರಂಭಣೀಯವಾಗಿದೆ.

### ಸಂಪೂರ್ಣ ಸೂತ್ರಕ್ಕೆ ಬೇರೆ ವ್ಯಾಖ್ಯಾನ

**वृत्त्यन्तरं तु बौद्धार्हतादिस्मृतीनामन्यपरत्वाभावरूपानवकाशेन तासामेवाप्तोक्तानामप्रामाणदोषप्रसङ्ग इति तद्विरुद्धश्रुतिर्न मानमिति चेन्न । अन्यस्मृतीनां श्रौतस्मृतीनामनवकाशेन श्रौतस्मृतीनामेवाप्रामाण्यदोष प्रसङ्गादिति । तात्पर्यं तु पूर्ववत् ।**

ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ ಹೀಗಿದೆ - ಸ್ಮೃತಿ = ಬೌದ್ಧ, ಜೈನ ಮೊದಲಾದ ಸ್ಮೃತಿಗಳು, ಅನವಕಾಶ = ನಿರವಕಾಶವಾಗಿವೆ, ಬೇರೆಡೆ ತಾತ್ಪರ್ಯವನ್ನು ಪಡೆದಿಲ್ಲ. ದೋಷಪ್ರಸಂಗಾತ್ = ಆಪ್ತೋಕ್ತವಾಗಿರುವುದರಿಂದ ಅಪ್ರಾಮಾಣ್ಯವೆಂಬ ದೋಷಪ್ರಸಂಗಕ್ಕೆ ಅವಕಾಶವಿಲ್ಲ. ಹಾಗಾಗಿ ಇವುಗಳಿಗೆ ವಿರುದ್ಧವಾಗಿ ಹೇಳುವ ಶ್ರುತಿಗಳು ಪ್ರಮಾಣವಲ್ಲ.

ಇತಿ ಚೇನ್ನ = ಈ ವ್ಯಾಖ್ಯಾನವು ತಪ್ಪು. ಅನ್ಯಸ್ಮೃತಿ = ಬೌದ್ಧಾದಿ ಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರಾದಿಸ್ಮೃತಿಗಳು ಶ್ರುತಿಗೆ ಅನುಸಾರಿಯಾಗಿವೆ. ಆದ್ದರಿಂದ ಇವುಗಳು ನಿರವಕಾಶವಾಗಿದೆ. ದೋಷಪ್ರಸಂಗಾತ್ = ಇಂಥ ಶ್ರುತ್ಯನುಸಾರಿಯಾದ ಸ್ಮೃತಿಗಳಿಗೇನೇ ಅಪ್ರಾಮಾಣ್ಯವೆಂಬ ದೋಷಪ್ರಸಂಗವಿರುವುದರಿಂದ ಬೌದ್ಧಾದಿ ಸ್ಮೃತಿಗಳು ಪ್ರಮಾಣವಲ್ಲ ಸೂತ್ರದ ತಾತ್ಪರ್ಯವನ್ನು ಮೊದಲನೆಯ ವ್ಯಾಖ್ಯಾನದಂತೆ ತಿಳಿಯಬೇಕು.

ವಿವರಣೆ - ಪ್ರಥಮ ವ್ಯಾಖ್ಯಾನದಲ್ಲಿ ಪಾಶುಪತಾದಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಪಂಚರಾತ್ರಾದಿಸ್ಮೃತಿಗಳಿಗೆ ಅಪ್ರಾಮಾಣ್ಯವೆಂಬ ದೋಷಪ್ರಸಂಗವನ್ನು ಪೂರ್ವಪಕ್ಷದಲ್ಲಿ

ಹೇಳಲಾಗಿತ್ತು. ಸಿದ್ಧಾಂತದಲ್ಲಿ ಪಂಚರಾತ್ರಾದಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಪಾಶುಪತಾದಿ-ಸ್ಮೃತಿಗಳಿಗೆ ಅಪ್ರಾಮಾಣ್ಯವೆಂಬ ದೋಷಪ್ರಸಂಗವನ್ನು ಹೇಳಲಾಯಿತು. ಆದರೆ ಎರಡನೆಯ ಈ ವ್ಯಾಖ್ಯಾನದಲ್ಲಿ ಬೌದ್ಧಾದಿ ಸ್ಮೃತಿಗಳು ನಿರವಕಾಶವಾಗಿವೆ. ಒಂದುವೇಳೆ ಪಂಚರಾತ್ರಾದಿಸ್ಮೃತಿಗಳು ಹೇಳಿದ್ದು ಸತ್ಯವಾದರೆ, ನಿರವಕಾಶವಾದ ಬೌದ್ಧಾದಿಸ್ಮೃತಿಗಳಿಗೆ ಅಪ್ರಾಮಾಣ್ಯವೆಂಬ ದೋಷಪ್ರಸಂಗದ ಭಯವಿದೆ. ಹಾಗಾಗಿ ಪಂಚರಾತ್ರಾದಿಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂಬುದು ಪೂರ್ವಪಕ್ಷ. ಶ್ರುತ್ಯನುಸಾರಿಯಾದ್ದರಿಂದ ಪಂಚರಾತ್ರಾದಿಸ್ಮೃತಿಗಳೇ ಬಲಿಷ್ಠವಾಗಿವೆ. ಇವುಗಳಿಗೆ ಅಪ್ರಾಮಾಣ್ಯವನ್ನು ಹೇಳಲೇಬಾರದು. ಇವು ಬೌದ್ಧಾದಿ ಸ್ಮೃತಿಗಳನ್ನು ಪ್ರಮಾಣವೆಂದರೆ ಪ್ರಬಲವಾದ ಪಂಚರಾತ್ರಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವ ಪ್ರಸಂಗ ಬರುತ್ತದೆ. ಹಾಗಾಗಿ ಬೌದ್ಧಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಒಪ್ಪಬೇಕು ಎಂದು ವ್ಯಾಖ್ಯಾನಿಸಿದ್ದಾರೆ. ಎರಡೂ ವ್ಯಾಖ್ಯಾನದ ತಾತ್ಪರ್ಯ ಒಂದೇ ಆಗಿದ್ದರೂ ಪದಗಳಿಂದ ವಿವಕ್ಷಿಸಲ್ಪಟ್ಟ ಅರ್ಥಗಳು ಮಾತ್ರ ವಿಭಿನ್ನವಾಗಿವೆ.

### ಆಪ್ತೋಕ್ತವಾದದ್ದಕ್ಕೆ ಅಪ್ರಾಮಾಣ್ಯ ಹೇಗೆ ?

**श्रौतस्मृतिविरोधेऽप्याप्तोक्तानामवैदिकस्मृतीनां कथमप्रामाण्यमित्यत आह-**

**इतरेषां चानुपलब्धेः ।।२-१-२।।**

ಶ್ರುತಿಯ ಬೆಂಬಲವಿರುವ ಪಂಚರಾತ್ರಾದಿಸ್ಮೃತಿಗಳ ವಿರೋಧ ಇರಬಹುದು. ಆದರೆ ಪಾಶುಪತಾದಿಸ್ಮೃತಿಗಳು ಆಪ್ತೋಕ್ತವಾಗಿವೆ. ಹೀಗಿರುವಾಗ ಅಪ್ರಾಮಾಣ್ಯವನ್ನು ಹೇಗೆ ತಾನೇ ಹೇಳುವಿರಿ ? ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ಇತರೇಷಾಂ ಚಾನುಪಲಬ್ಧೇಃ' ಎಂಬ ಮುಂದಿನ ಸೂತ್ರ ಹೊರಟಿದೆ.

### 'ಅನುಪಲಬ್ಧೇಃ' ಎಂಬ ಶಬ್ದದ ಬಗ್ಗೆ

**नास्त्युपलब्धिर्यस्य तदनुपलब्धिः उपलब्धयोग्यं फलं तस्मादितरेषां उपलब्धियोग्यानां फलानां, तृतीयादिष्विति पुंवद्भावः, अनुपलब्धेरनुपलम्भादित्या-वृत्त्या योज्यम् ।**

ಸೂತ್ರದಲ್ಲಿ 'ಅನುಪಲಬ್ಧೇಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಆಗ 'ಉಪಲಬ್ಧೇಃ ಇತರೇಷಾಂ ಚಾನುಪಲಬ್ಧೇಃ' ಎಂದಾಗುತ್ತದೆ. ಸೂತ್ರಾರ್ಥವನ್ನು ಹೀಗೆ ತಿಳಿಯಬೇಕು -

'ಅನುಪಲಬ್ಧೇಃ' = ಹೊಂದಲು ಯೋಗ್ಯವಲ್ಲದ ಯಾವ ಫಲವಿದೆಯೋ, 'ಇತರೇಷಾಂ' = ಅದಕ್ಕಿಂತ ಭಿನ್ನವಾದ, 'ಅನುಪಲಬ್ಧೇಃ' = ಹೊಂದಲು ಯೋಗ್ಯವಾದ ಫಲಗಳನ್ನು (ಪಡೆಯುತ್ತಿಲ್ಲವಾದ್ದರಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಿವೆ)

'ಅನುಪಲಬ್ಧೇಃ' ಎಂಬುದು ಪುಲ್ಲಿಂಗ ಶಬ್ದದ ಪಂಚಮೀವಿಭಕ್ತಿಯಾಗಿದೆ. 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಎಂಬ ಸೂತ್ರದ ಪ್ರಕಾರ ಅನುಪಲಬ್ಧಿ ಶಬ್ದಕ್ಕೆ ಪುಂವದ್ಭಾವವು ಬಂದಿದೆ. ಆದ್ದರಿಂದ 'ಅನುಪಲಬ್ಧಿನಃ' ಎಂದೇಕೆ ಪ್ರಯೋಗಿಸಿಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. 'ಅನುಪಲಬ್ಧೇಃ' ಎಂಬ ಪದಕ್ಕೆ 'ಅನುಪಲಂಬಾತ್' ಎಂಬರ್ಥವನ್ನು ತಿಳಿಯಬೇಕು.

ಸೂತ್ರಕ್ಕೆ ಎರಡನೆಯ ವ್ಯಾಖ್ಯಾನ

**यद्वा पूर्वसूत्रे यस्मिन् प्रत्यक्षायोग्ये विश्वकर्तृत्वादौ स्मृतिविरोधः शङ्कितः तदितरेषां प्रत्यक्षयोग्यानां फलानामनुलब्धेरित्यर्थः । प्रत्यक्षफल-विसंवादादाप्तोक्तत्वमेव नेत्यवैदिकस्मृतीनामप्रामाण्यमिति भावः । चशब्दः किञ्चित् फलोपलब्ध्यङ्गीकारार्थः ।।**

ಅಥವಾ ಸೂತ್ರಕ್ಕೆ ಎರಡನೆಯ ವ್ಯಾಖ್ಯಾನ ಹೀಗಿದೆ - ಹಿಂದಿನ ಸೂತ್ರದಲ್ಲಿ ವಿಶ್ವಕರ್ತೃತ್ವವಿಷಯದಲ್ಲಿ ಸ್ಮೃತಿವಿರೋಧವನ್ನು ಆಶಂಕಿಸಿ ಉತ್ತರಿಸಲಾಯಿತು. ಈ ವಿಶ್ವಕರ್ತೃತ್ವವು ಪ್ರತ್ಯಕ್ಷ ಅಯೋಗ್ಯವಾಗಿದೆ. ಇತರೇಷಾಂ = ಹಿಂದಿನ ಸೂತ್ರದಲ್ಲಿ ಹೇಳಿದ ವಿಶ್ವತಕರ್ತೃತ್ವದಿಂದ ಪ್ರತ್ಯಕ್ಷ ಯೋಗ್ಯವಾದ ಫಲಗಳು, ಅನುಪಲಬ್ಧೇಃ = ಕಾಣಿಸುತ್ತಿಲ್ಲ. ಆದ್ದರಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣವಾಗಿವೆ ಎಂದರ್ಥ.

ವಾಸ್ತವಿಕವಾಗಿ ಅವೈದಿಕಸ್ಮೃತಿಗಳೆಲ್ಲವೂ ಪ್ರತ್ಯಕ್ಷಫಲ ವಿಸಂವಾದಿಗಳಾಗಿವೆ. ಆ ಕಾರಣಗಳಿಂದ ಆಪ್ತೋಕ್ತವೇ ಅಲ್ಲ. ಹಾಗಾಗಿ ಅಪ್ರಮಾಣ್ಯವನ್ನೇ ಹೇಳಬೇಕು.

ಅವೈದಿಕ ಸ್ಮೃತಿಗಳಲ್ಲಿಯೂ ಕೆಲವೊಂದು ವಾಕ್ಯಗಳು ಹೇಳಿದ್ದನ್ನು ಆಚರಣೆ ಮಾಡಿದರೆ ಫಲವುಂಟಾಗುತ್ತದೆ. ಇದನ್ನು ನಾವು ಅಂಗೀಕರಿಸುತ್ತೇವೆ ಎಂಬುದನ್ನು ಸೂತ್ರದಲ್ಲಿರುವ 'ಚ'ಶಬ್ದವು ಸೂಚಿಸುತ್ತಿದೆ.

ಗಮನಿಸಿ - 'ಚ'ಶಬ್ದವು ಕೆಲವು ಫಲಗಳು ಉಂಟಾಗುವುದು ಅಂಗೀಕೃತವಾಗಿದೆ ಎಂಬುದನ್ನು ಸೂಚಿಸುತ್ತಿದೆ. ಆದರೆ ಇದು ಪ್ರಾಮಾಣ್ಯಕ್ಕೆ ಉಪಯುಕ್ತವಲ್ಲ. ಸಮಗ್ರ ಸ್ಮೃತಿವಾಕ್ಯದಲ್ಲಿ ಹೇಳಿದ ಫಲಕ್ಕೆ ಎಲ್ಲಿಯೂ ಕೂಡ ವ್ಯಭಿಚಾರ ಕಾಣಬಾರದು. ಆಗ ಮಾತ್ರ ಅದು ಪ್ರಮಾಣವಾಗುತ್ತದೆ. ಎಷ್ಟೋ ವಾಕ್ಯಗಳಲ್ಲಿ ಹೇಳಿದ ಅನುಷ್ಠಾನವನ್ನು ಮಾಡಿದರೆ ಫಲ ದೊರಕುತ್ತಲೇ ಇಲ್ಲ. ಆದ್ದರಿಂದ ಅಪ್ರಾಮಾಣ್ಯಬರುತ್ತದೆಂಬುದು ಸೂತ್ರಕಾರರ ಅಭಿಪ್ರಾಯ.

**ಅವೈದಿಕ ಸ್ಮೃತಿಯಾದರೂ ಕೂಡ ಯೋಗಸ್ಮೃತಿಯಲ್ಲಿ ವ್ಯಭಿಚಾರ ಇಲ್ಲ ಅಲ್ಲವೇ?**

**नन्ववैदिकस्मृतीनां मध्ये योगस्मृत्युक्तफले विसंवादाभावान्नाप्रामाण्यमित्यधिकाशङ्कायामाह -**

**।। एतेन योगः प्रत्युक्तः ।।२-१-३।।**

ಅವೈದಿಕವಾದ ಸ್ಮೃತಿಗಳ ನಡುವೆ ಯಾವ ಯೋಗಸ್ಮೃತಿ ಇದೆಯೋ, ಅದರಲ್ಲಿ ಹೇಳಿದ ಫಲಗಳಿಗೆ ವ್ಯಭಿಚಾರ ಎಲ್ಲಿಯೂ ಕಾಣಿಸುತ್ತಿಲ್ಲ. ಆದ್ದರಿಂದ ಯೋಗಸ್ಮೃತಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುವುದಿಲ್ಲ. ಈ ಅಭ್ಯಧಿಕಾಶಂಕೆಗೆ ಉತ್ತರಿಸಲು 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವು ಹೊರಟಿದೆ.

ಸೂತ್ರಾರ್ಥ

**एतेन प्रागुक्तफलानुपलम्भेन योगशास्त्रमपि प्रत्युक्तं निरस्तमित्यर्थः । प्रथमं स्वेदनं द्वितीयं गात्रभञ्जनमित्याद्युक्ताभ्यासावस्थोत्कर्षकाल एव स्वेदनादीनामदृष्टेरित्यर्थः ।।१।।**

ಸೂತ್ರದ ಅರ್ಥ - ಏತೇನ = ಹಿಂದೆ ಹೇಳಿದ ಫಲ ಅನುಪಲಂಭ ಎಂಬ ಹೇತುವಿನಿಂದ ಯೋಗಃ = ಪಾತಂಜಲ ಯೋಗಶಾಸ್ತ್ರವೂ ಕೂಡ, ಪ್ರತ್ಯುಕ್ತಃ = ನಿರಾಕೃತವಾಯಿತು. ಅದು ಹೀಗೆ - ಆ ಯೋಗಶಾಸ್ತ್ರದಲ್ಲಿ ಕೆಲವು ಯೋಗಾಭ್ಯಾಸವನ್ನು ಮಾಡಿದಾಗ ಮೊದಲು ಬೆವರುತ್ತದೆ. ಅನಂತರ ಶರೀರವು ಬಾಗುತ್ತದೆ ಇತ್ಯಾದಿ ಫಲವನ್ನು ಹೇಳಿದ್ದಾರೆ. ಆದರೆ ಅಂಥ ಯೋಗಾಭ್ಯಾಸವನ್ನು ಮಾಡಿದಾಗ, ಅನೇಕ ಸಂದರ್ಭದಲ್ಲಿ ಬೆವರುವಿಕೆ, ಗಾತ್ರಭಂಜನ ಆಗುವಿಕೆ ಮೊದಲಾದ ಫಲಗಳು ಕಾಣಿಸುತ್ತಿಲ್ಲ. ಆದ್ದರಿಂದ ಯೋಗಶಾಸ್ತ್ರದಲ್ಲೂ ಕೂಡ ಫಲವ್ಯಭಿಚಾರ

ಇದ್ದೇ ಇದೆ. ಪಾಶುಪತಾದಿಸ್ಮೃತಿಗಳಂತೆ ಪಾತಂಜಲಿ ಯೋಗಾದಿಶಾಸ್ತ್ರಗಳೂ ಕೂಡ ಅಪ್ರಮಾಣವಾಗುತ್ತದೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಸ್ಮೃತ್ಯಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಸ್ಮೃತ್ಯಧಿಕರಣ ಮತ್ತು ವಿಮರ್ಶೆ

ಅದ್ವೈತಿಗಳು ಎರಡನೆಯ ಅಧ್ಯಾಯದ ನಾಕುಪಾದಗಳ ಕ್ರಮವನ್ನು ತಮ್ಮ ಗ್ರಂಥಗಳಲ್ಲಿ ಹೀಗೆ ಮಂಡಿಸಿದ್ದಾರೆ - ತಮ್ಮ ಪಕ್ಷಕ್ಕೆ ಸಾಂಖ್ಯಾದಿಸ್ಮೃತಿಗಳ ವಿರೋಧವಾಗಲೀ, ಸಂಖ್ಯಾದಿಸ್ಮೃತಿಗಳಿಂದ ಹುಟ್ಟುವ ತರ್ಕಗಳಿಂದಾಗಲೀ, ವಿರೋಧವು ಬರುವುದಿಲ್ಲವೆಂದು ಪ್ರಥಮಪಾದದಲ್ಲಿ ಪರಿಹರಿಸಲಾಗಿದೆ.

ಎರಡನೆಯ ಪಾದದಲ್ಲಿ ಸಾಂಖ್ಯ, ಚಾರ್ವಾಕ ಮೊದಲಾದ ಮತಗಳೆಲ್ಲವೂ ದುಷ್ಟವಾಗಿವೆ ಎಂದು ನಿರೂಪಣೆ ಮಾಡಲಾಗಿದೆ.

ಮೂರನೆಯ ಪಾದದ ಪೂರ್ವಾರ್ಧದಲ್ಲಿ ಪಂಚಮಹಾಭೂತಶ್ರುತಿಗಳಿಗೆ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಉತ್ತರಭಾಗದಲ್ಲಿ ಜೀವಶ್ರುತಿಗಳಿಗೆ ವಿರೋಧವನ್ನು ಪರಿಹರಿಸಲಾಗಿದೆ.

ನಾಕನೆಯ ಪಾದದಲ್ಲಿ ಲಿಂಗಶರೀರವನ್ನು ನಿರೂಪಣೆ ಮಾಡುವ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಲಾಗಿದೆ. ಇಷ್ಟು ನಾಕುಪಾದಗಳ ಅರ್ಥ.

ಅದ್ವೈತಿಗಳ ಈ ಪಾದಾರ್ಥಚಿಂತನೆಯು ಅಯುಕ್ತವಾಗಿದೆ. ಏಕೆಂದರೆ ಮೊದಲನೆಯ ಪಾದದ ಅರ್ಥವನ್ನು ಹೇಳುವಾಗ ಸ್ಮೃತಿವಿರೋಧ ಹಾಗೂ ತದುನ್ನೀತವಾದ ತರ್ಕವಿರೋಧ ಎಂಬ ಎರಡು ಉಪಾಧಿಗಳನ್ನು ಹೇಳಿದಿರಿ. ಒಂದು ಪಾದದಲ್ಲಿ ಒಂದೇ ಉಪಾಧಿಯು

ಇರಬೇಕು. ತೃತೀಯಪಾದದಲ್ಲಿಯೂ ಪಂಚಮಹಾಭೂತಶ್ರುತಿವಿರೋಧ ಪರಿಹಾರ ಹಾಗೂ ಜೀವಶ್ರುತಿವಿರೋಧ ಪರಿಹಾರ ಎಂಬ ಎರಡು ಬಗೆಯ ಉಪಾಧಿಗಳನ್ನು ಹೇಳಿರುತ್ತೀರಿ. ಒಂದೇ ಉಪಾಧಿಯನ್ನು ಹೇಳಿರುವುದಿಲ್ಲ.

ಮತ್ತು ಎರಡನೆಯ ಪಾದದಲ್ಲಿ ಸಾಂಖ್ಯಾದಿ ಸಮಯಗಳಿಗೆ ದುಷ್ಟತ್ವವನ್ನು ಹೇಳಲಾಗಿದೆ ಎಂಬ ಉಪಾಧಿಯನ್ನು ಹೇಳಿದಿರಿ. ಆದರೆ ಪ್ರಥಮಪಾದದಲ್ಲಿಯೂ ಅನೇಕ ಕಡೆ ನೀವೇ ಇದನ್ನು ಹೇಳಿದ್ದೀರಿ. 'ಇತರೇಷಾಂ ಚಾನುಪಲಬ್ಧೇಃ' 'ಏತೇನ ಯೋಗಃ ಪ್ರತ್ಯುಕ್ತಃ' 'ಸ್ವಪಕ್ಷದೋಷಾಚ್ಚ' 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಇವೇ ಮೊದಲಾದ ಸೂತ್ರಗಳಲ್ಲಿ ಪರಮತವು ದುಷ್ಟವಾಗಿದೆ ಎಂದು ಸಮರ್ಥಿಸಿದ್ದೀರಿ.

ಪ್ರಶ್ನೆ - ಪರಮತವು ದುಷ್ಟವಾಗಿದೆಯೆಂದು ಪ್ರಥಮಪಾದದಲ್ಲಿ ಹೇಳಿದ್ದರೂ, ಪರಮತದ ವಿರೋಧಪರಿಹಾರದಲ್ಲಿಯೇ ಪರ್ಯವಸಾನವಾಗುತ್ತದೆ. ಆದರೆ ಎರಡನೆಯ ಪಾದದಲ್ಲಿ ಪರಮತದಲ್ಲಿ ದೋಷವನ್ನು ಹೇಳುವುದೇ ಉದ್ದೇಶವಾಗಿರುತ್ತದೆ. ಈ ವೈಲಕ್ಷಣ್ಯದಿಂದ ಪ್ರಥಮಪಾದಕ್ಕೆ ದ್ವಿತೀಯಪಾದದಿಂದ ಸಾಂಕರ್ಯದೋಷವನ್ನು ಹೇಳಲು ಬರುವುದಿಲ್ಲವಲ್ಲವೇ?

ಇದು ತಪ್ಪು. ಎರಡನೆಯ ಅಧ್ಯಾಯದಲ್ಲಿಯೂ ಕೂಡ ಪರಮತಕ್ಕೆ ದುಷ್ಟತ್ವವನ್ನು ಹೇಳಿದ್ದು, ಸ್ವಪಕ್ಷದಲ್ಲಿ ವಿರೋಧವಿರುವುದಿಲ್ಲವೆಂದು ತಿಳಿಸುವುದಕ್ಕಾಗಿಯೇ ಹೊರತು, ಬೇರೆ ಯಾವ ಉದ್ದೇಶವೂ ಇರುವುದಿಲ್ಲ. ಹೀಗೊಪ್ಪದಿದ್ದರೆ ಎರಡನೆಯ ಪಾದಕ್ಕೆ ಅವಿರೋಧಾಧ್ಯಾಯದಲ್ಲಿ ಸಂಗತಿಯೇ ಇಲ್ಲದಂತಾಗಬೇಕಾದೀತು. ಏಕೆಂದರೆ ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯವೆಂದು ಹೆಸರು. ಎಲ್ಲಾ ಬಗೆಯ ವಿರೋಧವನ್ನು ಪರಿಹರಿಸುವುದೇ ಇದರ ಉದ್ದೇಶ. ಪ್ರಕೃತ ಎರಡನೆಯ ಪಾದದಲ್ಲಿ ಕೇವಲ ಅನ್ಯಮತವನ್ನು ದುಷ್ಟವೆಂದು ಹೇಳಿ, ಯಾವುದೇ ವಿರೋಧವನ್ನು ಪರಿಹಾರ ಮಾಡದಿದ್ದರೆ ಅದಕ್ಕೆ ಸಂಗತಿಯೇ ಇಲ್ಲದಂತಾಗುತ್ತದೆ.

ಮತ್ತು ಪ್ರಥಮಪಾದದಲ್ಲಿ ಸಾಂಖ್ಯಾದಿಸ್ಮೃತಿಗಳಿಂದ ನಿರ್ಮಿತವಾದ ತರ್ಕವಿರೋಧವನ್ನು ಪರಿಹರಿಸಿದ್ದೀರಿ - 'ದೃಶ್ಯತೇ ತು' ಎಂಬ ನವಿಲಕ್ಷಣತ್ವಾಧಿಕರಣದ ಸೂತ್ರದಲ್ಲಿ ಬ್ರಹ್ಮನು ಚೇತನನಾದ್ದರಿಂದ ಪ್ರಪಂಚಕ್ಕಿಂತ ವಿಲಕ್ಷಣನಾಗಿದ್ದಾನೆ. ಇವನು ಹೇಗೆ ಪ್ರಪಂಚಕ್ಕೆ ಕಾರಣನಾಗುತ್ತಾನೆ? ಎಂಬ ಪ್ರಶ್ನೆಯು ಬಂದರೆ ಗೋಮಯದಿಂದ ವೃಶ್ಚಿಕವು ಹುಟ್ಟಿದಾಗ

ವೃಶ್ಚಿಕವು ಚೇತನವಾಗದ ಕಾರಣ ವಿಲಕ್ಷಣವಾಗಿದ್ದರೂ ಗೋಮಯವು ಕಾರಣವೆಂದು ವೃಶ್ಚಿಕವು ಕಾರ್ಯವೆಂದು ಲೋಕದಲ್ಲಿ ಕಂಡಿದೆ. ಆದರಂತೆ ಬ್ರಹ್ಮನು ಚೇತನನಾಗಿದ್ದರೂ ಜಡವಾದ ಪ್ರಪಂಚಕ್ಕೆ ಕಾರಣನಾಗುತ್ತಾನೆ. ಹೀಗೆ ಸ್ವಪಕ್ಷದಲ್ಲಿ ಬರುವಂತಹ ತತ್ವದ ವಿರೋಧವನ್ನು ಪರಿಹರಿಸುತ್ತೀರಿ.

ಇದರಂತೆ ಎರಡನೆಯ ಪಾದದಲ್ಲಿರುವ 'ಮಹದ್ದೀರ್ಘವದ್ವಾ' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಯಥಾ ದ್ವ್ಯಣುಕಾದಣೋರ್ಹ್ರಸ್ವಾಚ್ಚ ಸತೋ ಮಹದ್ದೀರ್ಘಂ ಚ ತ್ರ್ಯಣುಕಾದಿ ಜಾಯತೇ । ನಾಣು ನಾಪಿ ಹ್ರಸ್ವಮ್ । ಏವಂ ಚೇತನಾತ್ ಬ್ರಹ್ಮಣೋಽಚೇತನಂ ಜಗಜ್ಜನಿಷ್ಯತೇ' ಎಂದು ಹೇಳಿದ್ದೀರಿ. ಇದರ ಅಭಿಪ್ರಾಯ ಹೀಗಿದೆ - ಪರಮಾಣುವಿನಿಂದ ದ್ವ್ಯಣುಕದಲ್ಲಿ ಅಣುಪರಿಮಾಣ ಮತ್ತು ಹ್ರಸ್ವಪರಿಮಾಣವಿರುತ್ತದೆ. ಇದರಿಂದ ಮಹತ್ ಪರಿಮಾಣವಿರುವ ಮತ್ತು ದೀರ್ಘಪರಿಮಾಣವಿರುವ ದ್ವ್ಯಣುಕವು ಹುಟ್ಟುತ್ತದೆ ಹೊರತು, ಅಣುಪರಿಮಾಣವಿರುವ ಹ್ರಸ್ವಪರಿಮಾಣವಿರುವ ಮತ್ತೊಂದು ವಸ್ತು ಹುಟ್ಟುವುದಿಲ್ಲ. ಹೀಗೆ ವಿಲಕ್ಷಣವಾದದ್ದಕ್ಕೂ ಕೂಡ ಕಾರ್ಯಕಾರಣಭಾವವಿರುತ್ತದೆಂದು ತಾರ್ಕಿಕರು ಒಪ್ಪಿದ್ದಾರೆ. ಆದರಂತೆ ಚೇತನನಾದ ಬ್ರಹ್ಮನಿಂದ ವಿಲಕ್ಷಣವಾದ ಅಚೇತನವಾದ ಜಗತ್ತು ಹುಟ್ಟುತ್ತದೆ ಎಂದು ನೀವೇ ಹೇಳಿರುತ್ತೀರಿ. ಆದ್ದರಿಂದ ಪ್ರಥಮಪಾದದಲ್ಲಷ್ಟೇ ಅಲ್ಲದೇ ಎರಡನೆಯ ಪಾದದಲ್ಲಿಯೂ ಕೂಡ ತರ್ಕವಿರೋಧವನ್ನು ಪರಿಹರಿಸುವುದರಿಂದ ಸಾಂಕರ್ಯದೋಷವು ಬಂದೇ ಬರುತ್ತದೆ.

ಮತ್ತು ಮೂರನೆಯ ಅಧ್ಯಾಯದ ಪೂರ್ವಭಾಗದಲ್ಲಿ ಜೀವಶ್ರುತಿಗಳನ್ನು ವಿಚಾರ ಮಾಡಿಲ್ಲವೆಂದು ಹೇಳಿದಿರಿ. ಇದೂ ಕೂಡ ಸರಿಯಿಲ್ಲ. 'ಅಂತರಾ ವಿಜ್ಞಾನಮನಸೀ' ಎಂಬಲ್ಲಿ 'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯನ್ನು ಉಲ್ಲೇಖ ಮಾಡುವ ಮೂಲಕ ಪ್ರಾಣ, ಮನಸ್ಸು ಮೊದಲಾದವುಗಳನ್ನು ವಿಷಯೀಕರಿಸುವ ಶ್ರುತಿಗಳ ವಿರೋಧ ಪರಿಹಾರವನ್ನು ಮಾಡಿರುತ್ತೀರಿ. ಹೀಗಿರುವಾಗ ಕೇವಲ ಭೂತಶ್ರುತಿಗಳ ವಿರೋಧವನ್ನಷ್ಟೇ ಪೂರ್ವಭಾಗದಲ್ಲಿ ಮಾಡಲಾಗಿದೆಯೆಂದು ನಿಯಮ ಮಾಡಲು ಸಾಧ್ಯವಿಲ್ಲ.

ಪ್ರಶ್ನೆ - 'ಅನ್ನಮಯಂ ಹಿ ಸೌಮ್ಯ ಮನ ಆಪೋಮಯಃ ಪ್ರಾಣಃ ತೇಜೋಮಯೀ ವಾಕ್' ಎಂಬ ಶ್ರುತಿಯಲ್ಲಿ ಮನಸ್ಸು, ಪ್ರಾಣ ಇವುಗಳೆಲ್ಲವೂ ಭೂತಾತ್ಮಕವೆಂದೇ ನಿಶ್ಚಯಿಸಲಾಗಿದೆ. ಆದ್ದರಿಂದ ತೃತೀಯಪಾದದ ಪೂರ್ವಭಾಗದಲ್ಲಿ ವಿಚಾರ ಮಾಡಿದ್ದು ಸಂಗತವಾಗುತ್ತದಲ್ಲವೇ?

ಉತ್ತರ - ಹಾಗಾದರೆ ನಾಕನೆಯ ಪಾದದಲ್ಲಿ 'ತಥಾ ಪ್ರಾಣಃ' 'ಸಪ್ತಗತೇರ್ವಿಶೇಷಿತತ್ವಾಚ್ಚ' 'ಅಣವಶ್ಚ' ಇವೇ ಮೊದಲಾದ ಅನೇಕ ಅಧಿಕರಣಗಳಲ್ಲಿ ಇಂದ್ರಿಯಾದಿಗಳ ಬಗ್ಗೆ ಏನು ವಿಚಾರ ಮಾಡಿದ್ದೀರೋ ಅದೆಲ್ಲವನ್ನು ಮೂರನೆಯ ಪಾದದ ಪೂರ್ವಭಾಗದಲ್ಲಿಯೇ ಮಾಡಬೇಕಿತ್ತು. ಏಕೆಂದರೆ ನೀವೇ ಹೇಳಿದಂತೆ ಇಂದ್ರಿಯ, ಮನಸ್ಸು ಮೊದಲಾದವುಗಳೆಲ್ಲವು ಭೂತಾತ್ಮಕವಾದ್ದರಿಂದ ತೃತೀಯಪಾದದ ಪೂರ್ವಭಾಗದಲ್ಲಿ ಇದರ ಉಲ್ಲೇಖವು ಸಂಗತವಾಗುತ್ತದೆ.

ಲಿಂಗಶರೀರವಿಷಯಕವಾದ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸುವಿಕೆ ಎಂಬ ನಾಕನೆಯ ಪಾದದ ಉಪಾಧಿಯೂ ಕೂಡ ಅಸಾಧುವಾಗಿದೆ. 'ಸಂಜ್ಞಾಮೂರ್ತಿಕ್ಲೃಪ್ತಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಅನೇನ ಜೀವೇನ' ಎಂಬ ವಿಷಯವಾಕ್ಯವನ್ನು ವಿವಕ್ಷಿಸಿ, ಜೀವನಿಗೆ ಕರ್ತೃತ್ವವನ್ನು ಹೇಳಬಾರದು, ಬ್ರಹ್ಮನಿಗೆ ಮಾತ್ರ ಹೇಳಬೇಕೆಂದು ಸಿದ್ಧಾಂತ ಮಾಡಿದ್ದೀರಿ. ಹೀಗೆ ಬ್ರಹ್ಮಕರ್ತೃತ್ವವನ್ನು ಸಮರ್ಥನೆ ಮಾಡಿದ್ದರಿಂದ, ಲಿಂಗಶರೀರದ ಬಗ್ಗೆ ವಿರೋಧವನ್ನು ಪರಿಹರಿಸಿದಂತಾಗಲಿಲ್ಲ. ಆದ್ದರಿಂದ ಎಲ್ಲಾ ಅಧಿಕರಣಗಳಲ್ಲಿಯೂ ಲಿಂಗಶರೀರವಿಷಯಕವಾದ ವಿಚಾರವೇ ಹೊರಟಿದೆ ಎಂಬ ನಿಯಮಕ್ಕೂ ಕೂಡ ಭಂಗ ಬರುತ್ತದೆ.

ಮತ್ತು ಮೊದಲು ಸ್ವಪಕ್ಷ ಸ್ಥಾಪನೆ ಮಾಡಿ, ಅನಂತರ ಪರಪಕ್ಷ ನಿರಾಕರಣೆ ಮಾಡಬೇಕು. ಮೂರು ಹಾಗೂ ನಾಕನೆಯ ಪಾದಗಳಲ್ಲಿ ನೀವೇ ಹೇಳಿದಂತೆ ಸ್ವಪಕ್ಷದಲ್ಲಿ ಬರುವ ವಿರೋಧಗಳನ್ನು ಪರಿಹರಿಸಿದ್ದೀರಿ. ಹಾಗಾದರೆ ಮೊದಲನೆಯ ಪಾದದ ಅನಂತರವೇ ಮೂರು ಹಾಗೂ ನಾಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದವು ಪರಪಕ್ಷದಲ್ಲಿ ದೋಷವನ್ನು ಹೇಳಿರುವುದರಿಂದ ಕೊನೆಯಲ್ಲಿ ಪ್ರಸಕ್ತವಾಗುತ್ತದೆ. ಆದ್ದರಿಂದ ಅದ್ವೈತಮತದಲ್ಲಿ ಪಾದದ ಪ್ರಮೇಯಗಳಾಗಲೀ, ಪಾದಕ್ರಮವಾಗಲೀ ದುಷ್ಟವಾಗಿರುತ್ತದೆ.

ರಾಮಾನುಜರ ಪ್ರಕಾರ ಅಧಿಕರಣಗಳ ಪ್ರಮೇಯ ಹೀಗಿದೆ - ಸ್ವಪಕ್ಷದಲ್ಲಿ ಕಾರಣವಿಷಯಕವಾದ ವಾಕ್ಯಗಳಲ್ಲಿ ದೋಷವನ್ನು ಪರಿಹರಿಸಲು ಪ್ರಥಮಪಾದ ಹೊರಟಿರುತ್ತದೆ.

ಪರಪಕ್ಷದವರೆಗೆ ಕಾರಣವಿಷಯಕವಾದ ವಾಕ್ಯಗಳಲ್ಲಿ ದೋಷವನ್ನು ತೋರಿಸಲು ಎರಡನೆಯ ಪಾದ ಹೊರಟಿರುತ್ತದೆ.

ಸ್ವಪಕ್ಷದಲ್ಲಿ ಕಾರ್ಯವಿಷಯಕವಾದ ವಾಕ್ಯಗಳಲ್ಲಿರುವ ದೋಷಪರಿಹಾರಕ್ಕಾಗಿ ಮೂರು ಮತ್ತು ನಾಕನೆಯ ಪಾದಗಳು ಹೊರಟಿರುತ್ತವೆ. ಇಷ್ಟು ರಾಮಾನುಜರು ನಿರೂಪಣೆ ಮಾಡುವ ಅಧಿಕರಣಗಳ ಪ್ರಮೇಯವಿಚಾರ.

ಇದು ತಪ್ಪು. ಅದ್ವೈತಿಗಳಂತೆ ನಿಮಗೂ ಕೂಡ ಸಾಂಕರ್ಯಾದಿ ದೋಷಗಳು ಬರುತ್ತವೆ. ಪ್ರಥಮಪಾದದಲ್ಲಿ ಸ್ವಪಕ್ಷದಲ್ಲಿ ದೋಷಪರಿಹಾರವನ್ನಷ್ಟೇ ಮಾಡಬೇಕಿತ್ತು. ಆದರೆ 'ಸ್ವಪಕ್ಷದೋಷಾತ್' ಎಂಬ ಸೂತ್ರದಿಂದ ಪರಪಕ್ಷದಲ್ಲಿರುವ ದೋಷವನ್ನೂ ಕೂಡ ಎತ್ತಿ ತೋರಿಸಿದ್ದೀರಿ.

ಎರಡನೆಯ ಪಾದದಲ್ಲಿ ಕಾರಣವಿಷಯಕವಾದ ವಾಕ್ಯಗಳಲ್ಲಿ ಪರಪಕ್ಷದವರಿಗೆ ದೋಷವನ್ನು ಮಾತ್ರ ತೋರಿಸಬೇಕಿತ್ತು. 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಪಂಚರಾತ್ರಾದಿಗಳಿಗೆ ಅಪ್ರಾಮಾಣ್ಯವೆಂಬ ಸ್ವಪಕ್ಷದಲ್ಲಿ ಬರುವ ದೋಷವನ್ನು ಪರಿಹರಿಸಿದ್ದೀರಿ.

ಮತ್ತು ಎರಡನೆಯ ಪಾದದಲ್ಲಿ 'ಸಮವಾಯಾಭ್ಯುಪಗಮಾಚ್ಚ' ಇತ್ಯಾದಿ ಅನೇಕ ಸೂತ್ರಗಳಿಂದ ಪರಪಕ್ಷದಲ್ಲಿ ಕಾರಣವಿಷಯದ ಬಗ್ಗೆ ಮಾತ್ರ ದೋಷವನ್ನು ಹೇಳದೇ ಸಮವಾಯ ಮೊದಲಾದವುಗಳ ಬಗ್ಗೆಯೂ ಕೂಡ ದೋಷವನ್ನು ಹೇಳಿರುತ್ತೀರಿ.

ಮೂರನೆಯ ಪಾದದಲ್ಲಿ 'ನಾತ್ಮಾ ಪ್ರಕರಣಾತ್' 'ಜ್ಞೋತ ಏವ' 'ಉತ್ಕ್ರಾಂತಿಗತ್ಯಾಗತೀನಾಮ್' ಇತ್ಯಾದಿ ಅನೇಕ ಸೂತ್ರಗಳಲ್ಲಿ ಕಾರ್ಯನಲ್ಲದ ಜೀವನ ಬಗ್ಗೆ ಬರುವಂತಹ ದೋಷಗಳನ್ನೆಲ್ಲಾ ಪರಿಹರಿಸಿದ್ದೀರಿ.

ಮತ್ತು ಮೂರು ಹಾಗೂ ನಾಕನೆಯ ಪಾದಗಳಿಗೆ ಒಂದೇ ಉಪಾಧಿಯನ್ನು ಹೇಳಿದ್ದೀರಿ. ಪಾದಭೇದಕ್ಕೆ ಕಾರಣವಾದ ಉಪಾಧಿಭೇದವನ್ನು ಹೇಳಿರುವುದಿಲ್ಲ. ಮತ್ತು ಕಾರಣವಿಷಯದಲ್ಲಿ ಪರಪಕ್ಷದವರಿಗೆ ದೋಷವನ್ನು ಹೇಳಲು ಎರಡನೆಯ ಪಾದ ಹೊರಡುವುದಾದರೆ ಕಾರ್ಯವಿಷಯದಲ್ಲಿ ದೋಷವನ್ನು ಹೇಳಲು ಮತ್ತೊಂದು ಪಾದ ಇರಬೇಕಿತ್ತಲ್ಲವೇ?

ಪಾದಕ್ರಮವೂ ಕೂಡ ಸರಿಯಿಲ್ಲ. ಏಕೆಂದರೆ ಪ್ರಥಮಪಾದವು ಸ್ವಪಕ್ಷಸ್ಥಾಪಕವಾದಂತೆ ಮೂರು ಹಾಗೂ ನಾಕನೆಯ ಪಾದಗಳೂ ಕೂಡ ಸ್ವಮತದಲ್ಲಿರುವ ದೋಷವನ್ನು ಪರಿಹರಿಸಿರುವುದರಿಂದ ಸ್ವಪಕ್ಷಸ್ಥಾಪಕವೇ ಆಗಿರುತ್ತವೆ. ಆದ್ದರಿಂದ ಪ್ರಥಮಪಾದದ ಅನಂತರ

ಮೂರು ಹಾಗೂ ನಾಕನೆಯ ಪಾದಗಳು ಸಂಗತವಾಗುತ್ತವೆ. ಎರಡನೆಯ ಪಾದವನ್ನು ಕೊನೆಯಲ್ಲಿಯೇ ಹೇಳಬೇಕಿತ್ತು. ಆದ್ದರಿಂದ ಪಾದಗಳ ವ್ಯವಸ್ಥೆಯು ಅಯುಕ್ತವಾಗಿವೆ.

ಮಾಯಾವಾದದಲ್ಲಿ ಮತ್ತು ರಾಮಾನುಜಮತದಲ್ಲಿ ಅಧಿಕರಣರಚನೆ ಹೀಗಿದೆ - ವೇದಾಂತಗಳು ಬಹುಮುಖವಾದ ಅರ್ಥಗಳನ್ನು ಹೊಂದಿರುತ್ತವೆ. ಶ್ರುತಿಗಳ ಅರ್ಥವು ಅತ್ಯಂತ ಕ್ಲಿಷ್ಟಕರ- ವಾಗಿರುವುದರಿಂದ ಮನುಷ್ಯ ಸಾಮಾನ್ಯರಿಗೆ ನೇರವಾಗಿ ಶ್ರುತಿಗಳ ಅರ್ಥವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಪರತಂತ್ರಪ್ರಜ್ಞಾವಂತರಾದ್ದರಿಂದ ಶ್ರುತಿಗಳ ಅಪೇಕ್ಷೆ ಬೇಕಾಗುತ್ತದೆ. ಸ್ಮೃತಿಗಳಿಂದಲೇ ವೇದದ ಅರ್ಥವನ್ನು ನಿಶ್ಚಯ ಮಾಡಬೇಕು. ಈ ಸಂದರ್ಭದಲ್ಲಿ ಯಾವ ಸ್ಮೃತಿಗಳನ್ನು ಅವಲಂಬಿಸಬೇಕೆಂಬ ಗೊಂದಲವುಂಟಾಗುತ್ತದೆ. ಮನ್ವಾದಿಸ್ಮೃತಿಗಳು ಆಚರಣೆ ಮೊದಲಾದವುಗಳನ್ನು ನಿರೂಪಣೆ ಮಾಡುತ್ತಾ ಅನ್ಯತ್ರ ಸಾವಕಾಶವಾಗಿವೆ. ಕಾಪಿಲಸ್ಮೃತಿಯು ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ಉಂಟಾಗುತ್ತವೆಂದು ತಿಳಿಸುವ ಮೂಲಕ ಸಿದ್ಧಾರ್ಥಬೋಧಕವಾಗಿದೆ. ಮೋಕ್ಷಸಾಧನವಾದ ಯಥಾರ್ಥಜ್ಞಾನವನ್ನು ತಂದುಕೊಡುವುದಕ್ಕಾಗಿಯೇ ಕಾಪಿಲಸ್ಮೃತಿಯು ಹೊರಟಿರುತ್ತದೆ. ಇಂತಹ ಸ್ಮೃತಿಗೆ ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಮಾಣವಾಗುತ್ತದೆ. ಆದರೆ ಕಪಿಲಮಹರ್ಷಿ ಈ ಸ್ಮೃತಿಯನ್ನು ರಚನೆ ಮಾಡಿರುವುದರಿಂದ ಅಪ್ರಾಮಾಣ್ಯವನ್ನು ಸರ್ವಥಾ ಹೇಳಬಾರದು. ಆದ್ದರಿಂದ ಸ್ಮೃತಿಗಳಿಗೆ ವಿರೋಧ ಬರದಂತೆ ವೇದಾಂತವಾಕ್ಯಗಳಿಗೆ ವ್ಯಾಖ್ಯಾನ ಮಾಡಬೇಕು. ಹೊರತು ವಿರುದ್ಧವಾಗುವಂತೆ ಬ್ರಹ್ಮನೇ ಜಗತ್ತಿಗೆ ಕಾರಣ ಎಂಬುದಾಗಿ ವ್ಯಾಖ್ಯಾನ ಮಾಡಬಾರದು. ಇಷ್ಟು ಪೂರ್ವಪಕ್ಷ.

ಮನ್ವಾದಿಸ್ಮೃತಿಗಳಲ್ಲಿ ಮತ್ತು ಪುರಾಣಾದಿಗಳಲ್ಲಿ ಅನೇಕ ಕಡೆ ಬ್ರಹನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ವಾಕ್ಯಗಳಿವೆ. ಒಂದು ವೇಳೆ ಕಾಪಿಲಸ್ಮೃತಿಯ ಪ್ರಾಮಾಣ್ಯವನ್ನು ಒಪ್ಪಿ, ಪ್ರಕೃತಿಗೆ ಕಾರಣತ್ವವನ್ನು ಹೇಳುವುದಾದರೆ, ಈ ಸ್ಮೃತಿಪುರಾಣವಾಕ್ಯಗಳ ಪ್ರಾಮಾಣ್ಯವನ್ನು ಕೈಬಿಡಬೇಕಾಗುತ್ತದೆ. ಇವೆರಡರಲ್ಲಿ ಯಾವುದಾದರು ಒಂದನ್ನು ಪರಿತ್ಯಾಗ ಮಾಡಲೇಬೇಕು. ಯಾವುದನ್ನು ಪರಿತ್ಯಾಗ ಮಾಡಬೇಕು ? ಎಂಬ ಪ್ರಶ್ನೆಯು ಬಂದರೆ ವೇದಗಳಿಗೆ ಅನುಸಾರಿಯಾದ ಸ್ಮೃತಿಗಳು ಹೇಳುವಂತೆ ಬ್ರಹ್ಮಕಾರಣತ್ವವಾದವನ್ನೇ ಒಪ್ಪಬೇಕು. ಅಂದರೆ ಸ್ಮೃತಿಗಳಿಗೆ ಅನುಸಾರಿಯಾಗಿ ವೇದಾಂತಗಳನ್ನು ವ್ಯಾಖ್ಯಾನ ಮಾಡಬೇಕು. ಸ್ಮೃತಿವಿರುದ್ಧವಾದ ಕಾಪಿಲಸ್ಮೃತಿಯ ಪ್ರಾಮಾಣ್ಯವನ್ನು ಪರಿತ್ಯಾಗ ಮಾಡಬೇಕು. ಇಷ್ಟು ಸಿದ್ಧಾಂತ.

ಈ ಅಧಿಕರಣಶರೀರ ಅಸಾಧು. ಏಕೆಂದರೆ ವೇದಾಂತಗಳು ಬ್ರಹ್ಮನೇ ಜಗತ್ತಿಗೆ ಕಾರಣನಾಗಿದ್ದಾನೆಂಬ ಒಂದೇ ಅಭಿಪ್ರಾಯವುಳ್ಳವುಗಳು. ಈ ವಿಷಯವನ್ನು 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ ಸಮರ್ಥಿಸಿದ್ದೇವೆ. ಮತ್ತು ಸಮನ್ವಯಾಧ್ಯಾಯದಲ್ಲಿ ಸಮಗ್ರ ವೇದವು ಬ್ರಹ್ಮನ ಜಗತ್ಕಾರಣತ್ವವನ್ನೇ ಪ್ರತಿಪಾದನೆ ಮಾಡುತ್ತಿದೆಯೆಂದು ಸಮರ್ಥನೆ ಮಾಡಿರುವುದರಿಂದ ಶ್ರುತಿಗಳು ಬಹುಮುಖವಾಗಿದೆಯೆಂಬ ಆಶಂಕೆಯೇ ಹುಟ್ಟುವುದಿಲ್ಲ.

ಮತ್ತು ರಾಮಾನುಜರು ಇಪ್ಪತ್ತು ಅಧ್ಯಾಯಗಳಿಂದ ಕೂಡಿರುವ ಪೂರ್ವಮೀಮಾಂಸಾ ಸಹಿತವಾದ ಬ್ರಹ್ಮಮೀಮಾಂಸವು ಒಂದೇ ಶಾಸ್ತ್ರವೆನ್ನುತ್ತಾರೆ. ಹೀಗಿರುವಾಗ ಪೂರ್ವಮೀಮಾಂಸೆಯಲ್ಲಿ ಸ್ಪರ್ಶನಶ್ರುತಿವಿರೋಧ ಬಂದಾಗ ಸರ್ವವೇಷ್ಟನಸ್ಮೃತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕೆಂದು ನಿರ್ಣಯಿಸಲಾಗಿದೆ. ಪುನಃ ಉತ್ತರಮೀಮಾಂಸೆಯಲ್ಲಿ ಸ್ಮೃತಿವಿರೋಧ ಬರುವುದರಿಂದ ಶ್ರುತಿಗೆ ಅನ್ಯಾರ್ಥ ಮಾಡಬೇಕೆಂಬ ಆಶಂಕೆಯೇ ಹುಟ್ಟುವುದಿಲ್ಲ.

'ಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬ ಸೂತ್ರದಲ್ಲಿ ಸ್ಮೃತಿಯೆಂಬ ಶಬ್ದವಿದೆ. ಇದಕ್ಕೆ ಅವೈದಿಕಸ್ಮೃತಿಗಳು ಎಂಬುದಾಗಿ ಅಸಂಕುಚಿತವಾದ ಅರ್ಥವನ್ನೇ ಪೂರ್ವಪಕ್ಷದಲ್ಲಿ ವಿವಕ್ಷಿಸಲು ಬರುವಾಗ ಅವೈದಿಕಸ್ಮೃತಿಗಳಲ್ಲಿ ಕೇವಲ ಕಾಪಿಲಸ್ಮೃತಿಯನ್ನು ಮಾತ್ರ ವಿವಕ್ಷಿಸುವುದು ಅಯುಕ್ತವಾಗುತ್ತದೆ.

'ಮಹದ್ದೀರ್ಘವದ್ವಾ' ಎಂಬ ಸೂತ್ರದಲ್ಲಿ ಕಣಾದಮತವನ್ನು ನಿರಾಕರಣೆ ಮಾಡಿರುವಂತೆ 'ರಚನಾನುಪತ್ತೇಃ' ಎಂಬ ಅಧಿಕರಣದಲ್ಲಿ ಸಾಂಖ್ಯಮತವನ್ನೂ ಕೂಡ ಅಯುಕ್ತವೆಂದೇ ನಿರಾಕರಿಸಲಾಗಿದೆ. ಇಷ್ಟು ಪ್ರಥಮಸೂತ್ರವ್ಯಾಖ್ಯಾನದ ನಿರಾಕರಣೆ.

'ಇತರೇಷಾಂ ಚಾನುಪಲಬ್ಧೇಃ' ಎಂಬ ಎರಡನೆಯ ಸೂತ್ರಕ್ಕೆ ಪರರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಸಾಂಖ್ಯಸಿದ್ಧಾಂತ ಹೇಳುವ ಪ್ರಕೃತಿಯಿಂದ ಹುಟ್ಟುವ ಮಹತ್ತತ್ತ್ವ ಅಹಂಕಾರತತ್ವಗಳು ಶ್ರುತಿಗಳಲ್ಲಿ ಉಲ್ಲೇಖಿತವಾಗಿಲ್ಲ. ಆದ್ದರಿಂದ ಅವುಗಳು ಸರ್ವಥಾ ಅಪ್ರಮಾಣವಾಗಿವೆ. ಈ ಕಾರಣದಿಂದಲೂ ಸಾಂಖ್ಯಮತವು ಅಯುಕ್ತ ಎಂಬುದು ಎರಡನೆಯ ಸೂತ್ರಾರ್ಥ.

ಇದೂ ಕೂಡ ಸರಿಯಲ್ಲ. ಏಕೆಂದರೆ 'ನ ಸಂಖ್ಯೋಪಸಂಗ್ರಹಾತ್' ಎಂಬ ಅಧಿಕರಣದಲ್ಲಿ 'ಮಹತಃ ಪರಮವ್ಯಕ್ತಮ್' ಇತ್ಯಾದಿ ಶ್ರುತಿಗಳನ್ನು ಉಲ್ಲೇಖಿಸುತ್ತಾ ಮಹತ್ತತ್ವಾದಿಗಳ

ಪ್ರಸ್ತಾವವಿರುವುದನ್ನು ನಾವು ಈ ಹಿಂದೆಯೇ ತೋರಿಸಿರುತ್ತೇವೆ. ಆದ್ದರಿಂದ ಶ್ರುತಿಗಳಲ್ಲಿ ಮಹತ್ತತ್ವಾದಿಗಳ ಉಲ್ಲೇಖವಿಲ್ಲವೆಂಬ ವ್ಯಾಖ್ಯಾನವು ಅಯುಕ್ತ.

ಪರರು 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಮೂರನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಇದು ಪ್ರತ್ಯೇಕ ಅಧಿಕರಣ. ಹಿಂದಿನ ಅಧಿಕರಣದಲ್ಲಿ ಈ ಸೂತ್ರವು ಇರುವುದಿಲ್ಲ. 'ವಿದ್ಯಾಮೇತಂ ಯೋಗವಿಧಿಂ ಚ ಕೃತ್ಸ್ನಮ್' ಇತ್ಯಾದಿ ಶ್ರುತಿಗಳಿಂದ ಯೋಗವನ್ನು ಪರಿಗ್ರಹಿಸಲಾಗಿದೆ. ಆದ್ದರಿಂದ ಸಾಂಖ್ಯಮತಕ್ಕಿಂತ ಯೋಗಸ್ಮೃತಿಯಲ್ಲಿ ವೈಲಕ್ಷಣ್ಯವಿದೆ. ಈ ಅಧಿಕಾಶಂಕೆಯನ್ನು 'ಏತೇನ ಯೋಗಃ' ಎಂಬ ಸೂತ್ರವು ಪರಿಹರಿಸುತ್ತಾ ಅತಿದೇಶ ಮಾಡುತ್ತಿದೆ.

ಇದು ತಪ್ಪು. ಯೋಗದರ್ಶನದ ನಿರಾಕರಣೆಗಾಗಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಹೇಳಬೇಕಾಗಿಲ್ಲ. ಏಕೆಂದರೆ 'ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಪೈಃ' ಎಂಬುದಾಗಿ ಸಾಂಖ್ಯಶಾಸ್ತ್ರವೂ ಕೂಡ ವೇದಾಂತದರ್ಶನವೆಂದು ಸ್ವೀಕರಿಸಲ್ಪಟ್ಟಿದೆ. ಆದ್ದರಿಂದ ಯೋಗಶಾಸ್ತ್ರವು ಮಾತ್ರ ವೇದಾಂತದರ್ಶನವಾಗುತ್ತದೆ. ಸಾಂಖ್ಯಶಾಸ್ತ್ರವು ಆಗುವುದಿಲ್ಲವೆಂಬ ಪರಿಕಲ್ಪನೆ ತಪ್ಪು.

ಸಾಂಖ್ಯಶಬ್ದಕ್ಕೆ ವೈದಿಕವಾದ ತತ್ವಜ್ಞಾನ ಎಂದರ್ಥ ಹೊರತು, ಸಾಂಖ್ಯದರ್ಶನ ಎಂದರ್ಥವಲ್ಲ ಎಂದು ಉತ್ತರಿಸುವುದಾದರೆ ಯೋಗಶಬ್ದಕ್ಕೂ ಕೂಡ ಜ್ಞಾನೋಪಾಯ ಎಂದೇ ಅರ್ಥ. ಹೊರತು ಯೋಗದರ್ಶನ ಎಂದರ್ಥವಲ್ಲ.

> ಪೂರ್ವಪಕ್ಷಸಮುತ್ಥಾನಮಾದ್ಯೇ ಹೇತೋರಸಿದ್ಧತಾ ।
> ದ್ವಿತೀಯೇಽಭ್ಯಧಿಕಾಶಂಕಾನುಪಪತ್ತಿಸ್ತೃತೀಯಕೇ ॥

ಅದ್ವೈತಿಗಳ ಅಧಿಕರಣಶರೀರದಲ್ಲಿ ಮೊದಲನೇ ಸೂತ್ರದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಎರಡನೆಯ ಸೂತ್ರವು ಹೇತು ಅಸಿದ್ಧವಾಗಿದೆ. ಅಭ್ಯಧಿಕಾಶಂಕೆಯೇ ಹುಟ್ಟದ ಕಾರಣ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ.

ಇಲ್ಲಿಗೆ ಸ್ಮೃತ್ಯಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಮತ್ತು ತಂತ್ರದೀಪಿಕೆ ಹಾಗೂ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ನ ವಿಲಕ್ಷಣತ್ವಾಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ನ ವಿಲಕ್ಷಣತ್ವಾಧಿಕರಣ

## ಬ್ರಹ್ಮಸೂತ್ರ

'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – न विलक्षणत्वादस्य तथात्वं च शब्दात्**

ಸೂತ್ರಾರ್ಥ - ಪಾಶುಪತಾದಿಗಳಲ್ಲಿ ಹೇಳಿದ ಕರ್ಮಗಳಿಗೆ ಫಲವು ದೊರೆಯದ ಕಾರಣ ಅಪ್ರಮಾಣವಾಗುವಂತೆ ವೇದ ಹಾಗೂ ವೇದಾನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳು ಅಪ್ರಮಾಣವಾಗುವುದಿಲ್ಲ. ಏಕೆಂದರೆ ವೇದಗಳು ನಿತ್ಯವಾಗಿವೆ. ಪಂಚರಾತ್ರಾದಿಸ್ಮೃತಿಗಳು ವೇದಕ್ಕೆ ಅನುಸಾರಿಯಾಗಿವೆ. ಹೀಗೆ ಪಾಶುಪತಾದಿ ಸ್ಮೃತಿಗಳಿಗಿಂತ ಪಂಚರಾತ್ರಾದಿ ಸ್ಮೃತಿಗಳಲ್ಲಿ ವೈಲಕ್ಷಣ್ಯ ಇರುವುದರಿಂದ ಅಪ್ರಾಮಾಣ್ಯ ದೋಷವು ಬರುವುದಿಲ್ಲ.

ಅರ್ಥ -- ಅಸ್ಯ = ಪಂಚರಾತ್ರಾದಿ ಸ್ಮೃತಿಗಳಿಗೆ ಪಾಶುಪತಾದಿ ಸ್ಮೃತಿಗಳಂತೆ ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ, ವಿಲಕ್ಷಣತ್ವಾತ್= ಸ್ವತಃ ಪ್ರಾಮಾಣ್ಯ ಎಂಬ ವೈಲಕ್ಷಣ್ಯವಿರುವುದರಿಂದ. ಅಥವಾ ಅಪೌರುಷೇಯತ್ವ ಮತ್ತು ಅಪೌರುಷೇಯವೇದ ವಾಕ್ಯಾನುಸಾರಿತ್ವ ಎಂಬ ವೈಲಕ್ಷಣ್ಯವಿರುವುದರಿಂದ ಅಪ್ರಾಮಾಣ್ಯವು ಇರುವುದಿಲ್ಲ. ತಥಾತ್ವಂ ಚ = ವೇದಗಳ ಅಪೌರುಷೇಯತ್ವ ಹಾಗೂ ಪಂಚರಾತ್ರಾದಿ ಸ್ಮೃತಿಗಳಿಗೆ ವೇದಾನುಸಾರಿತ್ವ ಎಂಬ ವೈಲಕ್ಷಣ್ಯವು, ಶಬ್ದಾತ್ = 'ವಾಚಾ ವಿರೂಪ ನಿತ್ಯಯಾ' ಮೊದಲಾದ ಪ್ರಮಾಣಗಳಿಂದ ನಿಶ್ಚಿತವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಶ್ರುತಿ ಹಾಗೂ ತದನುಸಾರಿ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು

**ब्रह्मसूत्रभाष्यम् – ।। न विलक्षणत्वादस्य तथात्वं च शब्दात् ।।१।।**

**नैवं श्रुतेस्तदनुसारिस्मृतेश्च तदुक्तानुपलब्धेरप्रामाण्यं वाच्यम् । विलक्षणत्वात् नित्यत्वात् तदनुसारित्वाच्च ।**

ಅನುವಾದ - ಪಾಶುಪತಸ್ಮೃತಿಯಲ್ಲಿ ವಿಧಿಸಿದ ಕರ್ಮಗಳನ್ನು ಆಚರಣೆ ಮಾಡಿದರೂ ಫಲವು ದೊರೆಯುತ್ತಿಲ್ಲ. ಆದ್ದರಿಂದ ಅದು ಅಪ್ರಮಾಣವಾಗಿದೆ. ಅದರಂತೆ ವೇದ ಹಾಗೂ ವೇದಾನುಸಾರಿಯಾದ ಸ್ಮೃತಿಗಳಲ್ಲಿಯೂ ವಿಧಿಸಿದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುತ್ತಿಲ್ಲ. ಆದ್ದರಿಂದ ವೇದ ಹಾಗು ವೇದಾನುಸಾರಿಯಾದ ಸ್ಮೃತಿಗಳಿಗೆ ಅಪ್ರಮಾಣ್ಯವನ್ನು ಹೇಳಬೇಕು.

ಹೀಗೆ ಆಶಂಕೆ ಮಾಡಬಾರದು. ಏಕೆಂದರೆ ವೇದಗಳು ಅಪೌರುಷೇಯವಾಗಿವೆ. ಪಂಚರಾತ್ರಾಗಮಗಳು ಅಪೌರುಷೆಯವಾದ ವೇದಕ್ಕೆ ಅನುಸಾರಿಯಾಗಿವೆ. ಹೀಗೆ ಪಾಶುಪತಶಾಸ್ತ್ರಕ್ಕಿಂತಲೂ ವೇದ ಹಾಗೂ ಪಂಚರಾತ್ರಾಗಮಗಳಲ್ಲಿ ವೈಲಕ್ಷಣ್ಯವಿರುವುದರಿಂದ ಫಲವು ದೊರೆಯುತ್ತಿಲ್ಲವೆಂದು ಅಪ್ರಮಾಣ್ಯವನ್ನು ಹೇಳಬಾರದು.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವ-ವಿಷಯದಲ್ಲಿ ಪ್ರಮಾಣವನ್ನಾಗಿ ಹೇಳಿದ ವೇದಾದಿಗಳಿಗೆ ಯುಕ್ತಿ-ವಿರೋಧವನ್ನು ಆಕ್ಷೇಪ ಮಾಡಿ ಪರಿಹಾರ ಮಾಡಲಾಗಿದೆ. ಭಾಷ್ಯದಲ್ಲಿ ನೇರವಾಗಿ ಸಿದ್ಧಾಂತವನ್ನೇ ಸ್ಥಾಪನೆ ಮಾಡುತ್ತಿದ್ದಾರೆ. ಶ್ರುತೇಃ = ವೇದಗಳಿಗೆ, ಚ = ಮತ್ತು, ತದನುಸಾರಿಸ್ಮೃತೇಃ = ವೇದಗಳಿಗೆ ಅನುಸಾರಿಯಾದ ಪಂಚರಾತ್ರಾಮಗಳಿಗೆ, ತದುಪಲಬ್ಧಾರ್ಥ ಅನುಪಲಬ್ಧೇಃ = ಅವುಗಳಲ್ಲಿ ಹೇಳಲ್ಪಟ್ಟ ಫಲಗಳು ಕಾಣಸದಿರುವುದರಿಂದ, ಅಪ್ರಾಮಾಣ್ಯಮ್ = ಅಪ್ರಾಮಾಣ್ಯವನ್ನು, ಏವಂ = ಪಾಶುಪತಾದ್ಯಾಗಮಗಳಂತೆ, ನ = ಹೇಳಬಾರದು, ವಿಲಕ್ಷಣತ್ವಾತ್ = ಪಾಶುಪತಾಮಗಳಿಂತಲೂ ಇವುಗಳಲ್ಲಿ ವೈಲಕ್ಷಣ್ಯವಿದೆ, ಹಿ = ಏಕೆಂದರೆ, ನಿತ್ಯತ್ವಾತ್ = ವೇದಗಳು

ಅಪೌರುಷೇಯಗಳಾಗಿವೆ. ತದನುಸಾರಿತ್ವಾಚ್ಚ = ವೈಷ್ಣವಸ್ಮೃತಿಗಳು ವೇದಾನುಸಾರಿಗಳಾಗಿವೆ.

### ಅಪೌರುಷೇಯ ವೇದದಲ್ಲಿ ದೋಷವಿಲ್ಲ

**ब्रह्मसूत्रभाष्यम् – न हि नित्ये दोषाः कल्प्याः । स्वतश्च प्रामाण्यम् । अन्यथाऽनवस्थितेः।**

ಅನುವಾದ - ಅಪೌರುಷೇಯವಾದ ವೇದಗಳಲ್ಲಿ ದೋಷಗಳನ್ನು ಎಂದೂ ಕೂಡ ಕಲ್ಪನೆ ಮಾಡಬಾರದು ಮತ್ತು ಪ್ರಾಮಾಣ್ಯವು ಫಲೋಪಲಬ್ಧಿಯ ಅಪೇಕ್ಷೆಯನ್ನು ಹೊಂದುವುದಿಲ್ಲ. ಹಾಗೆ ಅಪೇಕ್ಷೆ ಪ'''ರೆ ಅನವಸ್ಥಾದೋಷವು ಬರುತ್ತದೆ.

ಪ್ರತಿಪದಾರ್ಥ -- ವೇದವು ಅಪೌರುಷೇಯವಾದರೂ ಅಪ್ರಾಮಾಣ್ಯವನ್ನು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ನಿತ್ಯೇ = ಅಪೌರುಷೇಯವಾದ ವೇದದಲ್ಲಿ, ದೋಷಾಃ = ದೋಷಗಳನ್ನು ನ ಹಿ ಕಲ್ಪ್ಯಾಃ = ಕಲ್ಪನೆ ಮಾಡಬಾರದು. ಸ್ವತಶ್ಚ ಪ್ರಾಮಾಣ್ಯಮ್ = ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿರುವುದರಿಂದ, ಅನ್ಯಥಾ = ಪ್ರಾಮಾಣ್ಯಸ್ತ್ವವನ್ನು ಒಪ್ಪದಿದ್ದರೆ, ಅನವಸ್ಥಿತೇಃ = ಅನವಸ್ಥಾ ದೋಷವು ಬರುತ್ತದೆ.

### ವೇದಗಳಿಂದ ಮಾತ್ರ ದೇವರನ್ನು ತಿಳಿಯಲು ಸಾಧ್ಯ

**ब्रह्मसूत्रभाष्यम् – 'न चक्षुर्न श्रोत्रं न तर्को न स्मृतिर्वेदा ह्येवैनं वेदयन्ति' इति भाल्लवेयश्रुतेश्च ।**

ಅನುವಾದ - ವೇದಪ್ರತಿಪಾದ್ಯನಾದ ಪರಮಾತ್ಮನನ್ನು ಕಣ್ಣು ನೋಡುವುದಿಲ್ಲ, ಕಿವಿ ಕೇಳುವುದಿಲ್ಲ. ತರ್ಕವು ಸಾಧನೆ ಮಾಡುವುದಿಲ್ಲ. ಸ್ಮೃತಿಗ್ರಂಥಗಳು ಮಾತನಾಡುವುದಿಲ್ಲ. ವೇದಗಳು ಮಾತ್ರ ಅವನನ್ನು ಪ್ರತಿಪಾದನೆ ಮಾಡುತ್ತವೆ. ಹೀಗೆ ಭಾಲ್ಲವೇಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ವೇದವು ಸ್ವತಃಪ್ರಮಾಣವಾಗಿದೆ. 'ಶಬ್ದಾತ್' ಎಂಬ ಸೂತ್ರದ ಭಾಗದಿಂದ ಉಲ್ಲೇಖ ಮಾಡಿದ ವೇದದ ಸ್ವತಃ ಪ್ರಾಮಾಣ್ಯ-ವಿಷಯದಲ್ಲಿ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. ಚಕ್ಷುಃ = ಅಜ್ಞಾನಿಗಳ ಕಣ್ಣು ಏನಂ = ಈ ಪರಮಾತ್ಮನನ್ನು ನ = ನೋಡುವುದಿಲ್ಲ.

ಶ್ರೋತ್ರಂ = ಅಜ್ಞಾನಿಗಳ ಕಿವಿಯು, ಏನಂ = ಈ ಪರಮಾತ್ಮನನ್ನು, ನ = ಕೇಳುವುದಿಲ್ಲ. ತರ್ಕಃ = ಶುಷ್ಕವಾದ ಅನುಮಾನವು, ಏನಂ = ಈ ಪರಮಾತ್ಮನನ್ನು, ನ = ಸಾಧನೆ ಮಾಡುವುದಿಲ್ಲ. ಸ್ಮೃತಿಃ = ವೇದಕ್ಕೆ ಅನುಕೂಲವಾಗದ ಸ್ಮೃತಿಃ = ಸ್ಮೃತಿಯು, ಏನಂ = ಈ ಪರಮಾತ್ಮನನ್ನು, ನ = ಪ್ರತಿಪಾದನೆ ಮಾಡುವುದಿಲ್ಲ. ವೇದಾ ಹಿ = ವೇದಗಳು ಮಾತ್ರ, ಏನಂ = ಈ ಪರಮಾತ್ಮನನ್ನು, ವೇದಯಂತಿ = ಪ್ರತಿಪಾದನೆ ಮಾಡುತ್ತವೆ. ಇತಿ = ಹೀಗೆ, ಭಾಲ್ಲವೇಯಶ್ರುತೇಶ್ಚ = ಭಾಲ್ಲವೇಶ್ರುತಿಯು ಪ್ರಮಾಣವಾಗಿದೆ.

## ವೇದನಿತ್ಯತ್ವ ವಿಷಯದಲ್ಲಿ ಆಧಾರಗಳು

**ब्रह्मसूत्रभाष्यम् – नित्यत्वं च शब्दादेव प्रतीयते 'वाचा विरूप नित्यया' (ऋ.८.६४.६.) इत्यादेः । 'अनादिनिधना नित्या' इति च स्मृतिः ॥१॥**

ಅನುವಾದ - ವೇದದ ಅಪೌರುಷೆಯತ್ವವೂ ಕೂಡ ವೇದದಿಂದಲೇ ತಿಳಿಯುತ್ತದೆ. 'ವಾಚಾ ವಿರೂಪನಿತ್ಯಯಾ' ಎಂಬ ವೇದವಾಕ್ಯವು 'ಅನಾದಿ ನಿಧನಾ ನಿತ್ಯಾ' ಎಂಬ ಸ್ಮೃತಿವಾಕ್ಯವು ವೇದಗಳಿಗೆ ಅಪೌರುಷೇಯತ್ವವನ್ನು 'ನಿತ್ಯಾ' ಎಂಬ ಶಬ್ದದಿಂದ ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪಾದಾರ್ಥ -- ಅಪೌರುಷೇಯತ್ವವೆಂಬ ಯಾವ ವೈಲಕ್ಷಣ್ಯವನ್ನು ಸೂತ್ರದಲ್ಲಿ ಹೇಳಿದರೋ, ಅದು ಅಸಿದ್ಧವಾಗಿದೆ ಎಂದು ಆಶಂಕಿಸಿ ವೇದಪ್ರಮಾಣದಿಂದಲೇ ಅದನ್ನು ಪರಿಹರಿಸುತ್ತಿದ್ದಾರೆ. ನಿತ್ಯತ್ವಂ ಚ = ವೇದದ ಅಪೌರುಷೇಯತ್ವವಾದರೂ ಶಬ್ದಾದೇವ ಆಗಮಪ್ರಮಾಣದಿಂದಲೇ ಪ್ರತೀಯತೇ = ಸಿದ್ಧವಾಗುತ್ತಿದೆ. ವಾಚಾ ವಿರೂಪ ನಿತ್ಯಯಾ = ವಾಚಾ ವಿರೂಪ ನಿತ್ಯಯಾ ಇವೇ ಮೊದಲಾದ ವೇದಮಾತುಗಳಿಂದ ಅನಾದಿನಿಧನಾ ನಿತ್ಯಾ = 'ಅನಾದಿನಿಧನಾ ನಿತ್ಯಾ' ಇತ್ಯಾದಿ ಸ್ಮೃತಿವಾಕ್ಯಗಳಿಂದ ವೇದದ ಅಪೌರುಷೇಯತ್ವವು ಸಿದ್ಧವಾಗಿದೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

### ವೇದದಂತೆ ಪಾಶುಪತಸ್ಮೃತಿಗೆ ಪ್ರಾಮಾಣ್ಯವಿಲ್ಲ

**पशुपत्यादिकृतागमस्य तु विप्रलम्भादिकर्तृदोषसम्भवेनापि यथोक्तफलादर्शनोपपत्तेः । स प्रतिबन्धककर्मादिना एव इति निश्चेतुं शक्यत्वात् । तदाह – न विलक्षणत्वादित्यादिना ।। ननु जगज्जन्मादिकारणे नारायणे नित्यस्यापि निखिलवेदस्य प्रामाण्यं न युज्यते । प्रमाणान्तर-संवादाभावात् इत्यत आह – स्वतश्चेत्यादिना ।।**

ಪಶುಪತಿ ಮೊದಲಾದವರಿಂದ ರಚಿತವಾದ ಆಗಮವು ಕರ್ತೃದೋಷಸಹಿತ-ವಾಗಿರುವುದರಿಂದ ಅಪ್ರಮಾಣವಾಗಿದೆ. ಆದ್ದರಿಂದ ಅದರಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೂ ಕೂಡ ಫಲವು ದೊರಕುತ್ತಿಲ್ಲ. ಆದ್ದರಿಂದ ಪ್ರತಿಬಂಧಕವಾದ ಕರ್ಮಾದಿಗಳ ಅಧೀನವಾಗಿ ಫಲವು ದೊರಕುತ್ತಿಲ್ಲವೆಂದು ಪಾಶುಪತಾದ್ಯಾಗಮಗಳಲ್ಲಿ ನಿಶ್ಚಯ ಮಾಡಲು ಸಾಧ್ಯವಾಗುವುದಿಲ್ಲ. ಇದನ್ನೇ 'ನ ವಿಲಕ್ಷಣತ್ವಾದಿ' ಇತ್ಯಾದಿ ಭಾಷ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

ಜಗಜ್ಜನ್ಮಾದಿಕಾರಣನಾದ ನಾರಾಯಣನಲ್ಲಿ ನಿತ್ಯವಾದ ಸಕಲ ವೇದಗಳಿಗೂ ಕೂಡ ಪ್ರಾಮಾಣ್ಯವು ಹೇಗೆ ಯುಕ್ತವಾಗುತ್ತದೆ ? ಏಕೆಂದರೆ ಅವುಗಳಿಗೂ ಕೂಡ ಪ್ರಮಾಣಾಂತರ ಸಂವಾದ ಇರುವುದಿಲ್ಲ ? ಈ ಪ್ರಶ್ನೆಗೆ 'ಸ್ವತಶ್ಚ' ಇತ್ಯಾದಿ ಭಾಷ್ಯವಾಕ್ಯದಿಂದ ಉತ್ತರವನ್ನು ನೀಡುತ್ತಿದ್ದಾರೆ.

### ಪ್ರಾಮಾಣ್ಯಸ್ವತಸ್ತ್ವ ಒಪ್ಪದಿದ್ದರೆ ಅನವಸ್ಥಾ

**सत्तर्कदीपावलिः – प्रमाणस्य प्रमाणान्तरसंवादेनैव प्रामाण्ये संवादकप्रामाण्यस्यापि प्रमाणान्तरसंवादेनैव प्रामाण्यम् । तस्यापि**

**प्रमाणान्तरसंवादेनैव प्रामाण्यम् इत्यनवस्था स्यात् । अतः 'प्रामाण्यं स्वत एव' इत्यङ्गीकर्तव्यमित्यर्थः । संवादनिरपेक्षाणामेव वेदानां विष्णुबोधकत्वं श्रुत्या साधयति – न चक्षुरिति ।।**

ಒಂದು ಪ್ರಮಾಣಕ್ಕೆ ಮತ್ತೊಂದು ಪ್ರಮಾಣದ ಸಂವಾದದಿಂದ ಪ್ರಾಮಾಣ್ಯವನ್ನು ಹೇಳುತ್ತಿದ್ದೀರಿ. ಆ ಸಂವಾದಕ ಪ್ರಮಾಣಕ್ಕೂ ಕೂಡ ಮತ್ತೊಂದು ಪ್ರಮಾಣದ ಸಂವಾದದಿಂದಲೇ ಪ್ರಾಮಾಣ್ಯವನ್ನು ಹೇಳಬೇಕು. ಅದಕ್ಕೂ ಕೂಡ ಮತ್ತೊಂದು ಸಂವಾದದಿಂದ ಪ್ರಾಮಾಣ್ಯವನ್ನು ಹೇಳಬೇಕು. ಹೀಗೆ ಅನವಸ್ಥಾದೋಷವು ಬರಬೇಕಾಗುತ್ತದೆ. ಅದಕ್ಕೋಸ್ಕರ ಪ್ರಾಮಾಣ್ಯವನ್ನು ಸ್ವತಃ ಎಂದೇ ಅಂಗೀಕಾರ ಮಾಡಬೇಕು. ಯಾವುದೇ ಸಂವಾದದ ಅಪೇಕ್ಷೆ ಇಲ್ಲದೇ ವೇದಗಳೆಲ್ಲವೂ ವಿಷ್ಣುಬೋಧಕವಾಗುತ್ತವೆ. ಇದನ್ನು 'ನ ಚಕ್ಷುಃ' ಇತ್ಯಾದಿಯಾಗಿ ಶ್ರುತಿಯ ಮೂಲಕ ಸಾಧನೆ ಮಾಡುತ್ತಿದ್ದಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಶ್ರುತಿನಿತ್ಯತ್ವಾಧಿಕರಣ
### ಸ್ವಸಮಯವು ಪರಸಮಯ ಸಮಾನವಲ್ಲ

**तत्वप्रदीपः – परसमयसाधारणसमीरितम् एतमेव दोषं स्वसमयेऽपि समानं समाशङ्क्यमानम् अपनोनुद्यते । न विलक्षणत्वादस्य तथात्वं च शब्दात् । न चेतरस्मृतिवद् वेदस्य उक्तफलोपलम्भ एव प्रामाण्यम् । नित्यत्वात् । पुंवाक्ये विप्रलम्भादिदोषाः सम्भवन्ति । न नित्यवाक्ये ते कल्प्याः । प्राप्त्यभावात् । नित्यवाक्यप्रामाण्यानङ्गीकारे धर्माधर्माद्यसिद्धिरिति चावादिष्म ।**

[೧]ಇತರ ಸಮಯಗಳಲ್ಲಿ ಸಾಧಾರಣವಾದ ಯಾವ ದೋಷವನ್ನು ಹಿಂದಿನ ಅಧಿಕರಣದಲ್ಲಿ ಹೇಳಿದಿರೋ, ಅದು ನಿಮ್ಮ ಸಮಯದಲ್ಲೂ ಕೂಡ ಸಮಾನವಾಗಿದೆ. ಹೀಗೆ ಮಾಡುವ ಸಮಾನವಾದ ಆಶಂಕೆಯನ್ನು ಈ ಅಧಿಕರಣದಲ್ಲಿ ಪರಿಹಾರ ಮಾಡುತ್ತಿದ್ದಾರೆ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಇತ್ಯಾದಿಯಾಗಿ.

ಪಾಶುಪತಾದಿಸ್ಮೃತಿಗಳಂತೆ ವೇದವು ತಾನು ಹೇಳಿದ ಫಲವು ದೊರಕುತ್ತಿರುವುದರಿಂದ ಪ್ರಮಾಣವಾಗಿದೆ ಎಂದು ನಾವು ಸಮರ್ಥನೆ ಮಾಡುವುದೇ ಇಲ್ಲ. ಅಪೌರುಷೇಯ-ವಾದ್ದರಿಂದ ಪ್ರಮಾಣವಾಗಿದೆ ಎನ್ನುತ್ತೇವೆ. ಪುರುಷವಾಕ್ಯದಲ್ಲಿ ಪುರುಷನಲ್ಲಿ ವಿಪ್ರಲಂಭಾದಿ ದೋಷಗಳಿಗೆ ಅವಕಾಶವಿದೆ. ಅಪೌರುಷೇಯವಾದ ವಾಕ್ಯದಲ್ಲಿ ಪುರುಷನಲ್ಲಿರುವ ವಿಪ್ರಲಂಭಾದಿ ದೋಷಗಳನ್ನು ಕಲ್ಪನೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ ಇದು ಪುರುಷ ನಿರ್ಮಿತವೇ ಅಲ್ಲ. ಒಂದು ವೇಳೆ ನಿತ್ಯವಾದ ವಾಕ್ಯಕ್ಕೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡದೇ ಇದ್ದರೆ ಧರ್ಮಾಧರ್ಮಗಳೇ ಸಿದ್ಧವಾಗದಿರಬೇಕಾದೀತೆಂದು ಈಗಾಗಲೇ ಹೇಳಿದ್ದೇವೆ.

ವಿವರಣೆ - ಪಾಶುಪತಾದಿಸ್ಮೃತಿಗಳಲ್ಲಿ ಕೆಲವೊಂದು ಐಹಿಕ ಫಲಗಳು ದೊರಕುತ್ತವೆಂದು ಹೇಳಲಾಗಿದೆ. ಆದರೆ ಅದನ್ನು ಆಚರಣೆ ಮಾಡಿದಾಗಲೂ ಕೂಡ ಕೆಲವೊಮ್ಮೆ ಫಲವು ದೊರಕುತ್ತಿಲ್ಲ. ಆದ್ದರಿಂದ ಅವು ಅಪ್ರಮಾಣವಾಗಿವೆ ಎಂದು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಈ ದೋಷ ನಿಮಗೂ ಕೂಡ ಸಮಾನವಲ್ಲವೇ? ಏಕೆಂದರೆ ವೇದದಲ್ಲಿ ಯಾವ ಫಲಗಳು ದೊರಕುತ್ತದೆಂದು ಹೇಳಲಾಗಿದೆಯೋ, ಅಂಥ ಫಲಗಳಲ್ಲಿ ಪ್ರತ್ಯಕ್ಷಸಿದ್ಧವಾದದ್ದು ಕೆಲವು ದೊರಕುತ್ತಿಲ್ಲ. ಆದ್ದರಿಂದ ಪಾಶುಪತಾದಿಸ್ಮೃತಿಗಳಂತೆ ವೇದವೂ ಕೂಡ ಅಪ್ರಮಾಣವಾಗುತ್ತವೆಂದು ಆಕ್ಷೇಪವು ಬಂದರೆ ಈ ಶ್ರುತಿನಿತ್ಯತ್ವಾಧಿಕರಣವು ಉತ್ತರಿಸುತ್ತಿದೆ.

ವೇದವು ಅಪೌರುಷೇಯವಾಗಿದೆ. ಯಾರೊಬ್ಬ ಪುರುಷನಿಂದಲೂ ಇದು ರಚಿತವಲ್ಲ. ಆದ್ದರಿಂದ ಪುರುಷನಲ್ಲಿರುವ ವಿಪ್ರಲಂಭಾದಿ ದೋಷಗಳನ್ನು ಇಲ್ಲಿ ಆಕ್ಷೇಪ ಮಾಡಲು ಸಾಧ್ಯವೂ ಇಲ್ಲ. ಆದರೆ ಪಾಶುಪತಾದಿಸ್ಮೃತಿಗಳು ಪೌರುಷೇಯ ಆಗಿರುವುದರಿಂದ ಪುರುಷನಲ್ಲಿರುವ ದೋಷಗಳಿಗೆ ಅವಕಾಶವಿದೆ. ಆದ್ದರಿಂದ ಬೇರೆ ಸಮಯಗಳಿಗೆ ಬರುವ ದೋಷವು ನಮ್ಮ ಸಮಯಕ್ಕೆ ಪ್ರಾಪ್ತವಾಗುವುದಿಲ್ಲ.

(೧) ಲೋಕದಲ್ಲಿ ಈ ಅಧಿಕರಣಕ್ಕೆ 'ನ ವಿಲಕ್ಷಣತ್ವಾಧಿಕರಣ' ಎಂಬ ಹೆಸರು ಪ್ರಸಿದ್ಧವಾಗಿದೆ. ಆದರೆ ಮುದ್ರಿತ ತತ್ವಪ್ರದೀಪದಲ್ಲಿ ಇದನ್ನು 'ಶ್ರುತಿನಿತ್ಯತ್ವಾಧಿಕರಣ' ಎಂದು ಹೆಸರಿಸಲಾಗಿದೆ.

### ಆಶಂಕೆಯು ಸಾಕ್ಷಿಯ ತನಕ ಮಾತ್ರ

**तत्वप्रदीपः – स्वतश्च प्रामाण्यमङ्गीकर्तव्यम् । परतश्चेत् तस्यापि परत इत्यनवस्था । न च नित्यप्रमाणस्य प्रामाण्यं परतः भवितुमर्हति । कदाचिदप्रामाण्ये सदा तथात्वप्रसङ्गात् । ननु स्वतः प्रामाण्यवादिनामपि वेदे दोषाभावः प्रमाणान्तरात् ज्ञायते । तदप्यदोषमेव दोषाभावे प्रामाणम् । तददोषत्वम् अन्यसाध्यम् इत्यनवस्था तत्रापि तुल्येति । नायं दोषः । साक्ष्यवधित्वात् दोषशङ्कायाः । यत्र हि साक्षी निर्दोषत्वं निश्चिनोति, न तत्र दोषशङ्का स्यात् । न च साक्षिणो दोषः कल्प्यः । तदनुभूतस्य अनन्यथात्वनियमात् । अन्यथा प्रमाणाप्रमाणविवेकाभावप्रसङ्गात् । न च साक्षिनिर्दोषत्वज्ञानं मानान्तरापेक्षम् । स्वसंवेद्यत्वात् तस्य । तस्मात् नास्मत्पक्षे अनवस्था ।**

'ಪ್ರಾಮಾಣ್ಯಂ ಸ್ವತಃ' ಎಂದೇ ಅಂಗೀಕಾರ ಮಾಡಬೇಕು. 'ಪ್ರಾಮಾಣ್ಯಂ ಪರತಃ' ಎಂದು ಅಂಗೀಕಾರ ಮಾಡಿದರೆ ಅನವಸ್ಥಾದೋಷ ಬರುತ್ತದೆ. ನಿತ್ಯವಾದ ವೇದರೂಪವಾದ ಪ್ರಮಾಣಕ್ಕೆ ಪ್ರಾಮಾಣ್ಯವು ಮತ್ತೊಂದರಿಂದ ಹುಟ್ಟಲು ಸಾಧ್ಯವಿಲ್ಲವಷ್ಟೇ ? ಯಾವಾಗಲಾದರು ಅಪ್ರಾಮಾಣ್ಯವು ಬಂದರೆ ಆಗ ನಿರಂತರವಾಗಿ ಅದು ಅಪ್ರಮಾಣವೇ ಆಗುತ್ತದೆ. ಆದ್ದರಿಂದ ವೇದದಲ್ಲಿರುವ ಪ್ರಾಮಾಣ್ಯವು ಸಹಜವಾಗಿ ಇದೆ ಎಂದು ಹೇಳುತ್ತೇವೆ.

ಪ್ರಶ್ನೆ - ಸ್ವತಃ ಪ್ರಾಮಾಣ್ಯವಾದಿಗಳೂ ಕೂಡ ವೇದದಲ್ಲಿ ದೋಷವಿಲ್ಲ ಎಂಬುದನ್ನು ಮತ್ತೊಂದು ಪ್ರಮಾಣದಿಂದಲೇ ತಿಳಿಯಬೇಕು. ಆ ಮತ್ತೊಂದು ಪ್ರಮಾಣವು ನಿರ್ದುಷ್ಟವಾಗಿದ್ದರೆ ಮಾತ್ರ ವೇದದ ದೋಷಾಭಾವದಲ್ಲಿ ಪ್ರಮಾಣವಾಗಲು ಸಾಧ್ಯ. ಆದ್ದರಿಂದ ಅದರಲ್ಲಿರುವ ಅದೋಷತ್ವವನ್ನು ಮತ್ತೊಂದು ಪ್ರಮಾಣದಿಂದ ತಿಳಿಯಬೇಕು. ಅದರಲ್ಲೂ ಕೂಡ ಪ್ರಾಮಾಣ್ಯವನ್ನು ಇನ್ನೊಂದರಿಂದ ತಿಳಿಯಬೇಕೆಂಬುದು ಸಮಾನ. ಹೀಗೆ ಅನವಸ್ಥಾದೋಷವು ಸ್ವತಃ ಪ್ರಾಮಾಣ್ಯವಾದಿಗಳಿಗೂ ಕೂಡ ಸಮಾನವಾಗಿದೆಯಲ್ಲವೇ?

ಉತ್ತರ - ಅನವಸ್ಥಾದೋಷವು ಸ್ವತಃ ಪ್ರಾಮಾಣ್ಯವಾದಿಗಳಿಗೆ ಬರುವುದಿಲ್ಲ. ಏಕೆಂದರೆ ಸಾಕ್ಷಿಯು ಗ್ರಹಣ ಮಾಡುವ ತನಕ ಮಾತ್ರ ದೋಷಶಂಕೆಯು ಬರುತ್ತದೆ. ಎಲ್ಲಿ ಸಾಕ್ಷಿಯು

[೧]ಇತರ ಸಮಯಗಳಲ್ಲಿ ಸಾಧಾರಣವಾದ ಯಾವ ದೋಷವನ್ನು ಹಿಂದಿನ ಅಧಿಕರಣದಲ್ಲಿ ಹೇಳಿದಿರೋ, ಅದು ನಿಮ್ಮ ಸಮಯದಲ್ಲೂ ಕೂಡ ಸಮಾನವಾಗಿದೆ. ಹೀಗೆ ಮಾಡುವ ಸಮಾನವಾದ ಆಶಂಕೆಯನ್ನು ಈ ಅಧಿಕರಣದಲ್ಲಿ ಪರಿಹಾರ ಮಾಡುತ್ತಿದ್ದಾರೆ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಇತ್ಯಾದಿಯಾಗಿ.

ಪಾಶುಪತಾದಿಸ್ಮೃತಿಗಳಂತೆ ವೇದವು ತಾನು ಹೇಳಿದ ಫಲವು ದೊರಕುತ್ತಿರುವುದರಿಂದ ಪ್ರಮಾಣವಾಗಿದೆ ಎಂದು ನಾವು ಸಮರ್ಥನೆ ಮಾಡುವುದೇ ಇಲ್ಲ. ಅಪೌರುಷೇಯ-ವಾದ್ದರಿಂದ ಪ್ರಮಾಣವಾಗಿದೆ ಎನ್ನುತ್ತೇವೆ. ಪುರುಷವಾಕ್ಯದಲ್ಲಿ ಪುರುಷನಲ್ಲಿ ವಿಪ್ರಲಂಭಾದಿ ದೋಷಗಳಿಗೆ ಅವಕಾಶವಿದೆ. ಅಪೌರುಷೇಯವಾದ ವಾಕ್ಯದಲ್ಲಿ ಪುರುಷನಲ್ಲಿರುವ ವಿಪ್ರಲಂಭಾದಿ ದೋಷಗಳನ್ನು ಕಲ್ಪನೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ ಇದು ಪುರುಷ ನಿರ್ಮಿತವೇ ಅಲ್ಲ. ಒಂದು ವೇಳೆ ನಿತ್ಯವಾದ ವಾಕ್ಯಕ್ಕೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡದೇ ಇದ್ದರೆ ಧರ್ಮಾಧರ್ಮಗಳೇ ಸಿದ್ಧವಾಗದಿರಬೇಕಾದೀತೆಂದು ಈಗಾಗಲೇ ಹೇಳಿದ್ದೇವೆ.

ವಿವರಣೆ - ಪಾಶುಪತಾದಿಸ್ಮೃತಿಗಳಲ್ಲಿ ಕೆಲವೊಂದು ಐಹಿಕ ಫಲಗಳು ದೊರಕುತ್ತವೆಂದು ಹೇಳಲಾಗಿದೆ. ಆದರೆ ಅದನ್ನು ಆಚರಣೆ ಮಾಡಿದಾಗಲೂ ಕೂಡ ಕೆಲವೊಮ್ಮೆ ಫಲವು ದೊರಕುತ್ತಿಲ್ಲ. ಆದ್ದರಿಂದ ಅವು ಅಪ್ರಮಾಣವಾಗಿವೆ ಎಂದು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಈ ದೋಷ ನಿಮಗೂ ಕೂಡ ಸಮಾನವಲ್ಲವೇ? ಏಕೆಂದರೆ ವೇದದಲ್ಲಿ ಯಾವ ಫಲಗಳು ದೊರಕುತ್ತದೆಂದು ಹೇಳಲಾಗಿದೆಯೋ, ಅಂಥ ಫಲಗಳಲ್ಲಿ ಪ್ರತ್ಯಕ್ಷಸಿದ್ಧವಾದದ್ದು ಕೆಲವು ದೊರಕುತ್ತಿಲ್ಲ. ಆದ್ದರಿಂದ ಪಾಶುಪತಾದಿಸ್ಮೃತಿಗಳಂತೆ ವೇದವೂ ಕೂಡ ಅಪ್ರಮಾಣವಾಗುತ್ತವೆಂದು ಆಕ್ಷೇಪವು ಬಂದರೆ ಈ ಶ್ರುತಿನಿತ್ಯತ್ವಾಧಿಕರಣವು ಉತ್ತರಿಸುತ್ತಿದೆ.

ವೇದವು ಅಪೌರುಷೇಯವಾಗಿದೆ. ಯಾರೊಬ್ಬ ಪುರುಷನಿಂದಲೂ ಇದು ರಚಿತವಲ್ಲ. ಆದ್ದರಿಂದ ಪುರುಷನಲ್ಲಿರುವ ವಿಪ್ರಲಂಭಾದಿ ದೋಷಗಳನ್ನು ಇಲ್ಲಿ ಆಕ್ಷೇಪ ಮಾಡಲು ಸಾಧ್ಯವೂ ಇಲ್ಲ. ಆದರೆ ಪಾಶುಪತಾದಿಸ್ಮೃತಿಗಳು ಪೌರುಷೇಯ ಆಗಿರುವುದರಿಂದ ಪುರುಷನಲ್ಲಿರುವ ದೋಷಗಳಿಗೆ ಅವಕಾಶವಿದೆ. ಆದ್ದರಿಂದ ಬೇರೆ ಸಮಯಗಳಿಗೆ ಬರುವ ದೋಷವು ನಮ್ಮ ಸಮಯಕ್ಕೆ ಪ್ರಾಪ್ತವಾಗುವುದಿಲ್ಲ.

---

(೧) ಲೋಕದಲ್ಲಿ ಈ ಅಧಿಕರಣಕ್ಕೆ 'ನ ವಿಲಕ್ಷಣತ್ವಾಧಿಕರಣ' ಎಂಬ ಹೆಸರು ಪ್ರಸಿದ್ಧವಾಗಿದೆ. ಆದರೆ ಮುದ್ರಿತ ತತ್ತ್ವಪ್ರದೀಪದಲ್ಲಿ ಇದನ್ನು 'ಶ್ರುತಿನಿತ್ಯತ್ವಾಧಿಕರಣ' ಎಂದು ಹೆಸರಿಸಲಾಗಿದೆ.

ಆಶಂಕೆಯು ಸಾಕ್ಷಿಯ ತನಕ ಮಾತ್ರ

**तत्वप्रदीपः – स्वतश्च प्रामाण्यमङ्गीकर्तव्यम् । परतश्चेत् तस्यापि परत इत्यनवस्था । न च नित्यप्रमाणस्य प्रामाण्यं परतः भवितुमर्हति । कदाचिदप्रामाण्ये सदा तथात्वप्रसङ्गात् । ननु स्वतः प्रामाण्यवादिनामपि वेदे दोषाभावः प्रमाणान्तरात् ज्ञायते । तदप्यदोषमेव दोषाभावे प्रामाणम् । तददोषत्वम् अन्यसाध्यम् इत्यनवस्था तत्रापि तुल्येति । नायं दोषः । साक्ष्यवधित्वात् दोषशङ्कायाः । यत्र हि साक्षी निर्दोषत्वं निश्चिनोति, न तत्र दोषशङ्का स्यात् । न च साक्षिणो दोषः कल्प्यः । तदनुभूतस्य अनन्यथात्वनियमात् । अन्यथा प्रमाणाप्रमाणविवेकाभावप्रसङ्गात् । न च साक्षिनिर्दोषत्वज्ञानं मानान्तरापेक्षम् । स्वसंवेद्यत्वात् तस्य । तस्मात् नास्मत्पक्षे अनवस्था ।**

'ಪ್ರಾಮಾಣ್ಯಂ ಸ್ವತಃ' ಎಂದೇ ಅಂಗೀಕಾರ ಮಾಡಬೇಕು. 'ಪ್ರಾಮಾಣ್ಯಂ ಪರತಃ' ಎಂದು ಅಂಗೀಕಾರ ಮಾಡಿದರೆ ಅನವಸ್ಥಾದೋಷ ಬರುತ್ತದೆ. ನಿತ್ಯವಾದ ವೇದರೂಪವಾದ ಪ್ರಮಾಣಕ್ಕೆ ಪ್ರಾಮಾಣ್ಯವು ಮತ್ತೊಂದರಿಂದ ಹುಟ್ಟಲು ಸಾಧ್ಯವಿಲ್ಲವಷ್ಟೇ ? ಯಾವಾಗಲಾದರು ಅಪ್ರಾಮಾಣ್ಯವು ಬಂದರೆ ಆಗ ನಿರಂತರವಾಗಿ ಅದು ಅಪ್ರಮಾಣವೇ ಆಗುತ್ತದೆ. ಆದ್ದರಿಂದ ವೇದದಲ್ಲಿರುವ ಪ್ರಾಮಾಣ್ಯವು ಸಹಜವಾಗಿ ಇದೆ ಎಂದು ಹೇಳುತ್ತೇವೆ.

ಪ್ರಶ್ನೆ - ಸ್ವತಃ ಪ್ರಾಮಾಣ್ಯವಾದಿಗಳೂ ಕೂಡ ವೇದದಲ್ಲಿ ದೋಷವಿಲ್ಲ ಎಂಬುದನ್ನು ಮತ್ತೊಂದು ಪ್ರಮಾಣದಿಂದಲೇ ತಿಳಿಯಬೇಕು. ಆ ಮತ್ತೊಂದು ಪ್ರಮಾಣವು ನಿರ್ದುಷ್ಟವಾಗಿದ್ದರೆ ಮಾತ್ರ ವೇದದ ದೋಷಾಭಾವದಲ್ಲಿ ಪ್ರಮಾಣವಾಗಲು ಸಾಧ್ಯ. ಆದ್ದರಿಂದ ಅದರಲ್ಲಿರುವ ಅದೋಷತ್ವವನ್ನು ಮತ್ತೊಂದು ಪ್ರಮಾಣದಿಂದ ತಿಳಿಯಬೇಕು. ಅದರಲ್ಲೂ ಕೂಡ ಪ್ರಾಮಾಣ್ಯವನ್ನು ಇನ್ನೊಂದರಿಂದ ತಿಳಿಯಬೇಕೆಂಬುದು ಸಮಾನ. ಹೀಗೆ ಅನವಸ್ಥಾದೋಷವು ಸ್ವತಃ ಪ್ರಾಮಾಣ್ಯವಾದಿಗಳಿಗೂ ಕೂಡ ಸಮಾನವಾಗಿದೆಯಲ್ಲವೇ?

ಉತ್ತರ - ಅನವಸ್ಥಾದೋಷವು ಸ್ವತಃ ಪ್ರಾಮಾಣ್ಯವಾದಿಗಳಿಗೆ ಬರುವುದಿಲ್ಲ. ಏಕೆಂದರೆ ಸಾಕ್ಷಿಯು ಗ್ರಹಣ ಮಾಡುವ ತನಕ ಮಾತ್ರ ದೋಷಶಂಕೆಯು ಬರುತ್ತದೆ. ಎಲ್ಲಿ ಸಾಕ್ಷಿಯು

ನಿರ್ದೋಷತ್ವವನ್ನು ನಿಶ್ಚಯ ಮಾಡುತ್ತದೋ, ಅದರ ಮುಂದೆ ದೋಷ ಶಂಕೆ ಬರಲು ಸಾಧ್ಯವೇ ಇಲ್ಲ.

ಪ್ರಶ್ನೆ - ಸಾಕ್ಷಿಯಲ್ಲೂ ಕೂಡ ದೋಷ ಇರಬಹುದಲ್ಲವೇ?

ಉತ್ತರ - ಹೀಗೆ ಕಲ್ಪನೆ ಮಾಡಬಾರದು. ಸಾಕ್ಷಿಯಿಂದ ಅನುಭೂತವಾದದ್ದು ಬೇರೆ ರೀತಿಯಲ್ಲಿ ಇರಲು ಸಾಧ್ಯವೇ ಇಲ್ಲ. ಸಾಕ್ಷಿಯು ಯಾವುದನ್ನು ಗ್ರಹಣ ಮಾಡಿರುತ್ತದೋ, ಅದು ಯಥಾರ್ಥವೇ ಆಗಿರುತ್ತದೆ. ಹೀಗೆ ಅಂಗೀಕಾರ ಮಾಡದೇ ಇದ್ದರೆ 'ಇದು ಪ್ರಮಾಣ' 'ಇದು ಪ್ರಮಾಣವಲ್ಲ' ಎಂಬ ವಿವೇಕವೇ ಸಾಧ್ಯವಾಗುವುದಿಲ್ಲ.

ಪ್ರಶ್ನೆ - ಸಾಕ್ಷಿಯಲ್ಲಿರುವ ನಿರ್ದೋಷತ್ವವನ್ನು ತಿಳಿಯಬೇಕೆಂದರೆ ಮತ್ತೊಂದು ಪ್ರಮಾಣ ಬೇಕಲ್ಲವೇ?

ಉತ್ತರ - ಅವಶ್ಯಕತೆಯಿಲ್ಲ. ತನ್ನಲ್ಲಿರುವ ನಿರ್ದೋಷತ್ವ ಜ್ಞಾನವನ್ನು ತಾನೇ ತಿಳಿಯುತ್ತದೆ. ಆದ್ದರಿಂದ ಸ್ವತಃ ಪ್ರಾಮಾಣ್ಯವಾದಿಗಳಾದ ನಮ್ಮ ಪಕ್ಷದಲ್ಲಿ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ವ್ಯಾಘಾತದ ತನಕ ಮಾತ್ರ ಆಶಂಕೆ ಎಂಬುದಕ್ಕೆ ಉತ್ತರ

**तत्वप्रदीपः – नन्वस्मत्पक्षेऽपि प्रामाण्यशङ्कानुत्पत्तौ न मानान्तरापेक्षेति नानवस्थेति चेत्, किं आशङ्कानिवारकम्? यया शङ्कया व्याहतिः स्यात् सा नैवोत्पद्यते, तस्माद् व्याघातो निवारकः, तदवधिरेवाऽशङ्का स्यात्, अतः परतः प्रामाण्येऽपि नानवस्थेति चेत्, एवं तर्हि व्याघातानुभवस्य स्वतः प्रामाण्यमिष्टम् । अतस्तस्य साक्षिणः स्वप्रामाण्य एव सर्वव्यवहारावस्थितिः तद्वत् वेदस्यापि स्वप्रामाण्यं स्थितम् ।**

ಪ್ರಶ್ನೆ - ಪರತಃ ಪ್ರಾಮಾಣ್ಯವಾದಿಗಳ ಪಕ್ಷದಲ್ಲೂ ಕೂಡ ಪ್ರಾಮಾಣ್ಯದಲ್ಲಿ ಶಂಕೆಯೇ ಹುಟ್ಟದಿದ್ದರೆ ಮತ್ತೊಂದು ಪ್ರಮಾಣದ ಅಪೇಕ್ಷೆ ಇರುವುದಿಲ್ಲ. ಈ ಸ್ಥಿತಿಯಲ್ಲಿ ಅನವಸ್ಥಾದೋಷವನ್ನು ಹೇಗೆ ಹೇಳುವಿರಿ ?

ಉತ್ತರ - ಪ್ರಾಮಾಣ್ಯಶಂಕೆಗೆ ನಿವಾರಕವಾದದ್ದು ಯಾವುದು.

ಪ್ರಶ್ನೆ - ಯಾವ ಶಂಕೆಯು ಬಂದರೆ ವ್ಯಾಹತಿದೋಷ ಬರುತ್ತದೋ, ಅದರ ಮುಂದೆ ಪುನಃ ಶಂಕೆಯು ಹುಟ್ಟುವುದಿಲ್ಲ. ಆದ್ದರಿಂದ ಆತಂಕ ನಿವಾರಕವಾದದ್ದು ವ್ಯಾಘಾತದಲ್ಲಿ ಹೇಳುತ್ತೇವೆ. ವ್ಯಾಘಾತದ ತನಕ ಮಾತ್ರ ಆಶಂಕೆ ಬರುತ್ತದೆಂಬುದು ನಮ್ಮ ಅಭಿಪ್ರಾಯ. ಹಾಗಾಗಿ ನೀವು ಹೇಗೆ ಸಾಕ್ಷಿಯ ತನಕ ಮಾತ್ರ ಸಂಶಯ, ಅನಂತರ ಶಂಕೆ ಬರುವುದಿಲ್ಲವೆನ್ನುತ್ತೀರೋ, ಅದರಂತೆ ನಾವು ವ್ಯಾಘಾತ ದೋಷದ ತನಕ ಆಶಂಕೆ ಬರುತ್ತದೆ. ಅದರ ಮುಂದ ಆಶಂಕೆಯು ಹುಟ್ಟುವುದಿಲ್ಲ ಎಂದು ಹೇಳುತ್ತೇವೆ. ಆದ್ದರಿಂದ ಪರತಃಪ್ರಾಮಾಣ್ಯವಾದಿಗಳಿಗೂ ಕೂಡ ಅನವಸ್ಥಾದೋಷವು ಬರುವುದಿಲ್ಲ.

ಉತ್ತರ - ಹಾಗಾದರೆ ವ್ಯಾಘಾತಾನುಭವವನ್ನು ನೀವು ಸ್ವತಃ ಪ್ರಮಾಣ ಎಂದು ಒಪ್ಪಿದಂತಾಯಿತು. ಆ ವ್ಯಾಘಾತದ ಅನುಭವ ಬಂದಿರುವುದು ಸಾಕ್ಷಿಗೆ ಹೊರತು, ಮತ್ತೊಂದಕ್ಕಲ್ಲ. ಆ ಸಾಕ್ಷಿಯು ಸ್ವಪ್ರಮಾಣವೆಂದು ನೀವೂ ಕೂಡ ಒಪ್ಪಿದಂತೆ ಆಯಿತು. ಆದ್ದರಿಂದ ಸಾಕ್ಷಿಯು ಪ್ರಮಾಣವಾದರೆ ಮಾತ್ರ ಸಕಲ ವ್ಯವಹಾರಗಳು ಸ್ಥಿತವಾಗುತ್ತವೆ. ಅದರಂತೆ ವೇದಕ್ಕೂ ಕೂಡ ಸ್ವತಃ ಪ್ರಾಮಾಣ್ಯವು ಸಿದ್ಧವಾಯಿತು.

### ಸ್ವತಃಪ್ರಾಮಾಣ್ಯಾದಿಗಳಲ್ಲಿ ಶ್ರುತಿ ಪ್ರಮಾಣ

**ತत्वप्रदीपः – स्वतःप्रामाण्यं च शब्दात् प्रतीयते 'न चक्षुः' इत्यादेः । नित्यत्वं च 'तस्मै नूनम्' इत्यादेः । हे विरूप! तस्मा अभिद्यवे सुष्टुतिं चोदस्व । 'अभितो द्योतत' इति - अभिद्युः । वृषा श्रेष्ठः । 'सुष्ठु स्तुतिं प्रति प्रेरय' इति प्रार्थनं विरूपस्य ऋषेरन्तर्यामिविषयं भवति । 'ऋचः सामानि जज्ञिरे' इत्यादि शब्दात् उत्पत्तिमत्वमाशङ्क्य, आह – अनादिनिधनेत्यादि ॥ अनाधिनिधनत्वेन नित्या, नत्वनिधनत्वमात्रेण ॥**

### इति श्रुतिनित्यत्वाधिकरणम् ॥

ಸ್ವತಃಪ್ರಾಮಾಣ್ಯವು ಶ್ರುತಿಯಿಂದಲೇ ಸಿದ್ಧವಾಗುತ್ತದೆ. ಇದನ್ನು 'ನ ಚಕ್ಷುಃ' ಇತ್ಯಾದಿ ಭಾಷ್ಯದಿಂದ ತಿಳಿಸಿದ್ದಾರೆ. ವೇದವು ನಿತ್ಯವಾಗಿದೆ ಎಂಬುದನ್ನು 'ತಸ್ಮೈ ನೂನಮ್' ಇತ್ಯಾದಿ ವೇದವಾಕ್ಯದಿಂದ ತಿಳಿಯಬೇಕು. ವಿರೂಪ ಎಂಬ ಋಷಿಯು ತನ್ನ ಅಂತರ್ಯಾಮಿಯಾದ

ಭಗವಂತನನ್ನು ಕುರಿತು, ಹೀಗೆ ಪ್ರಾರ್ಥನೆ ಮಾಡುತ್ತಾನೆ - ಎಲೈ ವಿರೂಪನೇ ! ಎಲ್ಲೆಡೆ ಪ್ರಕಾಶಮಾನನಾದ ಅತ್ಯಂತ ಶ್ರೇಷ್ಠನಾದ ಭಗವಂತನನ್ನು ಚೆನ್ನಾಗಿ ಸ್ತೋತ್ರ ಮಾಡಲು ಪ್ರೇರಣೆ ಮಾಡು ಎಂದು. (ತನ್ನನ್ನು ಕುರಿತು ತಾನೇ ಹೇಳಿಕೊಂಡಿದ್ದಾನೆ ಎಂದು ಈ ವಾಕ್ಯವನ್ನು ನೋಡಿದಾಗ ತಿಳಿಯುತ್ತದೆ. ಆದರೆ ತತ್ವಪ್ರದೀಪದಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಕುರಿತು ಮಾಡುವ ಪ್ರಾರ್ಥನೆ ಎಂದು ಕಾಣಿಸುತ್ತದೆ. ತಾನು ವಿರೂಪ ಎಂಬ ಹೆಸರನ್ನು ಪಡೆದಿದ್ದರೂ ಕೂಡ ಅಂತರ್ಯಾಮಿಯಾದ ಭಗವಂತನೇ ನಿಜವಾದ ವಿರೂಪ ಎಂಬುದಾಗಿ ಸಂಬೋಧನೆ ಮಾಡಿ, ಪ್ರಾರ್ಥನೆ ಮಾಡಿದ್ದಾನೆ.)

'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿ ವೇದವಾಕ್ಯವನ್ನು ನೋಡಿದಾಗ ವೇದಕ್ಕೆ ಉತ್ಪತ್ತಿ ಇದೆ ಎಂಬ ಆಶಂಕೆ ಬರುತ್ತದೆ. ಇದರ ಪರಿಹಾರಕ್ಕೋಸ್ಕರ 'ಅನಾದಿನಿಧನಾ ನಿತ್ಯಾ' ಎಂಬ ಸ್ಮೃತಿಯನ್ನು ಉಲ್ಲೇಖಿಸುವ ಮೂಲಕ ಉತ್ತರಿಸುತ್ತಿದ್ದಾರೆ. ಆದಿಯೂ ಇಲ್ಲ, ಅಂತ್ಯವೂ ಇಲ್ಲ ಆದ್ದರಿಂದ ಇದು ನಿತ್ಯವಾಗಿದೆ ಎಂಬುದು ಸ್ಮೃತಿಯ ಅಭಿಪ್ರಾಯ. ಆದಿಯಿದೆ ಅಂತ್ಯವಿಲ್ಲ ಎಂಬ ಮಾತ್ರದಿಂದ ನಿತ್ಯವಾಗಿರುವುದಿಲ್ಲ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಶ್ರುತಿನಿತ್ಯತ್ವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

## ವೇದಪ್ರಾಮಾಣ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ 'ನ ವಿಲಕ್ಷಣತ್ವಾಧಿಕರಣ'

**अत्र विष्णोर्जगत्कारणत्वे प्रमाणत्वेनोक्तवेदादिप्रामाण्यस्य युक्तिविरोधपरिहारादस्ति शास्त्रादिसङ्गतिः ॥**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಯಾವ ವೇದಾದಿಗಳನ್ನು ಪ್ರಮಾಣಗಳನ್ನಾಗಿ ಹಿಂದೆ ಹೇಳಲಾಯಿತೋ, ಆ ವಿಷಯಗಳಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇರುತ್ತವೆ.

> ವಿವರಣೆ - ವೇದಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ವೇದವು ಪ್ರಾಮಾಣವೇ ಆಗುವುದಿಲ್ಲ. ಆಗ ತನ್ಮೂಲಕವಾಗಿ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಆದ್ದರಿಂದ ಯುಕ್ತಿವಿರೋಧವನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. ಹೀಗೆ ಯುಕ್ತಿವಿರೋಧವನ್ನು ಪರಿಹಾರ ಮಾಡಲು ಹೊರಟಿರುವುದರಿಂದ ಅವಿರೋಧಾಧ್ಯಾಯದಲ್ಲಿ ಹಾಗೂ ಯುಕ್ತಿಪಾದದಲ್ಲಿ ಇದು ಸಂಗತವಾಗುತ್ತದೆ.

### ಅಧಿಕರಣದ ವಿಷಯ ಸಂದೇಹಾದಿಗಳು

**तत्वप्रकाशिका – श्रुत्यादिप्रामाण्यात् विष्णोर्जगत्कारणत्वं सिध्यतीत्युक्तम्। श्रुत्यादिप्रामाण्यस्य च युक्तिविरोधे न ब्रह्मणो जगत्कारणत्वसिद्धिः । अतोऽसौ परिहर्तव्य एव । श्रुत्याद्येव विषयः प्रमाणं न वेति सन्देहः । उभयविधवाक्योपलब्धिः, सन्देहबीजम् ।**

ಶ್ರುತಿ-ಸ್ಮೃತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಯಿತು. ಈ ಶ್ರುತ್ಯಾದಿಪ್ರಾಮಾಣ್ಯಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಬ್ರಹ್ಮನಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು. ಶ್ರುತ್ಯಾದಿಗಳೇ ಅಧಿಕರಣಕ್ಕೆ ವಿಷಯ. ಶ್ರುತ್ಯಾದಿಗಳು ಪ್ರಮಾಣವೋ, ಅಲ್ಲವೋ ಎಂಬುದು ಅಧಿಕರಣದ ಸಂದೇಹ. ಎರಡು ಬಗೆಯ ವಾಕ್ಯಗಳ ಉಪಲಬ್ಧಿಯು ಸಂದೇಹಕ್ಕೆ ಕಾರಣ.

### ಶ್ರುತಿಗಳು ಅಪ್ರಮಾಣವೆಂದು ಪೂರ್ವಪಕ್ಷ

**तत्वप्रकाशिका – श्रुत्यादिकं न प्रमाणमिति पूर्वः पक्षः । 'कारीर्या यजेत वृष्टिकामः' इत्यादिश्रुतेः कारीर्याद्यनुष्ठानेऽपि वृष्ट्याद्यदृष्टाऽविद्यमानार्थाभिधायकत्वात् ।**

ಶ್ರುತ್ಯಾದಿಗಳು ಪ್ರಮಾಣವಲ್ಲವೆಂದು ಪೂರ್ವಪಕ್ಷ. 'ಕಾರಿರ್ಯಾ ಯಜೇತ ವೃಷ್ಟಿಕಾಮಃ' ಮಳೆಯನ್ನು ಬಯಸುವವನು ಕಾರೀರ್ಯಾ ಯಾಗವನ್ನು ಆಚರಿಸಬೇಕು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದರೆ ಕಾರೀರ್ಯಾ ಯಾಗವನ್ನು ಅನುಷ್ಠಾನ ಮಾಡಿದರೂ ಕೂಡ ಕೆಲವೊಮ್ಮೆ ಮಳೆ ಬರುವುದು ಕಾಣಸುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಶ್ರುತಿಗಳು ಅಪ್ರಮಾಣವಾಗುತ್ತವೆ.

### ಪಂಚರಾತ್ರಸ್ಮೃತಿಗಳು ಅಪ್ರಮಾಣವೆಂದು ಪೂರ್ವಪಕ್ಷ

**तत्वप्रकाशिका – तथा स्मृतीनामप्यनुपलभ्यमानफलभिधायकत्वेनाविद्यमानार्थत्वात् । अविध्यमानाभिधायकानां च पाशुपतादिस्मृतिवदप्रामाण्यनियमात्।**

ಇದೇ ರೀತಿಯಾಗಿ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಏಕೆಂದರೆ ಆಯಾ ಸ್ಮೃತಿಗಳಲ್ಲಿ ಯಾವ ಕರ್ಮವನ್ನು ಅನುಷ್ಠಾನ ಮಾಡಿದರೆ, ಫಲವು ದೊರೆಯುತ್ತದೆಂದು ಹೇಳುತ್ತಿದೆಯೋ, ಆಯಾ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಕೂಡ ಫಲಗಳು ದೊರೆಯುತ್ತಿಲ್ಲ. ಹೀಗೆ ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಸ್ಮೃತಿಗಳೂ ಕೂಡ ಅಪ್ರಮಾಣವಾಗಿವೆ. ಪಾಶುಪತಾದಿಸ್ಮೃತಿಗಳು ಹೀಗೆ ಅವಿದ್ಯಮಾನವಾದ ಅರ್ಥವನ್ನು ಹೇಳುವುದರಿಂದ ಅಪ್ರಮಾಣವಾಗಿವೆಯೋ, ಅದರಂತೆ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವೆ.

### ಯುಕ್ತಿಯಿಂದ ಅಪ್ರಾಮಾಣ್ಯ ಸಮರ್ಥನೆ

**तत्वप्रकाशिका – अविद्यमानाभिधात्रीणामपि श्रुतिस्मृतीनां प्रामाण्ये, अन्यस्मृतीनामपि तत्प्रसङ्गात् । न हि अविद्यमानाभिधायकत्वसाम्येऽपि**

**'श्रुत्यादेरेव प्रामाण्यं, नान्यस्य' इति विभागे हेतुरस्ति । एवं च वेदाद्येकदेशस्याप्रामाण्येऽन्यदशप्रमाणतयामनाश्वासान्न विष्णोर्जगत्कारणत्व-सिद्धिरिति ।**

ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡಿದರೂ ಕೂಡ ಶ್ರುತಿ-ಸ್ಮೃತಿಗಳು ಪ್ರಮಾಣವಾಗುವುದಾದರೆ, ಪಾಶುಪತಾದಿಸ್ಮೃತಿಗಳೂ ಕೂಡ ಪ್ರಮಾಣವಾಗಲಿ. ಇಲ್ಲದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವಿಕೆ ಎಂಬುದು ಎರಡು ಕಡೆ ಸಮಾನವಾಗಿರುವಾಗ ಶ್ರುತಿಗಳು ಹಾಗೂ ಪಂಚರಾತ್ರಸ್ಮೃತಿಗಳು ಮಾತ್ರ ಪ್ರಮಾಣವಾಗುತ್ತವೆ. ಪಾಶುಪತಸ್ಮೃತಿಗಳು ಪ್ರಮಾಣವಾಗುವುದಿಲ್ಲ ಎಂದು ವಿಭಾಗ ಮಾಡಲು ಯಾವುದೇ ಕಾರಣ ಇರುವುದಿಲ್ಲ. ಹೀಗೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ ಉಳಿದ ಏಕದೇಶವು ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ವಿಶ್ವಾಸ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ವೇದ ಹಾಗೂ ತದನುಸಾರಿ ಸ್ಮೃತಿಗಳು ಪ್ರಮಾಣವೆಂದು ಸಿದ್ಧಾಂತ

**तत्वप्रकाशिका – सिद्धान्तयत्सूत्रमुपन्यस्य प्रतिज्ञांशं तावद् व्याचष्टे – नेति ।। अस्य श्रुत्यादेस्तथात्वं पाशुपतादिस्मृतिवत्, उक्तानुपलब्धिहेतुनानाप्रामाण्यं कल्प्यमिति भावः । तत्र हेत्वाकाङ्क्षायां सौत्रं हेतुमुपन्यस्य व्याचष्टे – विलक्षणत्वादिति ।।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ಪ್ರತಿಜ್ಞಾಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ ಅಸ್ಯ ತಥಾತ್ವಮ್' ಎಂಬುದು ಸೂತ್ರದಲ್ಲಿರುವ ಪ್ರತಿಜ್ಞಾವಾಕ್ಯವಾಗಿದೆ. ಇದಕ್ಕೆ 'ವಿಲಕ್ಷಣತ್ವಾತ್' ಎಂಬುದು ಹೇತುವಾಕ್ಯವಾಗಿದೆ. 'ಶಬ್ದಾತ್' ಎಂಬುದು ಹೇತು ಸಮರ್ಥಕವಾದ ವಾಕ್ಯವಾಗಿದೆ. 'ಅಸ್ಯ' ಎಂಬ ಪದಕ್ಕೆ ಶ್ರುತ್ಯಾದಿಗಳಿಗೆ ಎಂದರ್ಥ. 'ನ ತಥಾತ್ವಮ್' ಎಂದರೆ ಪಾಶುಪತಾದಿಸ್ಮೃತಿಗಳಂತೆ 'ಅನುಪಲಬ್ಧಿ' ಎಂಬ ಹೇತುವಿನಿಂದ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದಭಿಪ್ರಾಯ. ಈ ವಿಷಯದಲ್ಲಿ

ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಸೂತ್ರದಲ್ಲಿರುವ ಹೇತುವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಲು 'ವಿಲಕ್ಷಣತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

### ಪಂಚರಾತ್ರಸ್ಮೃತಿಯಂತೆ ಪಾಶುಪತಸ್ಮೃತಿಗೆ ಪ್ರಾಮಾಣ್ಯವಿಲ್ಲ

**तत्वप्रकाशिका – श्रुतेः पाशुपतादिस्मृतितो नित्यत्वाख्यवैलक्षण्यात्, स्मृतेः तदनुसारित्वाख्यवैलक्षण्यान्न पाशुपतादिस्मृतिवत्, श्रुत्यादेरप्रामाण्यमित्यर्थः। ननु नित्यत्वादिसद्भावेऽपि कुतोऽप्रामाण्याभाव इत्यत आह – नहीति ।।**

ಪಾಶುಪತಾದಿಸ್ಮೃತಿಗಳಿಗಿಂತ ಶ್ರುತಿಯಲ್ಲಿ ನಿತ್ಯತ್ವವೆಂಬ ವೈಲಕ್ಷಣ್ಯವಿದೆ. ಪಂಚರಾತ್ರಾದಿ-ಸ್ಮೃತಿಗಳಲ್ಲಿ ವೇದಾನುಸಾರಿತ್ವ ಎಂಬ ವೈಲಕ್ಷಣ್ಯವಿದೆ. ಆದ್ದರಿಂದ ಶ್ರುತಿಗೆ ಹಾಗೂ ಪಂಚರಾತ್ರಸ್ಮೃತಿಗೆ ಪಾಶುಪತಸ್ಮೃತಿಯಂತೆ ಅಪ್ರಾಮಾಣ್ಯವನ್ನು ಹೇಳಬಾರದು ಎಂದಭಿಪ್ರಾಯ. ವೇದದಲ್ಲಿ ನಿತ್ಯತ್ವಾದಿಗಳಿದ್ದರೂ ಕೂಡ ಏಕೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

### ವೇದದ ನಿರ್ದುಷ್ಟತ್ವಕ್ಕೆ ಕಾರಣ

**तत्वप्रकाशिका – वाक्याप्रामाण्यं तावद् वक्तृदोषनिबन्धनम् । न हि नित्ये वेदे ते दोषाः कल्पयितुं शक्यन्ते । यतो नित्यत्वाददोषत्वं, ततोऽप्रामाण्याभावः श्रुतेः सिध्यति। प्रमाणानुकूलत्वात्, स्मृतेरपि तत्सिद्धिरिति भावः ।।**

ವಕ್ತೃವಿನಲ್ಲಿ ದೋಷವಿದ್ದರೆ ಮಾತ್ರ ಅವನಿಂದ ಉಚ್ಚರಿಸಲ್ಪಟ್ಟ ವಾಕ್ಯವು ಅಪ್ರಮಾಣವಾಗುತ್ತದೆ. ವೇದವು ನಿತ್ಯವಾಗಿರುವುದರಿಂದ ಯಾವುದೇ ವ್ಯಕ್ತಿಯಿಂದ ಅದು ಉಚ್ಚರಿತವಾಗಿಲ್ಲ. ಆದ್ದರಿಂದ ಅದರಲ್ಲಿ ದೋಷವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ. ಯಾವ ಕಾರಣದಿಂದ ವೇದವು ನಿತ್ಯವಾಗಿರುವುದರಿಂದ ದೋಷರಹಿತವಾಗಿದೆಯೋ, ಆದ್ದರಿಂದಲೇ ಅದು ಅಪ್ರಮಾಣವೂ ಕೂಡ ಆಗುವುದಿಲ್ಲ ಎಂದು ಸಿದ್ಧವಾಗುತ್ತದೆ. ಇಂಥ ವೇದಗಳಿಗೆ ಅನುಸಾರಿಯಾಗಿರುವುದರಿಂದ ಪಂಚರಾತ್ರಾದಿಸ್ಮೃತಿಗಳೂ ಕೂಡ ಅಪ್ರಮಾಣವಾಗುವುದಿಲ್ಲ ಎಂದಭಿಪ್ರಾಯ.

ಫಲವ್ಯಭಿಚಾರಕ್ಕೆ ಕಾರಣ

**तत्वप्रकाशिका – 'फलव्यभिचारेऽपि न पाशुपतादिस्मृतिवद्वेदादेरप्रामाण्यम्' इत्यत्रोक्तवैलक्षण्याख्यं हेतुं प्रकारान्तरेण व्याचष्टे – स्वतश्चेति ॥**

ಫಲವ್ಯಭಿಚಾರವಿದ್ದರೂ ಕೂಡ ಪಾಶುಪತಾದಿಸ್ಮೃತಿಗಳಂತೆ ವೇದಾದಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಈ ವಿಷಯದಲ್ಲಿ ಪಾಶುಪತಾದಿಸ್ಮೃತಿಗಳಿಗಿಂತ ವೇದದಲ್ಲಿರುವ ವೈಲಕ್ಷಣ್ಯವನ್ನು ಮತ್ತೊಂದು ಪ್ರಕಾರದಿಂದ 'ಸ್ವತಶ್ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವೇದಪ್ರಾಮಾಣ್ಯವು ಸಾಕ್ಷಿಸಿದ್ಧ

**तत्वप्रकाशिका – भवेदुक्तानुपलब्ध्या वेदाद्यप्रामाण्यकल्पनं, यदि पाशुपतादिस्मतिवत् फलोपलब्ध्यादिसंवादाधीनज्ञानं तत्प्रामाण्यस्य स्यात् । नैतदस्ति। वेदादिप्रामाण्यस्य संवादनिरपेक्षतज्ज्ञानादेव सिद्ध्यङ्गीकारात् । न हि निर्दोषतदनुसारितत्तत्स्वरूपग्रहे पुनः प्रामाण्योपलब्ध्यै संवादसापेक्षताऽनुभूयते।**

ಒಂದುವೇಳೆ ಹಿಂದೆ ಹೇಳಿದಂತೆ ಫಲದ ಅನುಪಲಬ್ಧಿಯಿಂದ ವೇದ ಹಾಗು ಪಂಚರಾತ್ರಗಳಿಗೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಿದ್ದರೆ ನೀವು ಹೇಳಿದಂತೆ ವೇದವು ಅಪ್ರಮಾಣವಾಗುತ್ತಿತ್ತು. ಒಂದುವೇಳೆ ಪಾಶುಪತಾದಿ ಸ್ಮೃತಿಗಳಂತೆ ಪ್ರಾಮಾಣ್ಯವನ್ನು ಫಲೋಪಲಬ್ಧಿ ಮೊದಲಾದ ಸಂವಾದ ಪ್ರಮಾಣದ ಅಧೀನವಾಗಿ ತಿಳಿಯುವುದಾಗಿದ್ದಲ್ಲಿ; ಆದರೆ ವೇದಾದಿಗಳ ವಿಷಯದಲ್ಲಿ ಹೀಗಿಲ್ಲ. ವೇದಾದಿಗಳ ಪ್ರಾಮಾಣ್ಯವು ಸಂವಾದದ ಸಾಪೇಕ್ಷವಲ್ಲ. ಯಾವುದರಿಂದ ಜ್ಞಾನವು ಬರುತ್ತದೋ ಆದರಿಂದಲೇ ಅದರ ಪ್ರಾಮಾಣ್ಯವು ಕೂಡ ಸಾಕ್ಷಿಯಿಂದ ಸಿದ್ಧವಾಗುತ್ತದೆ. ಹೀಗಿರುವಾಗ ಫಲಸಂವಾದ ಇಲ್ಲದ ಕಾರಣ ಅಪ್ರಮಾಣವೆಂದು ಹೇಳಬಾರದು.

ಪಾಶುಪತಸ್ಮೃತಿಯಲ್ಲಿ ನಿರ್ದುಷ್ಟತ್ವವಿಲ್ಲ

**तत्वप्रकाशिका – न च पाशुपतादिस्मृतीनामपि तथात्वं वाच्यम् । निर्दोषत्वाद्यनिश्चयादिति भावः ।**

ಪಾಶುಪತಾದಿಸ್ಮೃತಿಗಳಲ್ಲೂ ಕೂಡ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬಹುದಲ್ಲವೆ ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ವೇದದಲ್ಲಿ ನಿರ್ದೋಷತ್ವವು ಸಿದ್ಧವಾದುತೆ ಪಾಶುಪತಾದಿಸ್ಮೃತಿಗಳಲ್ಲಿ ನಿರ್ದೋಷತ್ವವು ಸಿದ್ಧವಾಗಿರುವುದಿಲ್ಲ.

### ಪ್ರಾಮಾಣ್ಯಕ್ಕೆ ಸಂವಾದದ ಅಪೇಕ್ಷೆಯಿಲ್ಲ

**तत्वप्रकाशिका – प्रामाण्यं संवादाधीनज्ञानमेव किं न स्यादित्यत आह –अन्यथेति ॥**

ಸಕಲ ಪ್ರಮಾಣಗಳ ಪ್ರಾಮಾಣ್ಯವು ಸಂವಾದದಿಂದಲೇ ಗೃಹೀತವಾಗುತ್ತದೆಂದು ಏಕೆ ಒಪ್ಪಬಾರದು? ಎಂಬ ಆಕ್ಷೇಪಕ್ಕೆ 'ಅನ್ಯಥಾ' ಎಂಬ ಮಾತಿನಿಂದ ಉತ್ತರಿಸಿದ್ದಾರೆ.

### ಪ್ರಾಮಾಣ್ಯವು ಸಹಜಸಿದ್ಧ

**तत्वप्रकाशिका – यदि प्रामाण्यं संवादादेव ज्ञायते तर्हि संवादकप्रामाण्यमपि संवादान्तरेण ज्ञायते स्वत एव वा ।**

ಒಂದುವೇಳೆ ಪ್ರಾಮಾಣ್ಯವು ಸಂವಾದದಿಂದಲೇ ಸಿದ್ಧವಾಗುತ್ತದೆ ಎಂದು ಹೇಳಿದರೆ ಆ ಸಂವಾದಕ ಪ್ರಮಾಣದಲ್ಲಿಯೂ ಪ್ರಾಮಾಣ್ಯವು ಗೃಹಿತವಾಗಬೇಕು. ಅದರಲ್ಲೂ ಪ್ರಾಮಾಣ್ಯವು ಮತ್ತೊಂದು ಸಂವಾದದಿಂದಲೇ ತಿಳಿಯುತ್ತದೆಂದು ಹೇಳುತ್ತಿರೋ ಅಥವಾ ಸ್ವತಃ ತಿಳಿಯುತ್ತದೆಂದು ಹೇಳುತ್ತಿರೋ?

### ಇಲ್ಲದಿದ್ದಲ್ಲಿ ಅನವಸ್ಥಾದೋಷ

**तत्वप्रकाशिका – आद्ये तदप्येवमित्यनवस्था स्यात् । द्वितीये परम्पराकल्पनं व्यर्थं स्यात् । आद्यप्रामाण्यस्यैव स्वतस्त्वाभ्युपगमोपपत्तेरिति भावः ॥**

ಮೊದಲನೆಯ ಪಕ್ಷದಲ್ಲಿ ಸಂವಾದಕಪ್ರಮಾಣದ ಪ್ರಾಮಾಣ್ಯವು ಮತ್ತೊಂದು ಸಂವಾದ ಪ್ರಮಾಣದಿಂದಲೇ ತಿಳಿಯಬೇಕಾದ್ದರಿಂದ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಎರಡನೆಯ ಪಕ್ಷದಲ್ಲಿ ಸಂವಾದ ಪರಂಪರೆಯನ್ನು ಒಪ್ಪುವ ಅವಶ್ಯಕತೆಯೇ ಇರುವುದಿಲ್ಲ. ಮೊದಲ ಪ್ರಮಾಣದ ಪ್ರಾಮಾಣ್ಯವನ್ನು ಸ್ವತಃ ಎಂದೇ ಅಂಗೀಕರಿಸಬಹುದು.

### ಪ್ರವೃತ್ತಿಗಾಗಿ ಪ್ರಾಮಾಣ್ಯದ ಜಿಜ್ಞಾಸೆ

**तत्वप्रकाशिका – कदाचित् प्रामाण्यजिज्ञासायामेव संवादापेक्षणान्नानवस्थेति चेन्मैवम् । प्रामाण्याध्यवसायं विना प्रवृत्त्यनुपपत्तत्या तज्जिज्ञासाध्रौव्यात् ।**

ಯಾವ ಸಂದರ್ಭದಲ್ಲಿ ಪ್ರಾಮಾಣ್ಯದ ಜಿಜ್ಞಾಸೆಯು ಉಂಟಾಗುತ್ತದೋ ಆವಾಗ ಮಾತ್ರ ಮತ್ತೊಂದು ಸಂವಾದಪ್ರಮಾಣದ ಅಪೇಕ್ಷೆ ಬೇಕಾಗುತ್ತದೆ. ಎಲ್ಲಿ ಜಿಜ್ಞಾಸೆ ಹುಟ್ಟುವುದಿಲ್ಲವೋ ಅಲ್ಲಿ ಪ್ರಾಮಾಣ್ಯಗ್ರಹಣಕ್ಕೆ ಮತ್ತೊಂದು ಸಂವಾದದ ಅಪೇಕ್ಷೆಯೇ ಇರುವುದಿಲ್ಲ. ಹೀಗಿರುವಾಗ ಅನವಸ್ಥಾ ದೋಷವನ್ನು ಹೇಗೆ ಹೇಳುವಿರಿ.

ಹೀಗೆ ಆಕ್ಷೇಪ ಮಾಡಬಾರದು ಏಕೆಂದರೆ ಪ್ರಾಮಾಣ್ಯವು ನಿಶ್ಚಯವಾಗದಿದ್ದರೆ ಪ್ರವೃತ್ತಿಯೇ ಉಂಟಾಗುವುದಿಲ್ಲ. ಪ್ರವೃತ್ತಿಗೋಸ್ಕರ ಪ್ರಾಮಾಣ್ಯದ ಜಿಜ್ಞಾಸೆಯನ್ನು ಮಾಡಲೇಬೇಕು.

### ನಿಃಶಂಕಾ ಪ್ರವೃತ್ತಿಗೆ ಪ್ರಾಮಾಣ್ಯ ನಿಶ್ಚಯ ಅನಿವಾರ್ಯ

**तत्वप्रकाशिका – फलसन्देहेऽपि कृष्यादौ प्रवृत्तिर्दृश्यत इति चेत् सत्यम् । सापि न निःशङ्का । यावच्छंकमेव संवादापेक्षणान्नानवस्थेति चेत् ।**

ಫಲದಲ್ಲಿ ಸಂದೇಹವಿದ್ದರೂ ಪ್ರವೃತ್ತಿಯು ಉಂಟಾಗುತ್ತದೆ. ಕೃಷಿ ಮಾಡುವಾಗ ಸಂಶಯದಿಂದಲೇ ಮೊದಲು ಪ್ರವೃತ್ತಿ ಮಾಡುವುದು ಕಂಡಿದೆ. ಆದ್ದರಿಂದ ಪ್ರವೃತ್ತಿಯಾಗಲು ಪ್ರಾಮಾಣ್ಯನಿಶ್ಚಯದ ಅವಶ್ಯಕತೆ ಇರುವುದಿಲ್ಲವಲ್ಲವೆ ?

ಹೀಗೆ ಆಕ್ಷೇಪ ಮಾಡಬಾರದು. ಕೃಷಿ ಮೊದಲಾದ ಲೌಕಿಕವ್ಯಾಪಾರಗಳಲ್ಲಿ ಸಂಶಯದಿಂದ ಪ್ರವೃತ್ತಿ ಮಾಡುವುದು ಸತ್ಯ. ಆದರೆ ಅದು ನಿಃಶಂಕಾಪ್ರವೃತ್ತಿಯೆಂದು ಕರೆಸಿಕೊಳ್ಳುವುದಿಲ್ಲ. ನಿಶ್ಶಂಕಾಪ್ರವೃತ್ತಿಗಾಗಿ ಪ್ರಾಮಾಣ್ಯದ ನಿಶ್ಚಯ ಆಗಲೇಬೇಕು. ಹಾಗಾದರೆ ಎಲ್ಲಿಯ ತನಕ ಶಂಕೆಯು ಇರುತ್ತದೋ ಅಲ್ಲಿಯ ತನಕ ಸಂವಾದದ ಅಪೇಕ್ಷೆ ಇರುತ್ತದೆ. ಶಂಕೆಯು ಪರಿಹಾರವಾದ ಕೂಡಲೇ ಸಂವಾದದ ಅಪೇಕ್ಷೆ ಇರುವುದಿಲ್ಲವಾದ್ದರಿಂದ ಅನವಸ್ಥಾದೋಷ ಹೇಗೆ ಬರುತ್ತದೆ ?

ಶಂಕೆಯು ಎಲ್ಲಿ ಬರುತ್ತದೆ ?

**तत्वप्रकाशिका – तत्र वक्तव्यम् । किं शङ्का सर्वत्रानुवर्तते कचिन्नोत्पद्यत एव वा ?**

ಇಲ್ಲಿ ಪ್ರಶ್ನಿಸುತ್ತೇವೆ - ಈ ಶಂಕೆಯು ಎಲ್ಲೆಡೆಯೂ ಸಮಾನವಾಗಿರುತ್ತದೋ, ಅಥವಾ ಕೆಲವೆಡೆ ಹುಟ್ಟುವುದೇ ಇಲ್ಲವೋ ?

ಅನವಸ್ಥಾದೋಷ

**तत्वप्रकाशिका – आद्ये कथमनवस्थाऽभावः । द्वितीयो निरस्तप्रायः ।**

ಮೊದಲ ಪಕ್ಷವನ್ನು ಒಪ್ಪಿದರೆ ಎಲ್ಲೆಡೆಯು ಶಂಕೆಯ ಪರಿಹಾರಕ್ಕಾಗಿ ಸಂವಾದವನ್ನು ಅಪೇಕ್ಷೆ ಪಡಲೇಬೇಕಾದ್ದರಿಂದ ಅನವಸ್ಥಾ ತಪ್ಪಿದ್ದಲ್ಲ. ಸಂಶಯ ಹುಟ್ಟುವುದಿಲ್ಲ ಎಂಬ ಎರಡನೆಯ ಪಕ್ಷವನ್ನು ಈಗಾಗಲೇ ನಿರಾಕರಿಸಿದ್ದಾಗಿದೆ.

ಪ್ರಾಮಾಣ್ಯನಿಶ್ಚಯಕ್ಕೆ ಸಂವಾದವು ಬೇಕೆಂದರೆ ವಿಕಲ್ಪದಿಂದ ನಿರಾಕರಣೆ

**तत्वप्रकाशिका – अपि च संवादकमप्रामाण्यशङ्कां निवर्तयति प्रामाण्यं ज्ञापयति वा ।**

ಪ್ರಾಮಾಣ್ಯವನ್ನು ನಿಶ್ಚಯಿಸಲು ಮತ್ತೊಂದು ಸಂವಾದಪ್ರಮಾಣವು ಬೇಕೇಬೇಕು ಎಂದು ಹೇಳುವುದಾದರೆ ಯಾವ ಕಾರಣಕ್ಕಾಗಿ ಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಅಪ್ರಾಮಾಣ್ಯಶಂಕೆಯನ್ನು ಪರಿಹರಿಸಲೋ ? ಅಥವಾ ಇರುವ ಪ್ರಾಮಾಣ್ಯವನ್ನು ತಿಳಿಸಲೋ ?

ಸಂವಾದಾಪೇಕ್ಷೆಯ ನಿರಾಕರಣೆ

**तत्वप्रकाशिका – आद्ये प्रामाण्यस्य स्वतस्त्वप्राप्तिः । द्वितीये शङ्काभावेऽपि संवादापेक्षा स्यात् ।**

ಮೊದಲನೆಯ ಪಕ್ಷದಲ್ಲಿ ಸಂವಾದಕಪ್ರಮಾಣವು ಅಪ್ರಾಮಾಣ್ಯಶಂಕೆಯನ್ನಷ್ಟೇ ಪರಿಹರಿಸುತ್ತದೆಂದು ಹೇಳುತ್ತಿರುವುದರಿಂದ ಪ್ರಾಮಾಣ್ಯಸ್ವತಸ್ತ್ವವನ್ನೇ ಒಪ್ಪಿದಂತಾಯಿತು.

ಎರಡನೆಯ ಪಕ್ಷದಲ್ಲಿ ಇರುವ ಪ್ರಾಮಾಣ್ಯವನ್ನು ತಿಳಿಸಲು ಮತ್ತೊಂದು ಸಂವಾದ ಪ್ರಮಾಣವು ಬೇಕೆಂದು ಹೇಳಿದಂತಾಗುತ್ತದೆ. ಆವಾಗ ಯಾವ ಸ್ಥಳದಲ್ಲಿ ಸಂಶಯವೇ ಇರುವುದಿಲ್ಲವೋ ಅಂಥ ಸ್ಥಳದಲ್ಲಿಯೂ ಸಂವಾದವು ಬೇಕು ಎಂದು ಹೇಳಿದಂತಾಗುತ್ತದೆ.

ಸಂವಾದಕವು ಉಭಯತ್ರ ವ್ಯಾಪಾರವುಳ್ಳದ್ದಾಗಿದೆ ಎಂದು ಆಕ್ಷೇಪ

**तत्वप्रकाशिका – संवादकमुभयत्रापि प्रवर्तत इति चेन्न ।**

ಅಪ್ರಾಮಾಣ್ಯಶಂಕೆಯ ನಿವೃತ್ತಿಗಾಗಿ ಹಾಗೂ ಇರುವ ಪ್ರಾಮಾಣ್ಯದ ಗ್ರಹಣಕ್ಕಾಗಿ ಎರಡೂ ಪಕ್ಷಗಳಲ್ಲಿಯೂ ಮತ್ತೊಂದು ಸಂವಾದಪ್ರಮಾಣವು ಬೇಕೆಂದು ಹೇಳಬೇಕು. ಹೀಗೆ ಎರಡೂ ಪಕ್ಷವನ್ನು ಒಪ್ಪುವುದು ಸರಿಯಲ್ಲ.

ಬಾಧಕದಂತೆ ಏಕೆ ಹೇಳಬಾರದು ?

**तत्वप्रकाशिका – कल्पकाभावात् । बाधकवदुभयत्र व्यापारः किं न स्यादिति चेन्न ।**

ಹೀಗೆ ಕಲ್ಪಿಸಲು ಯಾವುದೇ ಪ್ರಮಾಣ ಇರುವುದಿಲ್ಲ.

ವಿಸಂವಾದಾದಿಬಾಧಕಕ್ಕೆ ಪ್ರಾಮಾಣ್ಯಶಂಕೆಯ ನಿರಾಸೆಯಲ್ಲಿ ಮತ್ತು ಅಪ್ರಾಮಾಣ್ಯಜ್ಞಾನದಲ್ಲಿ ವ್ಯಾಪಾರ ಇರುವುದು ಅನ್ವಯವ್ಯೇತಿರೇಕದಿಂದ ಸಿದ್ಧವಾಗಿದೆ. ಅದರಂತೆ ಸಂವಾದಪ್ರಮಾಣವೂ ಕೂಡ ಅಪ್ರಾಮಾಣ್ಯಶಂಕೆಯ ನಿವೃತ್ತಿ ಹಾಗೂ ಪ್ರಾಮಾಣ್ಯದ ನಿಶ್ಚಯ ಎರಡರಲ್ಲೂ ವ್ಯಾಪಾರವನ್ನು ಹೊಂದಿದೆ. ಏಕೆಂದರೆ 'ತತ್‌ಸತ್ವೇ ತತ್‌ಸತ್ವಮ್ ತದಭಾವೇ ತದಭಾವಃ' ಎಂಬ ಅನ್ವಯವ್ಯತಿರೇಕವು ಇರುತ್ತದೆ ಹೀಗೆ ಹೇಳಬಹುದಲ್ಲವೆ ?

ವ್ಯತಿರೇಕ ವ್ಯಭಿಚಾರ

**तत्वप्रकाशिका – अप्रामाण्यशङ्काशून्यस्य प्रामाण्यज्ञाने संवादनिरपेक्षत्वात्।**

ಈ ಶಂಕೆ ತಪ್ಪು. ಯಾವ ಸ್ಥಳದಲ್ಲಿ ಅಪ್ರಾಮಾಣ್ಯದ ಶಂಕೆಯೇ ಹುಟ್ಟುವುದಿಲ್ಲವೋ ಅಂಥ ಸ್ಥಳದಲ್ಲಿ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಮತ್ತೊಂದು ಸಂವಾದವು ಬೇಕಾಗಿರುವುದಿಲ್ಲ. ಉದಾಹರಣೆ

- ಸುಖಾದಿಜ್ಞಾನದಲ್ಲಿ ಅಪ್ರಾಮಾಣ್ಯಶಂಕೆಯು ಸ್ವಾಭಾವಿಕವಾಗಿಯೇ ಇಲ್ಲದಿರುವುದರಿಂದ ಪ್ರಾಮಾಣ್ಯದ ನಿಶ್ಚಯವು ಸ್ವತಃ ಬರುತ್ತದೆ. ಅಪ್ರಾಮಾಣ್ಯಶಂಕೆಯ ನಿವೃತ್ತಿಗೆ ಸಂವಾದವು ಕಾರಣವೇ ಆಗಿರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಭಿಚಾರವು ಬರುತ್ತದೆ.

### ಉಭಯತ್ರ ವ್ಯಾಪಾರದ ಆಶಂಕೆಗೆ ಉತ್ತರ

**ತತ್ವಪ್ರಕಾಶಿಕಾ – ಬಾಧಕೇನ ವಿನಾ ನಿವೃತ್ತಾಪ್ರಾಮಾಣ್ಯಶಙ್ಕಸ್ಯಾಪ್ಯಪ್ರಾಮಾಣ್ಯ-ಬುಧ್ಯನುದಯಾನುಭವಾತ್ ।**

ಯಾವುದೇ ಸಂವಾದಪ್ರಮಾಣವಿಲ್ಲದೆ ಸುಖಾದಿಗಳ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಯವಾಗುವುದು ಕಂಡಿದೆ. ಆದ್ದರಿಂದ ವ್ಯತಿರೇಕವ್ಯಭಿಚಾರ ಹೇಗೆ ಬರುತ್ತದೋ, ಅದರಂತೆ ಬಾಧಕವಿಲ್ಲದೆ ಅಪ್ರಾಮಾಣ್ಯಜ್ಞಾನವೂ ಕೂಡ ಬರುವುದಾದರೆ ವ್ಯತಿರೇಕವ್ಯಭಿಚಾರ ಬರುತ್ತದೆ. ಎಲ್ಲಿ ಬಾಧಕಪ್ರಮಾಣ ಇರುವುದಿಲ್ಲವೋ ಅಲ್ಲಿ ಅಪ್ರಾಮಾಣ್ಯನಿಶ್ಚಯ ಬರುವುದಿಲ್ಲ, ಪ್ರಾಮಾಣ್ಯನಿಶ್ಚಯವೇ ಬರುತ್ತದೆ. ಇದು ಎಲ್ಲರ ಅನುಭವದಿಂದ ಸಿದ್ಧವಾದ ವಿಚಾರ. ಆದ್ದರಿಂದ ಬಾಧಕವು ಹೇಗೆ ಪ್ರಾಮಾಣ್ಯಸಂದೇಹದ ನಿರಾಸ ಮತ್ತು ಅಪ್ರಾಮಾಣ್ಯಜ್ಞಾನಗಳಲ್ಲಿ ವ್ಯಾಪಾರ ಹೊಂದಿದೆಯೋ ಅದರಂತೆ ಸಂವಾದಕ್ಕೂ ಕೂಡ ಉಭಯತ್ರ ವ್ಯಾಪಾರವನ್ನು ಹೇಳುತ್ತೇವೆ ಎಂಬ ಆಶಂಕೆಯು ಅತ್ಯಂತ ಅಸಾಧುವೆಂದು ಸಿದ್ಧವಾಯಿತು.

### ಪರತಃ ಪ್ರಾಮಾಣ್ಯಕ್ಕೆ ಅನುಮಾನದ ಆಧಾರ

**ತತ್ವಪ್ರಕಾಶಿಕಾ – ಯದಪಿ ಪ್ರಾಮಾಣ್ಯಂ ಪರತೋ ಜ್ಞಾಯತೇ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಅಪ್ರಾಮಾಣ್ಯವದಿತಿ ।**

ನೈಯಾಯಿಕರು ಪರತಃಪ್ರಮಾಣ್ಯವನ್ನು ಅನುಮಾನದಿಂದ ಹೀಗೆ ಸಾಧಿಸುತ್ತಾರೆ -

'ಪ್ರಾಮಾಣ್ಯಂ ಪರತಃ ಜ್ಞಾಯತೇ ಅನಭ್ಯಾಸದಶಾಯಾಮ್ ಸಾಂಶಯಿಕತ್ವಾತ್ ಅಪ್ರಾಮಾಣ್ಯವತ್' ಅಪ್ರಾಮಾಣ್ಯದಲ್ಲಿ ಸಾಂಶಯಿಕತ್ವ(ಸಂಶಯವಿಶಯತ್ವ) ಎಂಬ ಹೇತುವಿದೆ. ಮತ್ತು ಬಾಧಕಪ್ರಮಾಣವೆಂಬ ಮತ್ತೊಂದರಿಂದ ತಿಳಿಯಲ್ಪಟ್ಟಿರುವುದರಿಂದ ಸಾಧ್ಯವಿದೆ. ಇದೇ ರೀತಿಯಾಗಿ ಪ್ರಾಮಾಣ್ಯ ಎಂಬ ಪಕ್ಷದಲ್ಲಿ 'ಅನಭ್ಯಾಸದಶಾಯಾಂ ಸಾಂಶಯಿಕತ್ವ' ಎಂಬ

ಹೇತುವಿದೆ. ಯಾವ ವಿಷಯದಲ್ಲಿ ಹೆಚ್ಚಿನ ಅಭ್ಯಾಸವಿರುವುದಿಲ್ಲವೋ ಆ ವಿಷಯದ ಬಗ್ಗೆ ಜ್ಞಾನವು ಪ್ರಾಪ್ತವಾದಾಗ ಅದರ ಪ್ರಾಮಾಣ್ಯದಲ್ಲಿ ನಮಗೆ ಸಂದೇಹ ಬರುತ್ತದೆ. ಆದ್ದರಿಂದ ಸಂವಾದದಿಂದಲೇ ಪ್ರಾಮಾಣ್ಯವು ತಿಳಿಯಲ್ಪಡಬೇಕೆಂದು ಸಾಧಿಸುತ್ತೇವೆ. ಹೀಗಿರುವಾಗ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುವ ಸಿದ್ಧಾಂತ ಸರಿಯಲ್ಲ. ಇಷ್ಟು ನೈಯಾಯಿಕರ ಆಕ್ಷೇಪ

### ನೈಯಾಯಿಕರ ನಿರಾಕರಣೆ

**ತत्वप्रकाशिका – तदप्युक्तप्रतिकूलतर्कपराहतमनुकूलतर्कशून्यं च । संशयस्य च दोषादेवोपपत्तेः ।**

ಹಿಂದೆ ನಿರೂಪಣೆ ಮಾಡಿದ ಪ್ರಕಾರ ಸಂವಾದದಿಂದ ಪ್ರಾಮಾಣ್ಯವನ್ನು ನಿಶ್ಚಯ ಮಾಡುವುದಾದರೆ ಆ ಸಂವಾದಪ್ರಮಾಣದ ಪ್ರಾಮಾಣ್ಯಕ್ಕೆ ಮತ್ತೊಂದು ಸಂವಾದಪ್ರಾಮಾಣ್ಯ ಬೇಕು. ಆದ್ದರಿಂದ ಅನವಸ್ಥಾದೋಷ ತಪ್ಪಿದ್ದಲ್ಲ. ಹೀಗೆ ಪ್ರತಿಕೂಲತರ್ಕದಿಂದ ನೈಯಾಯಿಕರ ಅನುಮಾನವು ಪರಾಹತವಾಗುತ್ತದೆ. ಮತ್ತು ಅನುಮಾನದಲ್ಲಿ 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿರಲಿ ಪರತಸ್ತ್ವವೆಂಬ ಸಾಧ್ಯವಿರುವುದು ಬೇಡ ಎಂದು ಅಪ್ರಯೋಜಕಾಶಂಕೆಯನ್ನು ಮಾಡಿದರೆ ನಿಮಗೆ ಅನುಕೂಲತರ್ಕವನ್ನು ಹೇಳಲು ಸಾಧ್ಯವಿಲ್ಲ.

### ಧರ್ಮಿಜ್ಞಾನವಿದ್ದರೆ ಪ್ರಾಮಾಣ್ಯದ ನಿಶ್ಚಯ ಇದ್ದೇ ಇರುತ್ತದೆ

**तत्वप्रकाशिका – स्वतस्त्वेनाभ्युपगतोपमानानुमानप्रामाण्येऽपि संशयदर्शनाच्च।**

ಧರ್ಮಿಯ ಜ್ಞಾನವಿದೆ ಆದರೆ ಪ್ರಾಮಾಣ್ಯವು ನಿಶ್ಚಯವಾಗಿಲ್ಲ. ಹೀಗೆ ಅನುಕೂಲತರ್ಕವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೆ ಹೇಳಿದರೆ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದೆ.

'ಅನಭ್ಯಾಸದಶಾಯಾಮ್ ಸಾಂಶಯಿಕತ್ವ' ಎಂಬ ಹೇತುವಿರಲಿ ಸಾಧ್ಯವಿರುವುದು ಬೇಡ ಎಂದು ಹೇಳಿದರೆ 'ಅನಭ್ಯಾಸದಶಾಯಾಮ್ ಸಾಂಶಯಿಕತ್ವ' ಎಂಬ ಹೇತುವೂ ಕೂಡ ಇರುವುದು ಬೇಡ ಎಂದು ಅನುಕೂಲತರ್ಕವನ್ನು ಹೇಳುತ್ತೇವೆ. ಎಲ್ಲಿ ಧರ್ಮಿಯ ಜ್ಞಾನ ಬರುತ್ತದೋ ಅಲ್ಲಿ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಹೀಗೆ ಹೇಳಿದರೆ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಬರುತ್ತದೆ. ಅದಕ್ಕಾಗಿ ಧರ್ಮಿಯ ಜ್ಞಾನ ಬಂದಿರುವ ಸ್ಥಳದಲ್ಲಿ ಪ್ರಾಮಾಣ್ಯವು ಗೃಹೀತವಾಗಿದೆ ಎಂದೇ ಹೇಳಬೇಕು. ಆವಾಗ ಎರಡು ಕೋಟಿಗಳಲ್ಲಿ ಒಂದು ನಿಶ್ಚಯವಾಗಿದೆ

ಎಂದು ಒಪ್ಪಿದಂತಾಯಿತು. ಆಗ ಸಂಶಯ ಮೂಡಲು ಸಾಧ್ಯವಿಲ್ಲ. ಆದರೆ ನಮ್ಮೆಲ್ಲರ ಅನುಭವದಿಂದ ಸಂಶಯ ಬರುವುದು ಸಿದ್ಧವಾಗಿದೆ. ಆದ್ದರಿಂದ ಪ್ರಾಮಾಣ್ಯವನ್ನು ಸ್ವತಃ ಎಂದು ಹೇಳಲು ಬರುವುದಿಲ್ಲ. ಹೀಗೆ ಅನುಕೂಲತರ್ಕವನ್ನು ಹೇಳುತ್ತೇವೆ.

ಈ ಆಶಂಕೆಯು ತಪ್ಪು. ಧರ್ಮಿಜ್ಞಾನವಿದ್ದರೂ ತಾತ್ಪರ್ಯಭ್ರಮ ಮೊದಲಾದ ದೋಷದಿಂದಾಗಿ ಸಂಶಯವು ಹುಟ್ಟಬಹುದಾದ್ದರಿಂದ ಅನುಕೂಲತರ್ಕವನ್ನು ಹೇಳಲು ಸಾಧ್ಯವಿಲ್ಲ.

ಪ್ರಾಚೀನತಾರ್ಕಿಕರು ಉಪಮಿತಿ ಮತ್ತು ಅನುಮಿತಿಗಳಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿರುತ್ತಾರೆ. ಆದರೂ ಅಲ್ಲಿ ಪ್ರಾಮಾಣ್ಯಸಂಶಯವು ಬರುತ್ತದೆ. ಏಕೆಂದರೆ ಬೌದ್ಧ ಚಾರ್ವಾಕ ಮೊದಲಾದ ದಾರ್ಶನಿಕರು ಅನುಮಾನವನ್ನು ಅಪ್ರಮಾಣವೆನ್ನುತ್ತಾರೆ. ಇದನ್ನು ಕೇಳಿದ ಮೂರನೇ ವ್ಯಕ್ತಿಗೆ ಅನುಮಾನವು ಪ್ರಮಾಣವೂ ಅಲ್ಲವೋ ? ಎಂಬ ಸಂಶಯವು ವಿಪ್ರತಿಪತ್ತಿಯಿಂದ ಹುಟ್ಟುತ್ತದೆ. ಹೀಗೆ ಸಂಶಯವು ಅನುಭವಸಿದ್ಧವಾಗಿದ್ದರೂ ಅನುಮಿತಿ-ಪ್ರಾಮಾಣ್ಯವನ್ನು ಸ್ವತಃ ಎಂದು ಹೇಗೆ ಒಪ್ಪಿದ್ದಾರೊ, ಅದರಂತೆ ನಾವೂ ಕೂಡ ಸಹ ಧರ್ಮಿಜ್ಞಾನವಿದ್ದರೂ ಪ್ರಾಮಾಣ್ಯವಿಷಯದಲ್ಲಿ ಸಂಶಯವಿದ್ದರೂ ಕೂಡ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುತ್ತೇವೆ.

### ಹೇತುವಿಗೆ ಭಾಗಾಸಿದ್ಧಿದೋಷ

**तत्वप्रकाशिका – अनभ्यासदशायामपि सन्देहाभावस्यापि दर्शनाचेत्यलम् ।**

ಇನ್ನು 'ಅನಭ್ಯಾಸದಶಾಯಾಮ್ ಸಾಂಶಯಿಕತ್ವಾತ್' ಎಂಬ ಹೇತುವಿನಲ್ಲಿ 'ಅನಭ್ಯಾಸದಶಾಯಾಂ' ಎಂಬ ವಿಶೇಷಣದಿಂದ 'ಅಭ್ಯಾಸವಿಲ್ಲದ ಸ್ಥಳದಲ್ಲಿ' ಎಂದು ಹೇಳಿರುತ್ತಾರೆ. ಇದಕ್ಕೆ ಭಾಗಾಸಿದ್ಧಿ ದೋಷ ಬರುತ್ತದೆ. ಏಕೆಂದರೆ ಆಗ ತಾನೇ ಹುಟ್ಟಿದ ಮಡಿಕೆಯನ್ನು ನೋಡಿ ಇದು ಘಟವೆಂದು ನಾವು ತಿಳಿಯುತ್ತೇವೆ. ಈ ಜ್ಞಾನವು ಪ್ರಮಾಣವೋ ಅಲ್ಲವೋ ? ಎಂಬ ಸಂಶಯ ನಮಗಿರುವುದಿಲ್ಲ. ಆದರೆ ಈ ಮಡಿಕೆಯನ್ನು ಹಿಂದೆ ನೋಡದ ಕಾರಣ ಅನಭ್ಯಾಸದಶಾಪನ್ನವಾಗಿದೆ. ಆದರೂ ಸಂಶಯವಿಲ್ಲದ ಕಾರಣ ಹೇತುವಿಗೆ ಭಾಗಾಸಿದ್ಧಿದೋಷ ಬರುತ್ತದೆ. ಇಷ್ಟು ಪ್ರಾಮಾಣ್ಯಸ್ವತಸ್ತ್ವದ ಸಂಕ್ಷೇಪ. ಹೆಚ್ಚಿನ ವಿಚಾರಗಳನ್ನು ಬೇರೆ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರ ಭಾಗದ ವ್ಯಾಖ್ಯಾನ

**तत्वप्रकाशिका – वेदस्य स्वतःप्रामाण्ये सूत्रसूचितां श्रुतिं चाह – नेति।।**

ವೇದವು ಸ್ವತಃಪ್ರಮಾಣವಾಗಿದೆ ಎಂಬ ವಿಷಯದಲ್ಲಿ 'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಭಾಗವು ಶ್ರುತಿಯನ್ನು ಪ್ರಮಾಣವನ್ನಾಗಿ ಉಲ್ಲೇಖ ಮಾಡಿದೆ. ಅದನ್ನು ಶ್ರೀಮದಾನಂದತೀರ್ಥರು 'ನ ಚಕ್ಷುಃ ನ ಶ್ರೋತ್ರಂ' ಇತ್ಯಾದಿ ಭಾಷ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ನ ಚಕ್ಷುಃ ನ ಶ್ರೋತ್ರಮ್ ನ ತರ್ಕೋ ನ ಸ್ಮೃತಿಃ ವೇದಾಹ್ಯೇವೇನಂ ವೇದಯಂತಿ' ಎಂಬುದು ವೇದದ ಪ್ರಾಮಾಣ್ಯಸ್ವತಸ್ತ್ವದಲ್ಲಿ ಪ್ರಮಾಣವಾಗಿದೆ.

ವೇದಗಳಿಗೆ ಸಂವಾದ ಪ್ರಮಾದದ ಅಪೇಕ್ಷೆ ಇಲ್ಲವೆಂದು ಸಿದ್ಧವಾಯಿತು

**तत्वप्रकाशिका – अत्र चक्षुरादीनां परमात्माऽप्रमापकत्वमुक्त्वा वेदस्यैव तत् प्रमापकत्वोक्तेः संवादानपेक्षतया प्रामाण्यमित्युक्तं भवति । वेदस्य नित्यत्वं कुत इत्यत आह – नित्यत्वश्चेति ।**

'ಪರಮಾತ್ಮನನ್ನು ತಿಳಿಯಲು ಚಕ್ಷುರಿಂದ್ರಿಯ ಶ್ರೋತ್ರೇಂದ್ರಿಯ ಮೊದಲಾದವುಗಳಿಗೆ ಸಾಧ್ಯವಿಲ್ಲ. ಅನುಮಾನದಿಂದಲೂ ಸಾಧ್ಯವಿಲ್ಲ. ಸ್ಮೃತಿಗಳಿಂದ ಸಾಧ್ಯವಿಲ್ಲ. ಕೇವಲ ವೇದಗಳು ಪರಮಾತ್ಮನನ್ನು ತಿಳಿಸಲು ಸಮರ್ಥವಾಗಿವೆ' ಎಂಬುದು ಶ್ರುತಿಯ ಅರ್ಥ. ಈ ಶ್ರುತಿಯಲ್ಲಿ ಕಣ್ಣು ಮೊದಲಾದ ಯಾವುದೇ ಇಂದ್ರಿಯಗಳು ಪರಮಾತ್ಮನನ್ನು ತಿಳಿಸುವುದಿಲ್ಲವೆಂದು ಹೇಳಿದ್ದರಿಂದ ಪರಮಾತ್ಮನನ್ನು ತಿಳಿಸುವ ವೇದಗಳಿಗೆ ಸಂವಾದಪ್ರಮಾಣವೇ ಇಲ್ಲವೆಂದು ಹೇಳಿದಂತಾಯಿತು. ಆದರೂ ವೇದಗಳು ಪರಮಾತ್ಮನ ವಿಷಯದಲ್ಲಿ ಪ್ರಮಾಣವೆಂದು ಹೇಳಿದ್ದರಿಂದ ಮತ್ತೊಂದು ಪ್ರಮಾಣದ ಅಪೇಕ್ಷೆ ಇಲ್ಲದೆ ವೇದಗಳು ಸ್ವತಃ ಪ್ರಮಾಣವಾಗಿವೆ ಎಂದು ಪ್ರಾಮಾಣ್ಯಸ್ವತಸ್ತ್ವವನ್ನು ಪ್ರತಿಪಾದನೆ ಮಾಡಿದಂತಾಯಿತು. (ವೇದವು ಅಪೌರುಷೇಯವೆಂಬುದು ಹೇಗೆ ಸಿದ್ಧವಾಯಿತು? ಎಂಬ ಪ್ರಶ್ನೆಗೆ 'ನಿತ್ವತ್ವಂ ಚ ಶಬ್ದಾದೇವ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ವೇದಗಳ ಅಪೌರುಷೇಯತ್ವವೂ ಕೂಡ ವೇದದಿಂದಲೇ ಸಿದ್ಧವಾಗಿದೆ ಎಂಬುದು ಭಾಷ್ಯಕಾರರ ಅಭಿಪ್ರಾಯ)

### 'ತಸ್ಮೈ ನೂನಮ್ ಅಭಿದ್ಯವೇ' ಎಂಬ ಶ್ರುತ್ಯರ್ಥ

**तत्वप्रकाशिका – अनेन तथात्वमित्युभयतः सम्बध्यते इत्युक्तं भवति । तस्मै सर्वतः प्रकाशायातिसमर्थाय विष्णवे नित्यया वेदवाचा साध्वीं स्तुतिं प्रेरय कुर्वित्यर्थः ।**

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಸೂತ್ರದಲ್ಲಿರುವ 'ತಥಾತ್ವಮ್' ಎಂಬ ಪದಕ್ಕೆ ಎರಡು ಕಡೆ ಸಂಬಂಧವನ್ನು ಹೇಳಿದಂತಾಯಿತು. ಒಮ್ಮೆ ಸಂಬಂಧವನ್ನು ಹೊಂದಿರುವ 'ತಥಾತ್ವಮ್' ಎಂಬ ಪದಕ್ಕೆ 'ವೈಲಕ್ಷಣ್ಯ' ಎಂದರ್ಥ. ಮತ್ತೊಂದು ಬಾರಿ ಸಂಬಂಧವನ್ನು ಹೊಂದುವ 'ತಥಾತ್ವಮ್' ಎಂಬುದಕ್ಕೆ ನಿತ್ಯತ್ವ ಎಂದರ್ಥ.

ಭಾಷ್ಯದಲ್ಲಿ ಉದಾಹರಿಸಿದ 'ತಸ್ಮೈ ನೂನಮ್ ಅಭಿದ್ಯವೇ' ಎಂಬ ಶ್ರುತಿಯ ಅರ್ಥ ಹೀಗಿದೆ - 'ವಿರೂಪ' ಎಂಬುದಾಗಿ ತನ್ನನ್ನೇ ತಾನು ಸಂಬೋಧಿಸಿ ಎಲ್ಲಾ ರೀತಿಯಿಂದಲೂ ಪ್ರಕಾಶಮಾನನಾದ ಅತ್ಯಂತ ಸಮರ್ಥನಾದ ವಿಷ್ಣುವನ್ನು ಕುರಿತು ನಿತ್ಯವಾದ ವೇದಮಾತುಗಳಿಂದ ಒಳ್ಳೆಯ ಸ್ತೋತ್ರವನ್ನು ಮಾಡು. ಹೀಗೆ ವಿರೂಪ ಎಂಬ ಋಷಿಯು ಹೇಳಿರುತ್ತಾರೆ.

### 'ಅನಾದಿನಿಧನಾ ನಿತ್ಯಾ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**तत्वप्रकाशिका – विरूपेति स्वात्मानं प्रति सम्बोधनम् । बहुकालीनत्वमात्रेण नित्यत्वोपचारः किं न स्यादित्यत आह – अनादीति ।।**

ಈ ಶ್ರುತಿಯಲ್ಲಿ ನಿತ್ಯವೆಂಬ ಪದದಿಂದ ವೇದಗಳಿಗೆ ಅಪೌರುಷೇಯತ್ವವನ್ನು ಹೇಳಲಾಗಿದೆ. ಬಹುಕಾಲದಿಂದ ಇರುವುದರಿಂದಲೂ ನಿತ್ಯವೆಂದು ಔಪಚಾರಿಕವಾಗಿ ಕರೆಯಲಾಗಿದೆ ಎಂದು ಏಕೆ ವ್ಯಾಖ್ಯಾನ ಮಾಡಬಾರದು ? ಎಂಬ ಪ್ರಶ್ನೆಗೆ 'ಅನಾದಿನಿಧನಾ ನಿತ್ಯಾ ಇತಿ ಸ್ಮೃತೇಶ್ಚ' ಎಂಬುದಾಗಿ ಭಾಷ್ಯದಲ್ಲಿ ಉತ್ತರ ನೀಡಿದ್ದಾರೆ.

### ನಿತ್ಯಪದದ ಅರ್ಥ

**तत्वप्रकाशिका – अनादिनिधनतया नित्या न तु बहुकालीनतामात्रेण नित्यत्वोपचार इत्यर्थः ।**

ನಿತ್ಯಪದಕ್ಕೆ ಉತ್ಪತ್ತಿನಾಶವಿಲ್ಲದ್ದು ಎಂದರ್ಥ. ಬಹುಕಾಲ ಇರುವುದೆಂಬ ಔಪಚಾರಿಕಾರ್ಥವನ್ನು ನಿತ್ಯಪದಕ್ಕೆ ತಿಳಿಯಬಾರದು.

### ಯುಕ್ತಿಸಿದ್ಧವಾದದ್ದರಲ್ಲಿ ವೇದಪ್ರಾಮಾಣ್ಯ

**तत्वप्रकाशिका – न च वाच्यं वेदप्रामाण्ये विव(दन्तं)दमानं प्रति कथं तत्प्रामाण्योपपादनायोपन्यस्तयोर्नित्यत्वस्वतःप्रामाण्ययोः साक्षितया श्रुत्युपादानं युक्तमिति । परेणापि फलव्यभिचारेणाप्रामाण्ये वेदस्यापि तत्प्रसङ्ग इत्यापादनमात्रस्य क्रियमाणत्वात् । युक्तेश्चोपन्यस्तत्वात् ।। ४ ।।**

ವೇದಪ್ರಾಮಾಣ್ಯವಿಷಯದಲ್ಲಿ ವಿವಾದ ಮಾಡುವವನನ್ನು ಕುರಿತು ನಿತ್ಯತ್ವವಿಷಯದಲ್ಲಿ ಮತ್ತು ಸ್ವತಃ ಪ್ರಾಮಾಣ್ಯವಿಷಯದಲ್ಲಿ ವೇದವನ್ನು ಉದಾಹರಿಸುವುದು ತಪ್ಪು. ಏಕೆಂದರೆ ಪ್ರಾಮಾಣ್ಯವು ಸಿದ್ಧವಾದ ಮೇಲೆ ಅಂಥ ವೇದದಿಂದ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುತ್ತದೆ. ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾದ ಮೇಲೆ ವೇದವು ಪ್ರಮಾಣವೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆಂದು ಆಕ್ಷೇಪ ಮಾಡಬಾರದು.

ವೇದಪ್ರಾಮಾಣ್ಯವನ್ನು ಒಪ್ಪಿ ಪಾಶುಪತಾದಿಸ್ಮತಿಗಳು ಪ್ರಮಾಣವಲ್ಲವೆಂದು ಹೇಳಿದರೆ ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನ ಮಾಡಿದರೂ ಫಲವು ದೊರೆಯದ ಕಾರಣ ಪಾಶುಪತಾದಿ ಸ್ಮೃತಿಗಳಂತೆ ವೇದವೂ ಸಹ ಅಪ್ರಮಾಣವಾಗಬೇಕಾದೀತು ಎಂದು ಈ ಅಧಿ ಕರಣದ ಪೂರ್ವಪಕ್ಷಿಯು ಆಪಾದನೆ ಮಾಡುತ್ತಿದ್ದಾನೆ. ಆದ್ದರಿಂದ ವೇದಪ್ರಾಮಾಣ್ಯವಿಷಯದಲ್ಲಿ ಪೂರ್ವಪಕ್ಷಿಗೆ ವಿವಾದವಿರುವುದಿಲ್ಲ. ಅಂಥವನನ್ನು ಕುರಿತು ಅಪೌರುಷೇಯತ್ವವನ್ನು ಹಾಗೂ ಸ್ವತಃಪ್ರಾಮಾಣ್ಯವನ್ನು ನಾವು ವೇದದಿಂದ ಸಮರ್ಥಿಸುವುದು ತಪ್ಪಾಗುವುದಿಲ್ಲ. ವೇದದ ನಿತ್ಯತ್ವ ಹಾಗೂ ಸ್ವತಃಪ್ರಾಮಾಣ್ಯಗಳನ್ನೂ ಯುಕ್ತಿಯಿಂದ ಈಗಾಗಲೇ ಸಮರ್ಥಿಸಿದ್ದಾಗಿದೆ. ಯುಕ್ತಿಸಿದ್ಧವಾದ ವಿಷಯದಲ್ಲಿ ವೇದಪ್ರಮಾಣವನ್ನು ಹೇಳಿದರೆ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

**ಈ ಅಧಿಕರಣದ ಸಂಗತಿ :-**

।। न विलक्षणत्वादस्य तथात्वं च शब्दात् ॐ ।। ४ ।।

**भावदीपः** – ।। न विलक्षणत्वात् ।। **उक्तेति।।** शास्त्रयोनिसूत्र इत्यर्थः ।। **युक्तीति।।** तदुक्तानुपलब्धेरप्रामाण्यमिति भाष्ये वक्ष्यमाणयुक्तीत्यर्थः। अत्र विष्णोरित्युक्त्या शास्त्रे युक्तीत्युक्त्या पादे विरोधेत्याद्युक्त्याऽध्याये च सङ्गतिरुपपादिता बोध्या। एवमग्रेऽपि। पूर्वसङ्गतिमाह – **श्रुत्यादीति।।**

ಟೀಕೆಯಲ್ಲಿ 'ಉಕ್ತವೇದಾದಿಪ್ರಾಮಾಣ್ಯಸ್ಯ' ಎಂದು ಹೇಳಿದ್ದಾರೆ. ಇಲ್ಲಿರುವ 'ಉಕ್ತ' ಎಂಬ ಪದಕ್ಕೆ ಶಾಸ್ತ್ರಯೋನಿ ಸೂತ್ರದಲ್ಲಿ ಹೇಳಲ್ಪಟ್ಟ ಎಂದರ್ಥ. 'ಯುಕ್ತಿವಿರೋಧಪರಿಹಾರಾತ್' ಎಂದು ಟೀಕೆಯಲ್ಲಿದೆ. ವೇದದಲ್ಲಿ ಹೇಳಲ್ಪಟ್ಟ ಅನುಷ್ಠಾನವನ್ನು ಆಚರಣೆ ಮಾಡಿದರೂ ಫಲವು ದೊರಕುತ್ತಿಲ್ಲ. ಆದ್ದರಿಂದ ಆ ವೇದಭಾಗಕ್ಕೆ ಅಪ್ರಾಮಾಣ್ಯವು ಬರುತ್ತದೆ ಎಂಬ ಯುಕ್ತಿವಿರೋಧವನ್ನು ಭಾಷ್ಯದಲ್ಲಿ ಮುಂದೆ ಹೇಳುತ್ತಿದ್ದಾರೆ. ಆ ಯುಕ್ತಿಯನ್ನು ಇಲ್ಲಿರುವ 'ಯುಕ್ತಿ' ಪದದ ಅರ್ಥವನ್ನಾಗಿ ತಿಳಿಯಬೇಕು.

ಈ ಅಧಿಕರಣದಲ್ಲಿರುವ ಶಾಸ್ತ್ರಾದಿಸಂಗತಿಗಳನ್ನು ಟೀಕೆಯಲ್ಲಿ 'ಅತ್ರ ವಿಷ್ಣೋಃ' ಇತ್ಯಾದಿ ವಾಕ್ಯದಿಂದಲೇ ತಿಳಿಸಿರುತ್ತಾರೆ. ಅದು ಹೀಗೆ – 'ಅತ್ರ ವಿಷ್ಣೋಃ' ಎಂಬ ಮಾತಿನಿಂದ ವಿಷ್ಣುವಿನ ಜಗತ್ಕಾರಣತ್ವದ ಪ್ರತಿಪಾದನೆಗಾಗಿಯೇ ಈ ಅಧಿಕರಣ ಹೊರಟಿರುವುದರಿಂದ ಇದಕ್ಕೆ ಶಾಸ್ತ್ರಸಂಗತಿ ಇದೆ. ಇದನ್ನು 'ಅತ್ರ ವಿಷ್ಣೋಃ' ಎಂಬ ಪದದಿಂದಲೇ ತಿಳಿಸಿದ್ದಾರೆ. ಯುಕ್ತಿವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿದ್ದಾರೆ. ಆದ್ದರಿಂದ ಇದಕ್ಕೆ ಅಧ್ಯಾಯ ಸಂಗತಿಯು ಇರುತ್ತದೆ. ಇದನ್ನು 'ವಿರೋಧಪರಿಹಾರಾತ್' ಎಂಬ ಪದದಿಂದಲೇ ತಿಳಿಸಿದ್ದಾರೆ. ಯುಕ್ತಿಯ ವಿರೋಧವನ್ನು ಪರಿಹರಿಸುತ್ತೇವೆ ಎಂದು ಹೇಳಿದ್ದರಿಂದ ಯುಕ್ತಿ ಎಂಬ ಪದದಿಂದ ಪಾದಾಂತರ್ಭಾವಸಂಗತಿಯನ್ನು ತಿಳಿಸಿದ್ದಾರೆ. ಹೀಗೆ ಟೀಕೆಯಲ್ಲಿ ಉಪಪಾದನೆ ಮಾಡಿದ ಸಂಗತಿಯ ಕ್ರಮವನ್ನು ಸೂಕ್ಷ್ಮವಾಗಿ ಗಮನಿಸಬೇಕು. ಇದರಂತೆ ಮುಂದಿನ ಅಧಿಕರಣಗಳಲ್ಲಿರುವ ಟೀಕಾಪಂಕ್ತಿಗಳಿಂದಲೂ ಕೂಡ ಸಂಗತಿಯ ವಿಚಾರವನ್ನು ತಿಳಿಯತಕ್ಕದ್ದು. ಈಗ ಹಿಂದಿನ ಅಧಿಕರಣದಿಂದ ಆವಶ್ಯಕವಾಗಿರುವ ಸಂಗತಿಯನ್ನು 'ಶ್ರುತ್ಯಾದಿ' ಎಂಬ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

### ಏವಂ ಶ್ರುತೇಃ ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – न ब्रह्मण** इति विच्छेदः। सौत्रतथात्वपदेन प्राक्तनसाध्यहेत्वोरपि स्मृत्यप्रामाण्यरूपदृष्टान्तस्य च परामर्श इति भावेन प्रवृत्तमेवमित्याद्यप्रामाण्यमित्यन्तभाष्यमाकाङ्क्षाक्रमेण व्यनक्ति॥ **श्रुत्यादिकमिति**।। श्रुतेरित्येतद् व्यनक्ति – **करीर्येति**।। तदनुसारिस्मृतेश्चेत्येतद् व्याचष्टे – **तथेति**।। पाशुपतादिस्मृतिवदित्यर्थ कैवंशब्दार्थं व्यनक्ति – **अविद्यमानेति**।। अप्रयोजकत्वनिरासाय विलक्षणत्वादिति हेतुव्यावर्त्यं श्रुतेः रुद्रादिस्मृतिसाम्यमित्यन्यत्रोक्तं व्यनक्ति॥

'ಯುಕ್ತಿವಿರೋಧೇನ' ಎಂದು ಪದಚ್ಛೇದ ಮಾಡಬಾರದು. 'ಯುಕ್ತಿವಿರೋಧೇ ನ ಬ್ರಹ್ಮಣಃ' ಎಂದು ಪದಚ್ಛೇದ ಮಾಡಬೇಕು. ಸೂತ್ರದಲ್ಲಿರುವ 'ತಥಾತ್ವ' ಎಂಬ ಪದದಿಂದ ಹಿಂದೆ ಪ್ರಸಕ್ತವಾದ ಸಾಧ್ಯ ಮತ್ತು ಹೇತುಗಳನ್ನು ಪರಾಮರ್ಶ ಮಾಡಬೇಕು ಹಾಗೂ ಸ್ಮೃತ್ಯಪ್ರಾಮಾಣ್ಯವೆಂಬ ದೃಷ್ಟಾಂತವನ್ನೂ ಕೂಡ ಪರಾಮರ್ಶೆ ಮಾಡಬೇಕು. ಈ ಅಭಿಪ್ರಾಯದಿಂದ 'ಏವಂ' ಎಂಬಲ್ಲಿಂದ ಪ್ರಾರಂಭ ಮಾಡಿ 'ಅಪ್ರಾಮಾಣ್ಯಂ' ಎಂಬಲ್ಲಿಯ ತನಕ ಇರುವ ಭಾಷ್ಯದ ಮಾತುಗಳು ಹೊರಟಿವೆ. ಈ ಭಾಷ್ಯವಾಕ್ಯದಲ್ಲಿರುವ ಪದಗಳನ್ನು ಆಕಾಂಕ್ಷೆ ಅನುಗುಣವಾಗಿ ಟೀಕೆಯಲ್ಲಿ 'ಶ್ರುತ್ಯಾದಿ ಕಂ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಭಾಷ್ಯದಲ್ಲಿರುವ 'ಶ್ರುತೇಃ' ಎಂಬ ಪದವನ್ನು 'ಕಾರೀರ್ಯಾ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ತದನುಸಾರಿಸ್ಮೃತೇಶ್ಚ' ಎಂಬ ಭಾಷ್ಯದಲ್ಲಿರುವ ಮಾತನ್ನು 'ತಥಾ ಸ್ಮೃತೀನಾಂ ಅಪಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಪಾಶುಪತಾದಿಸ್ಮೃತಿವತ್' ಎಂಬ ಅರ್ಥದಲ್ಲಿರುವ 'ಏವಂ' ಶಬ್ದದ ಅರ್ಥವನ್ನು 'ಅವಿದ್ಯಮಾನ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

### ಸಮಸ್ತವೇದವು ಅಪ್ರಮಾಣವೆಂದು ಪೂರ್ವಪಕ್ಷ

**भावदीपः – अविद्यमानेति**।। श्रुतेरित्युपलक्षणं मत्वा श्रुतिस्मृतीनामित्युक्तम्। अस्त्वेवं दृष्टार्थकभागस्य यतो वा इत्याद्यदृष्टार्थकभागस्य किमायातमित्यत आह – **एवं चेति**।। तत्सामान्यादितरेषु तथात्वमिति जैमिनीयन्यायादिति भावः॥ छ॥

ಭಾಷ್ಯದಲ್ಲಿರುವ 'ಶ್ರುತೇಃ' ಎಂಬುದು ಸ್ಮೃತಿಗೆ ಉಪಲಕ್ಷಕವಾಗಿದೆ ಎಂಬುದರ ಅಭಿಪ್ರಾಯದಿಂದ ಟೀಕೆಯಲ್ಲಿ 'ಶ್ರುತಿಸ್ಮೃತೀನಾಂ' ಎಂದು ಹೇಳಿದ್ದಾರೆ.

ವೇದದಲ್ಲಿರುವ ದೃಷ್ಟಫಲಕವಾದ ಭಾಗಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾಗಲಿ. ಆದರೆ ಅದೃಷ್ಟವಿಷಯಕವಾದ 'ಯತೋ ವಾ ಇಮಾನಿ' ಇತ್ಯಾದಿ ವೇದಭಾಗಗಳಿಗೆ ಇದರಿಂದ ಏನು ಬಾಧಕ? ಎಂಬ ಪ್ರಶ್ನೆಗೆ 'ಏವಂ ಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ತತ್ಸಾಮಾನ್ಯಾದಿತರೇಷು ತಥಾತ್ವಂ' ಎಂಬ ಜೈಮಿನೀಸೂತ್ರದ ನ್ಯಾಯದಂತೆ ವೇದದ ಏಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದರೆ ಸಮಾನನ್ಯಾಯದಿಂದ ಸಕಲವೇದಕ್ಕೂ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂದು ತಿಳಿಯಬೇಕು.

## ಸಾಕ್ಷಿಪ್ರಾಮಾಣ್ಯದಂತೆ ವೇದಪ್ರಾಮಾಣ್ಯ

**भावदीपः** – व्याख्येयसौत्रपदानि दर्शयन् भाष्यं व्याचष्टे – **अस्येति**।। श्रुत्यादेरित्युक्त्या भाष्यदिशा अस्या इत्युक्तिः स्यादिति प्रत्युक्तम्। एवमित्यस्यार्थः पाशुपतादिस्मृतिवदिति। श्रुतेरित्यनेन भाष्ये श्रुतिस्मृतिपदे यथायोगमत्राप्यन्वीयेते इति दर्शितम्। एतेन किन्तु साक्षिप्रत्यक्षसाम्यमेव निरपेक्षत्वादिति न्यायविवरणस्थवाक्यशेषः। कर्तृनिरपेक्षत्वान्नित्यत्वेन साक्षिसाम्यमिति विवृतो भवति॥

ಸೂತ್ರದಲ್ಲಿರುವ ಯಾವ ಪದಗಳನ್ನು ವ್ಯಾಖ್ಯಾನ ಮಾಡಬೇಕೋ ಅವುಗಳನ್ನು ಉಲ್ಲೇಖ ಮಾಡುವ ಮೂಲಕ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಅಸ್ಯ' ಇತ್ಯಾದಿ ಗ್ರಂಥವು ಹೊರಟಿದೆ. 'ಅಸ್ಯ' ಎಂಬ ಪದಕ್ಕೆ 'ಶ್ರುತ್ಯಾದೇಃ' ಎಂಬುದಾಗಿ ಅರ್ಥವನ್ನು ತಿಳಿಸಿದ್ದಾರೆ. ಇದರಿಂದ ಭಾಷ್ಯದ ಪ್ರಕಾರ 'ಅಸ್ಯಾಃ' ಎಂದಾಗಬೇಕಿತ್ತು? ಈ ಪ್ರಶ್ನೆಯನ್ನು ನಿರಾಕರಣೆ ಮಾಡಿದಂತಾಯಿತು. ಭಾಷ್ಯದಲ್ಲಿರುವ 'ಏವಂ' ಎಂಬ ಪದದ ಅರ್ಥವನ್ನು 'ಪಾಶುಪತಾದಿಸ್ಮೃತಿವತ್' ಎಂಬುದಾಗಿ ತಿಳಿಸಿದ್ದಾರೆ. 'ಶ್ರುತೇಃ' ಎಂಬ ಭಾಷ್ಯದಲ್ಲಿ ಶ್ರುತಿಸ್ಮೃತಿಗಳನ್ನು ಹೇಗೆ ವಿವಕ್ಷಿಸಲಾಯಿತೋ ಅದರಂತೆ ಇಲ್ಲಿಯೂ ಕೂಡ ಅನ್ವಯಾನುಗುಣವಾಗಿ ಶ್ರುತಿ ಹಾಗೂ ಸ್ಮೃತಿ ಪದಗಳನ್ನು ವಿವಕ್ಷಿಸಬೇಕು.

ಪಾಶುಪತಾದಿಸ್ಮೃತಿಗಳಂತೆ ಶ್ರುತ್ಯಾದಿಗಳಿಗೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂದು ಹೇಳಿದ ಅನಂತರ 'ಕಿಂತು ಸಾಕ್ಷಿಪ್ರತ್ಯಕ್ಷಸಾಮ್ಯಮೇವ ನಿರಪೇಕ್ಷತ್ವಾತ್' ಮತ್ತೇನೆಂದರೆ ಸಾಕ್ಷಿಪ್ರತ್ಯಕ್ಷಸಾಮ್ಯವನ್ನೇ ವೇದಕ್ಕೂ ಕೂಡ ಹೇಳಬೇಕು. ಏಕೆಂದರೆ ಯಾವುದನ್ನೂ ಕೂಡ ಇದು

ಅಪೇಕ್ಷಿಸುವುದಿಲ್ಲ ಎಂಬ ನ್ಯಾಯವಿವರಣದಲ್ಲಿರುವ ವಾಕ್ಯವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಕರ್ತೃವಿನ ಅಪೇಕ್ಷೆ ಇಲ್ಲದ್ದರಿಂದ ನಿತ್ಯವಾಗಿರುವುದರಿಂದಲೇ ವೇದವು ಸಾಕ್ಷಿಪ್ರಾಮಾಣ್ಯಕ್ಕೆ ಸಮಾನವಾಗಿದೆ ಎಂಬುದಾಗಿ ಇದನ್ನು ವಿವರಿಸಿದಂತಾಯಿತು.

### ಅನುವ್ಯಾಖ್ಯಾನ, ಅನುಭಾಷ್ಯ, ನ್ಯಾಯವಿವರಣಗಳ ಜೊತೆ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – वक्तृदोषेति ।।** 'नित्यत्वात्पुरुषोद्भवैः। उज्झितं सर्वदोषैश्च कथं नो मानतां व्रजेदित्यनुभाष्योक्तेरिति भावः। एतेन वेदा नित्यत्वान्मानमुत्तमम्' इत्यणुभाष्यमपि स्मृत्युपलक्षणतया व्याख्यातं ध्येयम्। श्रुतेरित्यादिन्यायविवरणस्थमाद्यं साम्यपदं संवादाधीनज्ञानप्रामाण्यरूपसाम्यपरम्। द्वितीयं तु तदनधीनसिद्धिक प्रामाण्यरूपसाम्यपरमिति प्रकारान्तरेण तद्वाक्यं विवृण्वानो भाष्यं व्याचष्टे – **भवेदिति ।।**

ಟೀಕೆಯಲ್ಲಿ 'ವಕ್ತೃದೋಷನಿಬಂಧನಂ' ಎಂಬುದಾಗಿ ವಾಕ್ಯದ ಅಪ್ರಾಮಾಣ್ಯವು ವಕ್ತೃವಿನ ದೋಷಪ್ರಯುಕ್ತವಾಗಿ ಪ್ರಾಪ್ತವಾಗುತ್ತದೆಂದು ಹೇಳಿದ್ದಾರೆ. ಆದರೆ ವೇದವು ನಿತ್ಯವಾಗಿರುವುದರಿಂದ ಪುರುಷದೋಷಪ್ರಯುಕ್ತವಾದ ದೋಷವು ಪ್ರಾಪ್ತವಾಗುವುದಿಲ್ಲ. ಏಕೆಂದರೆ 'ನಿತ್ಯತ್ವಾತ್ ಪುರುಷೋದ್ಭವೈಃ ಉಜ್ಝಿತಂ ಸರ್ವದೋಷೈಶ್ಚ ಕಥಂ ನೋ ಮಾನತಾಂ ವ್ರಜೇತ್' 'ನಿತ್ಯವಾಗಿರುವುದರಿಂದ ಪುರುಷದೋಷಪ್ರಯುಕ್ತವಾದ ದೋಷವನ್ನು ವೇದದಲ್ಲಿ ಹೇಳಲು ಹೇಗೆ ಸಾಧ್ಯ?' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರಿಂದಲೇ 'ನಿತ್ಯತ್ವಾತ್ ಮಾನಮುತ್ತಮಂ' ನಿತ್ಯವಾಗಿರುವುದರಿಂದ ವೇದವು ಉತ್ತಮಪ್ರಮಾಣವಾಗಿದೆ ಎಂಬ ಅಣುಭಾಷ್ಯವನ್ನೂ ಕೂಡ ಸ್ಮೃತ್ಯುಪಲಕ್ಷಣವಾಗಿ ವ್ಯಾಖ್ಯಾನ ಮಾಡಿದಂತಾಯಿತು. 'ಶ್ರುತೇಃ' ಇತ್ಯಾದಿ ನ್ಯಾಯವಿವರಣದಲ್ಲಿರುವ ಮೊದಲನೆಯ ಸಾಮ್ಯಪದವು ಸಂವಾದಾಧೀನವಾದ ಜ್ಞಾನಪ್ರಾಮಾಣ್ಯದ ಸಾಮ್ಯವನ್ನು ಹೇಳುತ್ತಿದೆ. ಎರಡನೆಯ ಸಾಮ್ಯಪದವು ಸಂವಾದಾಧೀನವಾಗದ ಜ್ಞಾನಪ್ರಾಮಾಣ್ಯದ ಸಾಮ್ಯವನ್ನು ಹೇಳುತ್ತಿದೆ. ಹೀಗೆ ಮತ್ತೊಂದು ಪ್ರಕಾರದಿಂದ ನ್ಯಾಯವಿವರಣದ ವಾಕ್ಯವನ್ನು ವ್ಯಾಖ್ಯಾನ ಮಾಡುವವರಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಭವೇತ್' ಇತ್ಯಾದಿ ಗ್ರಂಥವು ಹೊರಟಿದೆ.

## ಉತ್ಪತ್ತೌಪ್ರಾಮಾಣ್ಯ ಸ್ವತಸ್ತ್ವವನ್ನು ದೇವತಾಧಿಕರಣದಲ್ಲಿ ಹೇಳಿದ್ದಾಗಿದೆ

**भावदीपः** – स्वतः शब्दार्थः॥ **संवादनिरपेक्षतज्ज्ञानादेवेति**॥ वेदादिस्वरूपज्ञानादेवेत्यर्थः। एतेन निरपेक्षत्वादित्यन्यत्रोक्तो हेतुः संवादनिरपेक्षत्वादिति विवृतः॥ **तत्तत्स्वरूपेति**॥ वेदादिस्वरूपेत्यर्थः। उत्पत्तौ प्रामाण्यस्वतस्त्वस्य देवतानये स्वतः प्रामाण्यप्रसिद्धेश्चेति भाष्ये व्युत्पादितत्वात् उत्तरहेत्वनुरोधेन ज्ञप्तौ स्वतस्त्वपरत्वेनैव भाष्यं व्याख्यातम्।

'ಭವೇತ್' ಇತ್ಯಾದಿ ವಾಕ್ಯವು ಭಾಷ್ಯದಲ್ಲಿರುವ 'ಸ್ವತಃ' ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಿದೆ. 'ಸಂವಾದನಿರಪೇಕ್ಷ ತಜ್ಜ್ಞಾನಾದೇವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ವೇದಾದಿಸ್ವರೂಪಜ್ಞಾನದಿಂದಲೇ' ಎಂಬುದು ಇದರ ಅಭಿಪ್ರಾಯ. ಹೀಗೆ ಹೇಳಿದ್ದರಿಂದ 'ನಿರಪೇಕ್ಷತ್ವಾತ್' ಎಂಬುದಾಗಿ ಬೇರೆಡೆ ಹೇಳಿದ ಹೇತುವಿಗೆ ಸಂವಾದ ಪ್ರಮಾಣದ ಅಪೇಕ್ಷೆ ಇರುವುದಿಲ್ಲ ಎಂಬರ್ಥವನ್ನು ಹೇಳಿದಂತಾಯಿತು. 'ತತ್ಸ್ವರೂಪ' ಎಂಬುದಕ್ಕೆ 'ವೇದಾದಿ ಸ್ವರೂಪ' ಎಂದರ್ಥ. ಉತ್ಪತ್ತೌ ಪ್ರಾಮಾಣ್ಯಸ್ವತಸ್ತ್ವವನ್ನು ದೇವತಾಧಿಕರಣದ 'ಸ್ವತಃ ಪ್ರಾಮಾಣ್ಯಪ್ರಸಿದ್ಧೇಶ್ಚ' ಎಂಬ ಭಾಷ್ಯದಲ್ಲಿ ವಿವರಿಸಿದ್ದಾಗಿದೆ. ಆದ್ದರಿಂದ ಪ್ರಕೃತ 'ಅನ್ಯಥಾ ಅನವಸ್ಥಿತೇಃ' ಎಂಬ ಭಾಷ್ಯದಲ್ಲಿ ಉಲ್ಲೇಖ ಮಾಡುವ ಮುಂದಿನ ಹೇತುವಿಗೆ ಅನುಕೂಲವಾಗಿ ಜ್ಞಪ್ತೌ ಸ್ವತಸ್ತ್ವ ಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

## ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ನಾವು ಅಂಗೀಕರಿಸಿಲ್ಲ, ಅಲ್ಲವೇ?

**भावदीपः** – न चैवं करणप्रामाण्यज्ञप्तिस्तु परत एवेन्द्रियलिङ्गशब्दानां यथायथमनुमानप्रत्यक्षादिवेद्यत्वात् यथार्थज्ञानसाधनत्वस्य त्वनुमानवेद्यत्वादिति पद्धतिवाक्येन प्रत्यक्षवच्च प्रामाण्यं स्वत एवागमस्य हीत्यनुव्याख्यानव्याख्यावसरोक्तेन करणानां तु ज्ञप्तौ स्वतस्त्वं नाङ्गीक्रियत एवेत्यादि सुधावाक्येन च विरोध इति वाच्यम्।

ಪ್ರಶ್ನೆ – ಕರಣಪ್ರಾಮಾಣ್ಯಕ್ಕೆ ವ್ಯಕ್ತಿಯಲ್ಲಿ ಸ್ವತಸ್ತ್ವವಿಲ್ಲವೆಂದು ಪ್ರಮಾಣಪದ್ಧತಿಯಲ್ಲಿ ಹೇಳಿದ್ದಾರೆ. ಅದು ಹೀಗೆ – 'ಕರಣಪ್ರಾಮಾಣ್ಯಜ್ಞಪ್ತಿಸ್ತು ಪರತ ಏವೇಂದ್ರಿಯಲಿಂಗಶಬ್ದಾನಾಂ ಯಥಾಯಥಮನುಮಾನಪ್ರತ್ಯಕ್ಷಾದಿ ವೇದ್ಯತ್ವಾತ್'.

'ಕರಣಗಳ ಜ್ಞಾನಜನಕತ್ವ ಶಕ್ತಿಯೇ ಪ್ರಾಮಾಣ್ಯ ಜನನ ಶಕ್ತಿ ಎನಿಸುತ್ತದೆ. ಈ ಶಕ್ತಿಯು ಜ್ಞಾನ ಕರಣಗಳ ಕಾರಣದಿಂದ ಉಂಟಾಗುತ್ತದೆ. ಆದರೆ ಅಪ್ರಾಮಾಣ್ಯವನ್ನು ಹುಟ್ಟಿಸಲು ಬೇರೆ ಶಕ್ತಿಯ ಕರಣಗಳ ಕಾರಣಗಳಲ್ಲಿ ದೋಷವು ಇರುವುದರಿಂದ ಉಂಟಾಗುತ್ತದೆ. ಕರಣಗಳ ಪ್ರಾಮಾಣ್ಯ ಜ್ಞಪ್ತಿಯು ಬೇರೆ ಪ್ರಮಾಣದಿಂದ ಗ್ರಹಿಸಲ್ಪಡುತ್ತದೆ. ಏಕೆಂದರೆ ಇಂದ್ರಿಯಾದಿಗಳ ಸ್ವರೂಪವು ತಮ್ಮ ತಮ್ಮ ಉಚಿತವಾದ ಪ್ರಮಾಣಗಳಿಂದ ತಿಳಿಯಲ್ಪಡುತ್ತದೆ ಮತ್ತು ಅವುಗಳ ಯಥಾರ್ಥಜ್ಞಾನಸಾಧನತ್ವವು ಎಂದರೆ ಪ್ರಾಮಾಣ್ಯವು ಅನುಮಾನದಿಂದ ತಿಳಿಯಲ್ಪಡುತ್ತದೆ'.

ಪ್ರಮಾಣಪದ್ಧತಿಯಲ್ಲಿ ಮಾತ್ರ ಹೀಗೆ ಹೇಳಿದ್ದಿಲ್ಲ. 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯಸುಧೆಯಲ್ಲಿ ಹೀಗೆ ಹೇಳಿದ್ದಾರೆ– 'ಕರಣಾನಾಂ ತು ಜ್ಞಪ್ತೌ ಸ್ವತಸ್ತ್ವಂ ನಾಂಗೀಕ್ರಿಯತೇ ಏವ' 'ಜ್ಞಾನಕರಣಗಳಾದ ಇಂದ್ರಿಯಾದಿಗಳಿಗೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಅಂಗೀಕಾರ ಮಾಡುವುದಿಲ್ಲ. ಏಕೆಂದರೆ ಕರಣಗಳ ಸ್ವರೂಪವು ಅವುಗಳ ಸ್ವಭಾವವನ್ನನುಸರಿಸಿ ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ತಿಳಿಯಲ್ಪಡುತ್ತದೆ. ಆದರೆ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವು ಅನುಮಾನದಿಂದ ತಿಳಿಯುತ್ತದೆ'. ಹೀಗಿರುವಾಗ ಕರಣಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೇಗೆ ಹೇಳುತ್ತೀರಿ?

ವಿವರಣೆ – ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಒಪ್ಪಿದರೂ ಕೂಡ ಕರಣಪ್ರಾಮಾಣ್ಯ-ವಿಷಯದಲ್ಲಿ ಅಪವಾದವನ್ನು ಅಂಗೀಕರಿಸಲಾಗಿದೆ. ಜ್ಞಾನದಲ್ಲಿರುವ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಹಾಗೂ ಜ್ಞಪ್ತಿಯಲ್ಲಿ ಸ್ವತಸ್ತ್ವವಿದೆ. ಆದರೆ ಜ್ಞಾನ ಕರಣಗಳಲ್ಲಿರುವ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಮಾತ್ರ ಸ್ವತಸ್ತ್ವವಿದೆ, ಜ್ಞಪ್ತಿಯಲ್ಲಿ ಸ್ವತಸ್ತ್ವವಿಲ್ಲ. ಜ್ಞಾನಕರಣಗಳಾಗಿರುವ ಇಂದ್ರಿಯ, ಅನುಮಾನ ಹಾಗೂ ಶಬ್ದಗಳಿಗೆ ಪ್ರಾಮಾಣ್ಯವೆಂದರೆ ಯಥಾರ್ಥಜ್ಞಾನಜನಕತ್ವ ಎಂದರ್ಥ. ಇಂತಹ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವೆಂದರೆ ಕರಣಗಳು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತವೋ ಅದೇ ಪ್ರಮಾಣದಿಂದ ಅವುಗಳ ಪ್ರಾಮಾಣ್ಯವೂ ಕೂಡ ತಿಳಿಯಬೇಕು ಎಂದು. ಆದರೆ ಇದು ಕೂಡುವುದಿಲ್ಲ. ಯಾವ ಪ್ರಮಾಣಗಳಿಂದ ಕರಣಗಳು ತಿಳಿಯಲ್ಪಡುತ್ತವೋ ಅದಕ್ಕಿಂತ ಬೇರೆ ಪ್ರಮಾಣಗಳಿಂದಲೇ ಅವುಗಳಲ್ಲಿರುವ ಪ್ರಾಮಾಣ್ಯವು ತಿಳಿಯಲ್ಪಡುತ್ತವೆ. ಉದಾ – ಚಕ್ಷುರಾದಿ ಇಂದ್ರಿಯಗಳೆಲ್ಲವೂ ಅತೀಂದ್ರಿಯವಾಗಿವೆ. ಹಾಗಾಗಿ ಅನುಮಾನದಿಂದಲೇ ಚಕ್ಷುರಾದಿ ಇಂದ್ರಿಯಗಳನ್ನು ನಾವು ತಿಳಿಯಬೇಕು. ದೇವದತ್ತನಿಗೆ ರೂಪಜ್ಞಾನ ಬರುತ್ತಿರುವುದರಿಂದ ಚಕ್ಷುರಿಂದ್ರಿಯವಿದೆ.

ಶಬ್ದಗ್ರಹಣ ಮಾಡುತ್ತಿರುವುದರಿಂದ ಶ್ರೋತ್ರೇಂದ್ರಿಯವಿದೆ ಎಂಬುದಾಗಿ ವಿಷಯಪ್ರತ್ಯಕ್ಷದಿಂದ ಬಾಹ್ಯೇಂದ್ರಿಯಗಳನ್ನು ಅನುಮಾನದ ಮೂಲಕ ತಿಳಿಯಬೇಕು. ಅದರಂತೆ ಮನಸ್ಸು ಎಂಬ ಇಂದ್ರಿಯವು ಸಾಕ್ಷೀಂದ್ರಿಯದಿಂದ ತಿಳಿಯುತ್ತದೆ. ಬೇರೆ ಜ್ಞಾನಕರಣಗಳಾದ ಲಿಂಗ ಹಾಗೂ ಶಬ್ದಗಳು ಚಕ್ಷುರಿಂದ್ರಿಯದಿಂದ ಹಾಗೂ ಶ್ರೋತ್ರೇಂದ್ರಿಯದಿಂದ ತಿಳಿಯಲ್ಪಡುತ್ತವೆ. ಪ್ರತ್ಯಕ್ಷ, ಲಿಂಗ, ಶಬ್ದ ಎಂಬ ಮೂರು ಜ್ಞಾನಕರಣಗಳ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವು ಅನುಮಾನದಿಂದ ಮಾತ್ರ ತಿಳಿಯುತ್ತದೆ. ಈ ಅನುಮಾನವು ಹೀಗಿದೆ– ಜ್ಞಾನಕರಣವು ಯಥಾರ್ಥಜ್ಞಾನಜನಕವಾಗಿದೆ, ಈ ಕರಣದಿಂದ ಹುಟ್ಟಿರುವ ಜ್ಞಾನವು ಇನ್ನೊಂದು ಯಥಾರ್ಥಜ್ಞಾನದ ಸಂವಾದವನ್ನು ಪಡೆದಿರುವುದರಿಂದ ಎಂದು. ಜ್ಞಾನಕರಣವನ್ನು ಗ್ರಹಿಸುವ ಪ್ರಮಾಣವೇ ಬೇರೆ, ಅವುಗಳ ಪ್ರಾಮಾಣ್ಯವನ್ನು ಗ್ರಹಿಸುವ ಅನುಮಾನವೇ ಬೇರೆ. ಆದ್ದರಿಂದ ಕರಣಗಳಲ್ಲಿರುವ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವಿಲ್ಲವೆಂದು ಅಂಗೀಕರಿಸಬೇಕು.

## ವಿವಕ್ಷಾಭೇದದಿಂದ ಜ್ಞಪ್ತಿಯಲ್ಲೂ ಸ್ವತಸ್ತ್ವ

**भावदीपः** – इहापि प्रामाण्यग्रहे संवादानपेक्षतायामेव तात्पर्येण करणस्वरूपग्राहकेणैव तत्प्रामाण्यग्रह इत्यत्र तात्पर्याभावात् । यद्वा अन्यत्र शक्तिशक्तिमतोर्भेदमुपेत्य स्वरूपग्राह्यत्वरूपपरतस्त्वोक्तावपि इहाभेदमुपेत्य स्वरूपग्राहकमेव ज्ञानजनकशक्तिग्राहकम् । तदेव च प्रमाजनकशक्तिरूपप्रामाण्यग्राहकमिति भावेन संवादनिरपेक्षतज्ज्ञानादेवेत्याद्युक्तम् । ज्ञानजनकशक्तिग्राहकमात्रग्राह्यत्वरूपप्रमाजनन-शक्तिरूपप्रामाण्यस्वतस्त्वं तु ज्ञनजनकत्वं येन गृह्यते तत एव यथार्थज्ञानजनकत्वरूप-प्रामाण्यस्य तदीयस्य ग्राह्यत्वरूपं स्वतस्त्वमिति सुधोक्त्यानुमतमेवेतिभावः ।

ಉತ್ತರ – ಮೇಲಿನ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಪ್ರಕೃತದಲ್ಲೂ ಕೂಡ ನಾವು ಪ್ರಾಮಾಣ್ಯವನ್ನು ಗ್ರಹಿಸಲು ಸಂವಾದದ ಅಪೇಕ್ಷೆ ಇರುವುದಿಲ್ಲ ಎಂದಷ್ಟೇ ತಾತ್ಪರ್ಯವನ್ನು ಹೊಂದಿದ್ದೇವೆ. ಇದನ್ನು ಬಿಟ್ಟು ಕರಣಸ್ವರೂಪಗ್ರಾಹಕದಿಂದಲೇ ಕರಣದಲ್ಲಿರುವ ಪ್ರಾಮಾಣ್ಯವು ತಿಳಿಯಲ್ಪಡುತ್ತದೆ ಎಂಬುದರಲ್ಲಿ ನಾವು ತಾತ್ಪರ್ಯವನ್ನು ಹೊಂದಿರುವುದಿಲ್ಲ.

ಅಥವಾ ಬೇರೆಡೆ ಶಕ್ತಿ ಹಾಗೂ ಶಕ್ತಿಯುಳ್ಳವುಗಳಿಗೆ ಭೇದವನ್ನು ಅಂಗೀಕಾರ ಮಾಡಿ ಸ್ವರೂಪಗ್ರಾಹಕದಿಂದ ಅಗ್ರಾಹ್ಯತ್ವ ರೂಪದಿಂದ ಪರತಸ್ತ್ವವನ್ನು ಹೇಳಿದ್ದರೂ ಕೂಡ ಪ್ರಕೃತದಲ್ಲಿ

ಅಭೇದವನ್ನು ಒಪ್ಪಿ ಸ್ವರೂಪಗ್ರಾಹಕದಿಂದಲೇ ಜ್ಞಾನಜನಕಶಕ್ತಿಗ್ರಾಹಕತ್ವವನ್ನು ಅಂಗೀಕರಿಸಲಾಗಿದೆ. ಇದೇ ಪ್ರಮಾ ಜನಕಶಕ್ತಿ ಎಂಬ ಪ್ರಾಮಾಣ್ಯಗ್ರಾಹಕ ಎನಿಸುತ್ತದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ 'ಸಂವಾದಿನಿರಪೇಕ್ಷತತ್‌ಜ್ಞಾನಾದೇವ' ಎಂದು ಹೇಳಿದ್ದಾರೆ. ಜ್ಞಾನಜನಕಶಕ್ತಿಗ್ರಾಹಕ ಮಾತ್ರಗ್ರಾಹ್ಯತ್ವವೆಂಬ ಪ್ರಮಾಜನನಶಕ್ತಿರೂಪವಾದ ಪ್ರಾಮಾಣ್ಯಸ್ವತಸ್ತ್ವ ಎಂದರೆ ಜ್ಞಾನಜನಕತ್ವವು ಯಾವುದರಿಂದ ಸಿದ್ಧವಾಗಿದೆಯೋ ಅದರಿಂದಲೇ ಅವುಗಳಿಗಿರುವ ಯಥಾರ್ಥಜ್ಞಾನಜನಕತ್ವರೂಪವಾದ ಪ್ರಾಮಾಣ್ಯವೂ ಕೂಡ ಗೃಹೀತವಾಗುತ್ತದೆ. ಆದ್ದರಿಂದ ಜ್ಞಾನಕರಣಗಳಿಗೂ ಕೂಡ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಪ್ರಕಾರಾಂತರದಿಂದ ಒಪ್ಪಬಹುದು. ಹಿಂದೆ ಪ್ರಾಮಾಣ್ಯಕ್ಕೆ ಆಶ್ರಯವಾದದ್ದು ಯಾವುದರಿಂದ ಗೃಹೀತವಾಗಿದೆಯೋ ಅದರಿಂದಲೇ ಪ್ರಾಮಾಣ್ಯವು ಗೃಹೀತವಾಗುತ್ತದೆಂದು ಹೇಳಿದರೆ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹೇಳಲಾಗಿತ್ತು. ಅದರ ಪ್ರಕಾರ ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪ್ರಾಮಾಣ್ಯಕ್ಕೆ ಆಶ್ರಯವಾದ ಇಂದ್ರಿಯಾದಿಗಳನ್ನು ಗ್ರಹಿಸುವ ಪ್ರಮಾಣವೇ ಬೇರೆ, ಅವುಗಳಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವ ಪ್ರಮಾಣವೇ ಬೇರೆ ಎಂದು. ಆದರೆ ಪ್ರಕೃತ ಬೇರೆ ರೀತಿಯಲ್ಲಿಯೇ ನಾವು ಹೇಳುತ್ತಿರುವುದರಿಂದ ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹೇಳಬಹುದು. ಹೀಗೆ ನ್ಯಾಯಸುಧಾದಲ್ಲಿ ಜ್ಞಪ್ತೌ ಸ್ವತಸ್ತ್ವವೂ ಕೂಡ ಅಥವಾ ಎಂಬ ಶಬ್ದದಿಂದ ಉಪಪಾದನೆ ಮಾಡಿದ್ದಾರೆ.

ವಿವರಣೆ – ಪ್ರಾಮಾಣ್ಯಸ್ವತಸ್ತ್ವವು ಒಟ್ಟು ನಾಲ್ಕು ವಿಧ. ೧. ಜ್ಞಾನ ಪ್ರಾಮಾಣ್ಯದಲ್ಲಿ ಉತ್ಪತ್ತೌ ಸ್ವತಸ್ತ್ವ. ೨. ಕರಣ ಪ್ರಾಮಾಣ್ಯದಲ್ಲಿ ಉತ್ಪತ್ತೌ ಸ್ವತಸ್ತ್ವ. ೩. ಜ್ಞಾನಪ್ರಾಮಾಣ್ಯದಲ್ಲಿ ಜ್ಞಪ್ತೌ ಸ್ವತಸ್ತ್ವ. ೪. ಕರಣಪ್ರಾಮಾಣ್ಯದಲ್ಲಿ ಜ್ಞಪ್ತೌ ಸ್ವತಸ್ತ್ವ ಎಂದು. ಈ ನಾಲ್ಕರಲ್ಲಿ ಮೊದಲಿನ ಮೂರನ್ನು ನಾವು ಅಂಗೀಕರಿಸಿದ್ದೇವೆ. ಕೊನೆಯದಾದ ಕರಣ ಪ್ರಾಮಾಣ್ಯದ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಅಂಗೀಕರಿಸಬೇಕೋ, ಬೇಡವೋ? ಎಂಬುದು ಇಲ್ಲಿ ಮಾಡಿರುವ ವಿಚಾರ.

ಇದನ್ನು ತಿಳಿಯಲು ಪೂರಕವಾದ ಮೂರು ಬಗೆಯ ಸ್ವತಸ್ತ್ವಗಳ ಬಗ್ಗೆ ಸಂಕ್ಷೇಪವಾಗಿ ಹೀಗೆ ತಿಳಿಯಬೇಕು – ಮೊದಲನೆಯ ಜ್ಞಾನಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವ ಎಂಬುದರ ಅಭಿಪ್ರಾಯ ಹೀಗಿದೆ – ಜ್ಞಾನದ ಪ್ರಾಮಾಣ್ಯವೆಂದರೆ ಯಥಾರ್ಥವಾಗಿರುವಿಕೆ ಎಂದರ್ಥ. ವಸ್ತು ಇದ್ದಂತೆ ಗ್ರಹಿಸುವುದನ್ನೇ ಜ್ಞಾನದ ಪ್ರಾಮಾಣ್ಯ ಎನ್ನುತ್ತಾರೆ. ಜ್ಞಾನ ಹುಟ್ಟಿದಾಗಲೇ ಅದರಲ್ಲಿರುವ ಯಥಾರ್ಥತ್ವವೆಂಬ ಪ್ರಾಮಾಣ್ಯವೂ ಕೂಡ ಹುಟ್ಟುತ್ತದೆ. ಇಲ್ಲಿ ಸ್ವತಃ ಎಂಬ ಪದಕ್ಕೆ ಯಾವ ಕಾರಣಸಮುದಾಯವನ್ನು ಅವಲಂಬಿಸಿ ಜ್ಞಾನವು ಹುಟ್ಟಿದೆಯೋ ಅದಕ್ಕಿಂತ

ಬೇರೆ ಕಾರಣವನ್ನು ಅಪೇಕ್ಷೆ ಪಡದೇ ಪ್ರಾಮಾಣ್ಯವು ಹುಟ್ಟಿದೆ ಎಂದರ್ಥ. ಎದುರಿನಲ್ಲಿ ಘಟವಿದ್ದಾಗ 'ಅಯಂ ಘಟಃ' ಎಂಬ ಜ್ಞಾನವು ನಮಗೆ ಬರುತ್ತದೆ. ಈ ಜ್ಞಾನಕ್ಕೆ ಜನಕವಾದದ್ದು ಘಟ ಮತ್ತು ಚಕ್ಷುರಿಂದ್ರಿಯಕ್ಕೂ ಇರುವ ಸನ್ನಿಕರ್ಷ, ಹಾಗೂ ಚಕ್ಷುರಿಂದ್ರಿಯಕ್ಕೂ ಮನಸ್ಸಿಗೂ ಇರುವ ಸನ್ನಿಕರ್ಷ ಇವೇ ಮೊದಲಾದವು. 'ಅಯಂ ಘಟಃ' ಎಂಬ ಜ್ಞಾನದಲ್ಲಿರುವ ಪ್ರಾಮಾಣ್ಯವೂ ಕೂಡ ಈ ಕಾರಣವನ್ನು ಬಿಟ್ಟು ಬೇರೆ ಕಾರಣವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದಲೇ ಜ್ಞಾನಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವಿದೆ ಎಂದು ತತ್ವವಾದಿಗಳಾದ ನಾವು ಅಂಗೀಕರಿಸಿದ್ದೇವೆ.

ಕರಣಪ್ರಾಮಾಣ್ಯದಲ್ಲಿರುವ ಉತ್ಪತ್ತೌ ಸ್ವತಸ್ತ್ವವನ್ನು ಹೀಗೆ ತಿಳಿಯಬೇಕು– ಜ್ಞಾನಕ್ಕೆ ಕರಣವಾದದ್ದು ಪ್ರತ್ಯಕ್ಷ, ಅನುಮಾನ ಹಾಗೂ ಆಗಮ. ಇವುಗಳಲ್ಲಿರುವ ಪ್ರಾಮಾಣ್ಯದಲ್ಲಿ ಉತ್ಪತ್ತೌ ಸ್ವತಸ್ತ್ವವಿದೆ. ಅಂದರೆ ಜ್ಞಾನವನ್ನು ಹುಟ್ಟಿಸುವ ಕರಣಗಳಿಗೆ ಯಾವ ಸಾಮರ್ಥ್ಯವಿದೆಯೋ ಅದರಿಂದಲೇ ಜ್ಞಾನಪ್ರಾಮಾಣ್ಯವೂ ಕೂಡ ಹುಟ್ಟುತ್ತದೆ ಎಂದಭಿಪ್ರಾಯ. ಇಲ್ಲಿರುವ ಪ್ರಾಮಾಣ್ಯಶಬ್ದಕ್ಕೆ ಯಥಾರ್ಥಜ್ಞಾನಸಾಧನತ್ವ ಎಂದರ್ಥ. ಯಥಾರ್ಥಜ್ಞಾನಕ್ಕೆ ಕಾರಣವಾಗಿರಬೇಕು ಎಂಬುದು ಇದರ ಅಭಿಪ್ರಾಯ. ಜ್ಞಾನದ ಕರಣಗಳು ಯಾವ ಸಾಮರ್ಥ್ಯದಿಂದ ಜ್ಞಾನವನ್ನು ಹುಟ್ಟಿಸುತ್ತವೋ ಅದೇ ಸಾಮರ್ಥ್ಯದಿಂದಲೇ ಅದರಲ್ಲಿರುವ ಪ್ರಾಮಾಣ್ಯವನ್ನೂ ಕೂಡ ಹುಟ್ಟಿಸುತ್ತವೆ. ಅಥವಾ ಜ್ಞಾನಕರಣಗಳಿಗೆ ಜ್ಞಾನವನ್ನು ಉಂಟು ಮಾಡುವ ಸಾಮರ್ಥ್ಯವೇ ಜ್ಞಾನಪ್ರಾಮಾಣ್ಯವನ್ನು ಉಂಟು ಮಾಡುವ ಸಾಮರ್ಥ್ಯ ಎನಿಸಿವೆ. ಇದನ್ನು ಕರಣಪ್ರಾಮಾಣ್ಯದಲ್ಲಿ ಇರುವ ಉತ್ಪತ್ತೌ ಸ್ವತಸ್ತ್ವ ಎಂದು ಕರೆಯುತ್ತಾರೆ.

ಮೂರನೆಯದ್ದು ಜ್ಞಾನಪ್ರಾಮಾಣ್ಯದಲ್ಲಿರುವ ಜ್ಞಪ್ತೌ ಸ್ವತಸ್ತ್ವ– ಜ್ಞಾನದಲ್ಲಿರುವ ಯಾಥಾರ್ಥ್ಯವೆಂಬ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವ ಎಂದರೆ ಪ್ರಾಮಾಣ್ಯಕ್ಕೆ ಆಶ್ರಯವಾದ ಜ್ಞಾನವನ್ನು ಗ್ರಹಿಸುವ ಸಾಮಗ್ರಿಯಿಂದ ಮಾತ್ರ ಗ್ರಹಿಸಲ್ಪಡಬೇಕು ಎಂಬುದು ಇದರ ಅರ್ಥ. ಉದಾ – 'ಅಯಂ ಘಟಃ' ಎಂಬುದಾಗಿ ಜ್ಞಾನವು ಬರುತ್ತದೆ. ಈ ಜ್ಞಾನವನ್ನು 'ಅಹಂ ಘಟಂ ಜಾನಾಮಿ' ಎಂಬ ಸಾಕ್ಷೀಂದ್ರಿಯವು ಗ್ರಹಿಸುತ್ತದೆ. ಈ ಸಾಕ್ಷೀಂದ್ರಿಯವು 'ಅಯಂ ಘಟಃ' ಎಂಬ ಜ್ಞಾನವನ್ನು ಮಾತ್ರ ಗ್ರಹಿಸುವುದಲ್ಲ. ಅದರಲ್ಲಿರುವ ಪ್ರಾಮಾಣ್ಯವನ್ನೂ ಕೂಡ ಗ್ರಹಿಸುತ್ತದೆ ಎಂಬುದು ಜ್ಞಾನ ಪ್ರಾಮಾಣ್ಯದಲ್ಲಿರುವ ಜ್ಞಪ್ತೌ ಸ್ವತಸ್ತ್ವ ಎಂಬುದರ ಅಭಿಪ್ರಾಯವಾಗಿದೆ.

(೪) ಆದರೆ ಇಂದ್ರಿಯಗಳಿಗೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಅಂಗೀಕಾರ ಮಾಡಿಲ್ಲ ಎಂಬುದನ್ನು ಹಿಂದೆ ವಿವರಿಸಿದಂತೆ ತಿಳಿಯಬೇಕು.

### ನಿಃಶಂಕಾ ಪ್ರವೃತ್ತಿಗಾಗಿ ಪ್ರಾಮಾಣ್ಯನಿಶ್ಚಯವು ಅನಿವಾರ್ಯ

**भावदीपः – प्रामाण्यनिश्चयं विनापि प्रवृत्तिदृष्ट्या प्रमाण्यजिज्ञासोपपत्तौ नानवस्थेति भावेन शङ्कते॥ **फलेति** ।। **सापीति** ।। तथा च बह्वायाससाध्ये कर्मणि निश्शङ्कं प्रवृत्तये निश्चयोऽपेक्षित एवेत्यनवस्थैवेतिभावः॥

ಪ್ರಾಮಾಣ್ಯದಲ್ಲಿ ನಿಶ್ಚಯವಿಲ್ಲದಿದ್ದರೂ ಕೂಡ ಪ್ರವೃತ್ತಿ ಮಾಡುವುದು ಕೃಷಿಕರಲ್ಲಿ ಕಂಡಿದೆ. ಆದ್ದರಿಂದ ಪ್ರಾಮಾಣ್ಯ ಜಿಜ್ಞಾಸೆಯನ್ನು ಮಾಡಿದಾಗ ಅನವಸ್ಥಾ ದೋಷವು ಹೇಗೆ ಬರುತ್ತದೆ. ಈ ಅಭಿಪ್ರಾಯದಿಂದ 'ಫಲಸಂದೇಹೇಪಿ' ಎಂದು ಆಶಂಕೆ ಮಾಡಲಾಗಿದೆ. 'ಸಾಪಿ' ಎಂಬ ವಾಕ್ಯಕ್ಕೆ 'ಬಹಳ ಆಯಾಸಸಾಧ್ಯವಾದ ಕರ್ಮದಲ್ಲಿ ನಿಶ್ಶಂಕಾ ಪ್ರವೃತ್ತಿಯನ್ನು ಮಾಡುವುದಕ್ಕಾಗಿ ಪ್ರಾಮಾಣ್ಯನಿಶ್ಚಯವು ಇರಲೇಬೇಕು. ಆದ್ದರಿಂದ ಅನವಸ್ಥಾ ದೋಷವು ಬಂದೇ ಬರುತ್ತದೆ' ಎಂಬುದು ಅಭಿಪ್ರಾಯ.

### ಸಂವಾದಗಳು ಅನ್ಯತ್ರ ಉಪಕ್ಷೀಣ

**भावदीपः – निरस्तप्राय इति** ।। प्रामाण्याग्रहणे शङ्काया आवश्यकत्वादिति शेषः॥ **स्वतस्त्वेति** ।। बुद्धिदोषनिरासमात्रकारणत्वाद्युक्तीनामिति तत्वनिर्णयोक्त्या संवादकस्यान्यत्रोपयोगे तदनपेक्षज्ञानग्राह्यत्वस्य प्राप्तेः स्वतस्त्व प्राप्तिरित्यर्थः॥ **शङ्काभावेपीति** ।। अप्रामाण्यशङ्कानिवृत्तावपीत्यर्थः।

'ನಿರಸ್ತಪ್ರಾಯಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪ್ರಾಮಾಣ್ಯವನ್ನು ಗ್ರಹಿಸದೇ ಇದ್ದರೆ ಶಂಕೆಯು ಬಂದೇ ಬರುತ್ತದೆ ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. 'ಸ್ವತಸ್ತ್ವಪ್ರಾಪ್ತಿಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಬುದ್ಧಿದೋಷ ನಿರಾಸಕ್ಕೆ ಮಾತ್ರ ಕಾರಣತ್ವಾದ್ಯುಕ್ತಿಗಳು ಉಪಯುಕ್ತವಾಗುತ್ತವೆ ಇತ್ಯಾದಿಯಾಗಿ ತತ್ವಸ್ತರ್ನಿಣಯದಲ್ಲಿ ಹೇಳಿದ್ದಾರೆ. ಆದ್ದರಿಂದ ಸಂವಾದಕಗಳೆಲ್ಲವೂ ಅನ್ಯತ್ರ ಉಪಕ್ಷೀಣವಾಗುವುದರಿಂದ ಪ್ರಾಮಾಣ್ಯಕ್ಕೆ ಅವುಗಳ ಅಪೇಕ್ಷೆ ಇರುವುದಿಲ್ಲ. ಜ್ಞಾನಗ್ರಾಹಕಮಾತ್ರಗ್ರಾಹ್ಯತ್ವವು ಸಿದ್ಧವಾಗುವುದರಿಂದ ಸ್ವತಸ್ತ್ವವು ಪ್ರಾಪ್ತವಾಗುತ್ತದೆಂಬುದು ಇದರ ಅಭಿಪ್ರಾಯ. 'ಶಂಕಾಭಾವೇಪಿ' ಎಂದರೆ 'ಅಪ್ರಾಮಾಣ್ಯಶಂಕೆಯು ಪರಿಹಾರವಾದರೂ ಕೂಡ' ಎಂದರ್ಥ.

## ಪ್ರಾಮಾಣ್ಯಕ್ಕೆ ಪರತಸ್ತ್ವ ನಿರಾಕರಣೆ

**भावदीपः** – ननु यथा विसंवादादिरूपबाधकस्य प्रामाण्यशङ्कानिरासाप्रामाण्यज्ञानयोः व्यापारस्तदन्वय व्यतिरेकानुविधायित्वहेतुना कल्प्यते। तथेहापि तेनैव हेतुना कल्प्यतामिति शङ्कते॥ **बाधकवदिति**॥ बाधकेऽव्यभिचरितान्वयव्यतिरेकाभ्यां तथा कल्पनेऽपि नेह तथा। सुखादिज्ञाने स्वत एव निवृत्ताप्रामाण्यशङ्कस्य प्रामाण्यज्ञानोदयेन व्यतिरेकव्यभिचारादिति भावेनाह – **अप्रामाण्येति**॥ अप्रामाण्यज्ञप्तौ बाधकस्य व्यतिरेकव्यभिचारो नेत्याह – **बाधकेनेति**॥ **उक्तेति**॥ अनवस्थारूपेत्यर्थः॥ **अनुकूलेति**॥ अस्तु संशयविषयत्वं मास्तु परतो ज्ञेयत्वमित्यत्र बाधकाभावादिति भावः।

ವಿಸಂವಾದ ಮೊದಲಾದ ಬಾಧಕವು ಪ್ರಾಮಾಣ್ಯಶಂಕೆಯನ್ನು ನಿರಾಸ ಮಾಡುವುದಷ್ಟೇ ಅಲ್ಲದೇ ಅಪ್ರಾಮಾಣ್ಯ ಜ್ಞಾನವನ್ನು ಹುಟ್ಟಿಸುವುದರಲ್ಲೂ ಕೂಡ ವ್ಯಾಪಾರವುಳ್ಳದ್ದಾಗಿದೆ ಎಂಬುದನ್ನು 'ತದನ್ವಯವ್ಯತಿರೇಕ ಅನುವಿಧಾಯಿತ್ವ' ಎಂಬ ಹೇತುವಿನಿಂದ ಕಲ್ಪನೆ ಮಾಡಲಾಗುತ್ತದೆ. ಅದರಂತೆ ಪ್ರಕೃತದಲ್ಲೂ ಕೂಡ 'ತದನ್ವಯವ್ಯತಿರೇಕ ಅನುವಿಧಾಯಿತ್ವ' ಎಂಬ ಹೇತುವಿನಿಂದ ಸಂವಾದವು ಅಪ್ರಾಮಾಣ್ಯಶಂಕೆಯ ನಿವೃತ್ತಿ ಹಾಗೂ ಪ್ರಾಮಾಣ್ಯ ನಿಶ್ಚಯ ಎಂಬೆರಡು ಕಾರ್ಯಗಳಿಗೆ ಕಾರಣವಾಗಲಿ ಎಂಬ ಆಶಂಕೆಯನ್ನು 'ಬಾಧಕವತ್' ಎಂಬುದರಿಂದ ಹೇಳಿರುತ್ತಾರೆ.

ಬಾಧಕದಲ್ಲಿ ಅವ್ಯಭಿಚರಿತವಾದ ಅನ್ವಯವ್ಯತಿರೇಕವೆಂಬ ಕಾರಣತ್ವವಿದೆ. ಆದ್ದರಿಂದ ಅಲ್ಲಿ ಎರಡು ಕಾರ್ಯಗಳಿಗೆ ಕಾರಣತ್ವವನ್ನು ಒಪ್ಪುವುದು ಅನಿವಾರ್ಯ. ಪ್ರಕೃತದಲ್ಲಿ ಅವ್ಯಭಿಚರಿತವಾದ ಅನ್ವಯ ವ್ಯತಿರೇಕಗಳು ಇರುವುದಿಲ್ಲ. ಏಕೆಂದರೆ ಸುಖಜ್ಞಾನವು ಬಂದಾಗ ಅದರಲ್ಲಿ ಅಪ್ರಾಮಾಣ್ಯಸಂಶಯವೇ ಬರುತ್ತಿಲ್ಲ. ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವನ್ನು ತಿಳಿಯಲು ಸಂವಾದದ ಅಪೇಕ್ಷೆಯೂ ಕೂಡ ಇರುವುದಿಲ್ಲ. ಹೀಗೆ ವ್ಯಭಿಚಾರ ಇರುವುದರಿಂದ ಎರಡೂ ಕಡೆಯೂ ಸಂವಾದವು ಕಾರಣವಾಗುತ್ತದೆಂದು ಸಮರ್ಥನೆ ಮಾಡಲಾಗದು. ಈ ಅಭಿಪ್ರಾಯದಿಂದ 'ಅಪ್ರಾಮಾಣ್ಯಶಂಕಾಶೂನ್ಯಸ್ಯ' ಎಂಬುದಾಗಿ ಗ್ರಂಥದಲ್ಲಿ ಹೇಳಿರುತ್ತಾರೆ. ಬಾಧಕವಿಲ್ಲದೆಯೇ ಅಪ್ರಾಮಾಣ್ಯ ಜ್ಞಾನವು ಬರುವುದಾದರೆ ವ್ಯತಿರೇಕ ವ್ಯಭಿಚಾರವು ಬರುತ್ತದೆ. ಆದರೆ ಸುಖಜ್ಞಾನದಲ್ಲಿ ಅಪ್ರಾಮಾಣ್ಯಶಂಕೆಯೇ ಇರುವುದಿಲ್ಲ. ಆದರೂ

ಬಾಧಕ ಪ್ರಮಾಣವಿಲ್ಲದಿದ್ದಾಗ ಅಪ್ರಾಮಾಣ್ಯ ನಿಶ್ಚಯವು ಉಂಟಾಗುತ್ತಿಲ್ಲ. ಪ್ರಾಮಾಣ್ಯ ನಿಶ್ಚಯವೇ ಉಂಟಾಗುತ್ತಿದೆ. ಹೀಗೆ ಅಪ್ರಾಮಾಣ್ಯ ಜ್ಞಪ್ತಿಯಲ್ಲಿ ಬಾಧಕಕ್ಕೆ ವ್ಯತಿರೇಕ ವ್ಯಭಿಚಾರವಿಲ್ಲ ಎಂಬುದನ್ನು 'ಬಾಧಕೇನವಿನಾ' ಎಂಬ ವಾಕ್ಯದಿಂದ ಹೇಳಿದ್ದಾರೆ.

'ಉಕ್ತ ಪ್ರತಿಕೂಲತರ್ಕ' ಎಂಬಲ್ಲಿ 'ಉಕ್ತ' ಎಂಬ ಪದಕ್ಕೆ ಅನವಸ್ಥಾ ಎಂಬ ಪ್ರತಿಕೂಲ ತರ್ಕ ಎಂದರ್ಥ. ಅನುಕೂಲ ತರ್ಕ ಎಂದರೆ 'ಅಸ್ತು ಸಂಶಯವಿಷಯತ್ವಂ ಮಾಸ್ತು ಪರತೋ ಜ್ಞೇಯತ್ವಂ' ಎಂಬಲ್ಲಿ ಬಾಧಕವಿಲ್ಲದಿರುವುದರಿಂದ ಎಂದರ್ಥ.

### ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದಾಗ ಸಂಶಯವನ್ನೂ ಕೂಡ ಕೂಡಿಸಬಹುದು

**भावदीपः** – धर्मिग्राहकेण तत्प्रामाण्याग्रहणे स्वतस्त्वभङ्गापत्या प्रामाण्य-ग्रहणावश्यंभावे विशेषदर्शनात्संशयानुपपत्तिरेवानुकूलतर्क इत्यत आह – **संशयस्य चेति ।।** यथा परमते जातिव्यक्त्योरेकवित्तिवेद्यत्वनियमेपि इदमिति शुक्तिज्ञाने सत्यपि सादृश्यादिदोषवशाच्छुक्तित्वाज्ञानेनेदं रूप्यमित्यादिभ्रमस्तथेहापि धर्मिज्ञाने सत्यपि तत्र तात्पर्यभ्रमादिजन्यत्वादिशङ्कारूपदोषवशात्प्रामाण्याग्रहणोपपत्त्या संशयोपपत्तेरित्यर्थः ।

ಧರ್ಮಿಗ್ರಾಹಕದಿಂದ ತತ್‌ಪ್ರಾಮಾಣ್ಯವು ಗೃಹೀತವಾಗುವುದಿಲ್ಲ ಎನ್ನುವುದಾದರೆ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಗ್ನ ಬರುತ್ತದೆ. ಆದ್ದರಿಂದ ಧರ್ಮಿಗ್ರಾಹಕದಿಂದ ತತ್‌ಪ್ರಾಮಾಣ್ಯವು ಗೃಹೀತವಾಗುತ್ತದೆಂದು ಅವಶ್ಯವಾಗಿ ಅಂಗೀಕಾರ ಮಾಡಲೇಬೇಕು. ಆಗ ಕೋಟಿನಿಶ್ಚಯವಾಗಿರುವ ಕಾರಣ ಸಂಶಯ ಬರಲು ಸಾಧ್ಯವೇ ಇಲ್ಲ. 'ಯದಿ ಪ್ರಾಮಾಣ್ಯಂ ಸ್ವತಃ ಸ್ಯಾತ್ ತರ್ಹಿ ಸಾಂಶಯಿಕತ್ವಮಪಿ ನ ಸ್ಯಾತ್' 'ಒಂದುವೇಳೆ ಪ್ರಾಮಾಣ್ಯವನ್ನು ಸ್ವತಃ ಎಂದು ಒಪ್ಪಿದರೆ ಸಂಶಯವೇ ಬರದೇ ಇರಬೇಕಾದೀತು' ಎಂಬುದನ್ನೇ ಅನುಕೂಲತರ್ಕವನ್ನಾಗಿ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಸಂಶಯಸ್ಯಚ' ಎಂಬ ಟೀಕಾ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ತಾರ್ಕಿಕರು ಜಾತಿ ಮತ್ತು ವ್ಯಕ್ತಿಗಳು 'ತುಲ್ಯವಿತ್ತಿವೇದ್ಯ' ಆಗಿದೆ ಎಂಬ ನಿಯಮವನ್ನು ಒಪ್ಪುತ್ತಾರೆ. ಅಂದರೆ ಘಟವು ತಿಳಿಯುವಾಗಲೇ ಅದರಲ್ಲಿರುವ ಜಾತಿಯೂ ಕೂಡ ಅದೇ ಇಂದ್ರಿಯದಿಂದ ತಿಳಿಯುತ್ತದೆ ಎಂದು ಒಪ್ಪುತ್ತಾರೆ. ಹೀಗೆ ನಿಯಮವನ್ನು ಮಾಡಿಕೊಂಡಿದ್ದರೂ ಕೂಡ ಶುಕ್ತಿಯನ್ನು ನೋಡಿ 'ಇದಂ ರಜತಂ' ಎಂಬ ಭ್ರಾಂತಿ ಸ್ಥಳದಲ್ಲಿ 'ಇದಂ' ಎಂಬುದಾಗಿ ಶುಕ್ತಿ ಇದ್ದರೂ ಕೂಡ ಸಾದೃಶ್ಯಾದಿ ದೋಷಗಳಿಂದ ಅದರಲ್ಲಿರುವ ಶುಕ್ತಿತ್ವಎಂಬ ಜಾತಿ ಜ್ಞಾನವು ಬಂದಿರುವುದಿಲ್ಲ. ಆದ್ದರಿಂದ 'ಇದಂ

ರೂಪ್ಯಂ' ಎಂಬ ಭ್ರಾಂತಿಯು ಪ್ರಾಪ್ತವಾಗಿದೆ ಎಂಬುದಾಗಿ ತಾರ್ಕಿಕರು ಹೇಳುತ್ತಾರೆ. ಇದರಂತೆ ನಾವೂ ಕೂಡ ಧರ್ಮಿಜ್ಞಾನ ಇದ್ದರೂ ಕೂಡ ತಾತ್ಪರ್ಯಭ್ರಮೆ ಮೊದಲಾದ ದೋಷಗಳ ಶಂಕೆಯಿಂದ ಪ್ರಾಮಾಣ್ಯವು ಗೃಹೀತವಾಗಿಲ್ಲ ಎಂದು ಹೇಳುತ್ತೇವೆ. ಯಾವಾಗ ಪ್ರಾಮಾಣ್ಯವು ಗೃಹೀತವಾಗಿಲ್ಲವೋ ಅಂತಹ ಸಂದರ್ಭದಲ್ಲಿ ಕೋಟಿ ನಿಶ್ಚಯವಾಗದ ಕಾರಣ ಸಂಶಯವು ಉಪಪನ್ನವಾಗುತ್ತದೆ.

### ಹೆಚ್ಚಿನ ವಿಚಾರಕ್ಕೆ ತರ್ಕತಾಂಡವ ಓದಬೇಕು

**भावदीपः** – प्राचीनतार्किकमतावष्टंभेनाह॥ **स्वतस्त्वेनेति**॥ बौद्धचार्वाकादिविप्रतिपत्त्याऽनुमानप्रामाण्येपि संशयदर्शनादित्यर्थः। यद्वा लिङ्गादिज्ञानप्रामाण्यसन्देहे न तज्जन्यानुमितिसंशयदर्शनादित्यर्थः। हेतोर्भागासिद्धिं चाह – **अनभ्यासेति॥ इत्यलमिति॥** विस्तरस्तु तर्कताण्डवे।

ಪ್ರಾಚೀನ ತಾರ್ಕಿಕರ ಮತವನ್ನು ಅವಲಂಬಿಸಿ 'ಸ್ವತಸ್ತ್ವೇನ' ಇತ್ಯಾದಿ ವಾಕ್ಯವು ಹೊರಟಿದೆ. ಪ್ರಾಚೀನ ತಾರ್ಕಿಕರು ಉಪಮಿತಿ ಅನುಮಿತಿಗಳಲ್ಲಿ ಪ್ರಾಮಾಣ್ಯ ಸ್ವತಸ್ತ್ವವನ್ನು ಒಪ್ಪಿರುವುದಿಲ್ಲ. ಆದರೂ ಕೂಡ ಸಂಶಯವು ಪ್ರಾಪ್ತವಾಗುತ್ತದೆ. ಏಕೆಂದರೆ ಬೌದ್ಧಚಾರ್ವಾಕಾದಿಗಳು ಅನುಮಾನವನ್ನು ಪ್ರಮಾಣವೆಂದು ಒಪ್ಪದ ಕಾರಣ ವಿಪ್ರತಿಪತ್ತಿಯ ಮೂಲಕ ಅನುಮಾನ ಪ್ರಾಮಾಣ್ಯದಲ್ಲೂ ಕೂಡ ಸಂಶಯವು ಬರುವುದು ಕಂಡಿದೆ.

ಅಥವಾ ಅನುಮಿತಿಯನ್ನು ಕುರಿತು ಲಿಂಗಜ್ಞಾನ, ಪಕ್ಷಧರ್ಮತಾ ಜ್ಞಾನ, ವ್ಯಾಪ್ತಿಜ್ಞಾನ ಮೊದಲಾದವುಗಳು ಕಾರಣವಾಗಿವೆ. ಇವುಗಳಲ್ಲಿರುವ ಪ್ರಾಮಾಣ್ಯದಲ್ಲಿ ಸಂದೇಹವು ಬಂದರೆ ಅನುಮಿತಿಯ ಪ್ರಾಮಾಣ್ಯದಲ್ಲೂ ಕೂಡ ಸಂದೇಹವು ಬರುತ್ತದೆ. ಹೀಗೆ ತಾರ್ಕಿಕರು ಒಪ್ಪಿದಂತೆ ನಾವೂ ಕೂಡ ಪ್ರಕೃತದಲ್ಲಿ ಸಂಶಯವನ್ನು ಉಪಪಾದನೆ ಮಾಡುತ್ತೇವೆ.

ಅಭ್ಯಾಸನಿರತಸ್ಥಳದಲ್ಲಿ ಸಂಶಯವು ಬರುವುದರಿಂದ ಹೇತುವಿಗೆ ಭಾಗಾಸಿದ್ಧಿದೋಷವನ್ನು 'ಅನಭ್ಯಾಸದಶಾಯಾಂ' ಎಂಬ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ. 'ಇತ್ಯಲಮ್' ಎಂದರೆ ಇನ್ನೂ ಹೆಚ್ಚಿನ ವಿಚಾರವನ್ನು ತರ್ಕತಾಂಡವ ಗ್ರಂಥವನ್ನು ಓದಿ ತಿಳಿಯಬೇಕು ಎಂದರ್ಥ.

'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರಭಾಗಕ್ಕೆ ಮತ್ತೊಂದು ವ್ಯಾಖ್ಯಾನ

**भावदीपः** – भाष्ये श्रुतेश्चेत्यस्य स्वतश्च प्रामाण्यमिति साध्येनान्वयं दर्शयन्नाह – **वेदस्येति ।।** स्वतः संवादानपेक्षज्ञानग्राह्येत्यर्थः।। **श्रुतिंचेति ।।** तेनभाष्येश्रुतेश्चेति चशब्देनानवस्थितेरित्युक्तहेतुसमुच्चय इति सूचितम् । तथात्वं च शब्दादिति सूत्रखण्डस्यैकमर्थमुक्त्वार्थान्तरोक्तिपरं भाष्यं नित्यत्वं चेत्यादि। तद्व्याचष्टे – **वेदस्य नित्यत्वमिति ।।**

ಭಾಷ್ಯದಲ್ಲಿರುವ 'ಶ್ರುತೇಶ್ಚ' ಎಂಬುದಕ್ಕೆ 'ಸ್ವತಶ್ಚಪ್ರಾಮಾಣ್ಯಂ' ಎಂಬ ಸಾಧ್ಯದ ಜೊತೆ ಅನ್ವಯವನ್ನು ತಿಳಿಯಬೇಕು. ಆಗ ಈ ಶ್ರುತಿಪ್ರಾಮಾಣ್ಯದಿಂದಲೂ ಕೂಡ ಸ್ವತಃಪ್ರಾಮಾಣ್ಯವು ಸಿದ್ಧವಾಗುತ್ತದೆ ಎಂಬರ್ಥವು ದೊರೆಯುತ್ತದೆ. ಇದನ್ನು ಟೀಕೆಯಲ್ಲಿ 'ವೇದಸ್ಯ' ಇತ್ಯಾದಿ ವಾಕ್ಯದಿಂದ ಸಾಧಿಸಿದ್ದಾರೆ. 'ಸ್ವತಃ' ಎಂಬ ಪದಕ್ಕೆ ಸಂವಾದ ಅನಪೇಕ್ಷಿತವಾದ ಜ್ಞಾನಗ್ರಾಹ್ಯವಾದದ್ದು ಎಂದರ್ಥ. 'ಶ್ರುತಿಂಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಭಾಷ್ಯದಲ್ಲಿ ಶ್ರುತೇಶ್ಚ ಎಂಬಲ್ಲಿರುವ ಚಶಬ್ದದಿಂದ 'ಅನವಸ್ಥಿತೇಃ' ಎಂಬಲ್ಲಿ ಹೇಳಲ್ಪಟ್ಟ ಹೇತುವನ್ನು ಸಮುಚ್ಚಯ ಮಾಡಬೇಕು ಎಂಬುದನ್ನು ಇದರಿಂದ ಸೂಚನೆ ಮಾಡಿದ್ದಾರೆ.

'ತಥಾತ್ವಂ ಚ ಶಬ್ದಾತ್' ಎಂಬ ಸೂತ್ರದಲ್ಲಿರುವ ಭಾಗಕ್ಕೆ ಒಂದು ಬಗೆಯಲ್ಲಿ ಇಲ್ಲಿಯತನಕ ವ್ಯಾಖ್ಯಾನ ಮಾಡಿದ್ದಾಯಿತು. ಈಗ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನ ಮಾಡಲು 'ನಿತ್ಯತ್ವಂ ಚ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ ಎಂಬುದಾಗಿ 'ವೇದಸ್ಯ ನಿತ್ಯತ್ವಂ' ಇತ್ಯಾದಿ ಟೀಕಾ ಗ್ರಂಥದಿಂದ ಸಾಧನೆ ಮಾಡುತ್ತಿದ್ದಾರೆ.

'ತಥಾತ್ವಂ' ಎಂಬ ಪದಕ್ಕೆ ದೆಹಲೀದೀಪನ್ಯಾಯದಿಂದ ಅನ್ವಯ

**भावदीपः** – ननु पूर्वं तथात्वमित्यस्याप्रामाण्यमित्यर्थं मत्वा पूर्वान्वितत्वेन भाषितत्वात्स्वतश्च प्रामाण्यमितिनित्यत्वं चेति च कस्यार्थ इत्यत आह – **अनेनेति ।।** स्वतश्चेत्यादि भाष्येणेत्यर्थः। तस्मै नूनमभिद्यवे वाचा विरूपनित्यया। वृष्णे चोदस्व सुष्टुतिमिति समग्रमन्त्रार्थमाह – **तस्मा इति ।।**

ಹಿಂದೆ 'ತಥಾತ್ವಂ' ಎಂಬುದಕ್ಕೆ ಅಪ್ರಾಮಾಣ್ಯಂ ಎಂಬರ್ಥವನ್ನು ವಿವಕ್ಷಿಸಿ ಪಾಶುಪತಾದಿ ಸ್ಮೃತಿಗಳಂತೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬುದಾಗಿ ಹಿಂದಿನ ಪ್ರತಿಜ್ಞೆಯ ಜೊತೆ ಅನ್ವಯವನ್ನು ಮಾಡಲಾಯಿತು. ಹೀಗೆ ಹೇಳಿದರೆ 'ಸ್ವತಶ್ಚಪ್ರಾಮಾಣ್ಯಂ' ಎಂಬುದಕ್ಕೆ ಹಾಗೂ 'ನಿತ್ಯತ್ವಂ ಚ' ಎಂಬುದಕ್ಕೆ ಎಲ್ಲಿ ಅನ್ವಯ ಮಾಡಬೇಕು? ಎಂಬ ಪ್ರಶ್ನೆಗೆ 'ಅನೇನ'. ಎಂಬ ಟೀಕಾವಾಕ್ಯದಿಂದ ಉತ್ತರಿಸಿದ್ದಾರೆ. 'ಅನೇನ' ಎಂಬ ಪದಕ್ಕೆ 'ಸ್ವತಶ್ಚ' ಇತ್ಯಾದಿ ಭಾಷ್ಯದಿಂದ ಎಂದರ್ಥ.

ಸೂತ್ರದಲ್ಲಿರುವ 'ತಥಾತ್ವಂ' ಎಂಬ ಪದಕ್ಕೆ ಎರಡೂ ಕಡೆ ಅನ್ವಯವನ್ನು ತಿಳಿಯಬೇಕು. (೧) 'ಅಸ್ಯ ತಥಾತ್ವಂ ನ' ಎಂಬ ಪ್ರತಿಜ್ಞೆಯ ಜೊತೆ 'ಅಸ್ಯ ತಥಾತ್ವಂ ಚ ಶಬ್ದಾತ್' ಎಂಬ ಹೇತುವಿನ ಜೊತೆ ಎಂಬುದು ಇದರ ಅಭಿಪ್ರಾಯ.

'ತಸ್ಮೈ ನೂನಮಭಿದ್ಯವೇ ವಾಚಾ ವಿರೂಪನಿತ್ಯಯಾ ವೃಷ್ಣೇ ಚೋದಸ್ಯ ಸುಷ್ಟುತಿಮ್' ಎಂಬ ಸಮಗ್ರ ಮಂತ್ರದ ಅರ್ಥವನ್ನು 'ತಸ್ಮೈ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

### 'ಅನಾದಿನಿಧನಾ ನಿತ್ಯಾ' ಎಂಬ ಸ್ಮೃತಿಯಲ್ಲಿ ಪುನರುಕ್ತಿ ಇಲ್ಲ

**भावदीपः** – अभिद्यवे सर्वतः प्रकाशाय । वृष्णे अतिसमर्थाय। चोदस्व प्रेरय। स्वात्मनोऽन्यस्याभावादाह – **कुर्वित्यर्थ इति ।।** कस्यचिदृषेर्नाम विरूपेति। अपौनरुक्त्याय हेतुहेतुमद्भावेन व्याचष्टे ॥ **अनादिनिधनतयेति ।।** आद्यन्तशून्यतयेत्यर्थः। भाष्ये यथासूत्रं न चक्षुरित्यादि शब्दमात्रे वाच्येऽनवस्थितेरित्युपलक्षणतया युक्तेरप्युक्तेरुपयोगं वक्तुं शङ्कामाह – **न च वाच्यमिति ।।**

ಶ್ರುತಿಯಲ್ಲಿ 'ಅಭಿದ್ಯವೇ' ಎಂಬ ಪದಕ್ಕೆ 'ಎಲ್ಲ ರೀತಿಯಿಂದಲೂ ಪ್ರಕಾಶಮಾನನಾದ' ಎಂದರ್ಥ. 'ವೃಷ್ಣೇ' ಎಂಬ ಪದಕ್ಕೆ 'ಅತ್ಯಂತ ಸಮರ್ಥನಾದ' ಎಂದರ್ಥ. 'ಚೋದಸ್ವ' ಎಂಬ ಪದಕ್ಕೆ 'ಪ್ರೇರಣೆ ಮಾಡು' ಎಂದರ್ಥ. ತನ್ನನ್ನು ಬಿಟ್ಟು ಬೇರೆಯವರು ಇಲ್ಲದ ಕಾರಣ 'ಪ್ರೇರಯ' ಎಂಬ ಪದಕ್ಕೆ 'ಕುರು' ಎಂದರ್ಥವನ್ನು ಹೇಳಿರುತ್ತಾರೆ. ವಿರೂಪ ಎಂಬುದು ಒಬ್ಬ ಋಷಿಯ ಹೆಸರು. ತನ್ನನ್ನು ಕುರಿತು ತಾನೇ ಸಂಬೋಧನೆ ಮಾಡಿಕೊಂಡು ಹೇಳಿದ ವೇದಮಂತ್ರವಿದು.

'ಅನಾದಿನಿಧನಾ ನಿತ್ಯಾ' ಎಂಬ ಸ್ಮೃತಿವಾಕ್ಯದಲ್ಲಿ 'ಅನಾದಿ' ಎಂಬ ಪದಕ್ಕೂ 'ನಿತ್ಯ' ಎಂಬ ಪದಕ್ಕೂ ಪುನರುಕ್ತಿಯು ಬರಬಾರದೆಂಬ ದೃಷ್ಟಿಯಿಂದ ಹೇತುಹೇತುಮದ್ಭಾವವನ್ನು ವಿವಕ್ಷಿಸಿ 'ಅನಾದಿನಿಧನತಯಾ'

ಇತ್ಯಾದಿ ವ್ಯಾಖ್ಯಾನ ಮಾಡಿದ್ದಾರೆ. 'ಅನಾದಿನಿಧನತಯಾ' ಎಂಬ ಪದಕ್ಕೆ ಆದ್ಯಂತಗಳು ಇಲ್ಲದ್ದರಿಂದ ಎಂದರ್ಥ.

ಭಾಷ್ಯದಲ್ಲಿ ಸೂತ್ರಕ್ಕೆ ಅನುಗುಣವಾಗಿ 'ನ ಚಕ್ಷುಃ' ಎಂಬ ಶ್ರುತಿವಾಕ್ಯವನ್ನಷ್ಟೇ ಉದಾಹರಿಸಿದ್ದರೆ ಸಾಕಾಗಿತ್ತು. 'ಅನವಸ್ಥಿತೇಃ' ಎಂಬ ಯುಕ್ತಿಯನ್ನು ಉಪಲಕ್ಷಣಯಾ ವಿವಕ್ಷಿಸಬೇಕು ಎಂಬುದನ್ನು ತಿಳಿಸಲು ಶಂಕಾ ಪೂರ್ವಕವಾಗಿ ಸಮರ್ಥನೆ ಮಾಡಲು 'ನ ಚ ವಾಚ್ಯಂ' ಇತ್ಯಾದಿ ವಾಕ್ಯವು ಹೊರಟಿದೆ.

### 'ವಿವದಮಾನಂ' ಎಂಬ ಪಾಠಕ್ಕೆ ಸಾಧುತ್ವ ಸಮರ್ಥನೆ

**भावदीपः** – विवदमानमितिपाठः साधुः। भासनोपसंभाषाज्ञानयत्नविमत्युपमंत्रणेषु वद इत्यात्मनेपदविधानात्। विवदन्तमितिपाठे तु चान्द्रादयस्तु मन्यन्ते सर्वस्मादुभयं पदमित्युक्तेः परस्मैपदं समाधेयम् ॥ **आपादनेति** ॥ अन्यहेतुकस्याप्रामाण्यस्याभावं स्वीकृत्य विसंवादहेतुकाप्रामाण्यशङ्कामात्रस्य क्रियमाणत्वादित्यर्थः। सूत्रे शब्दादित्युपलक्षणमिति भावेनाह – **युक्तेश्चेति** ॥

ಕೆಲವು ಪುಸ್ತಕಗಳಲ್ಲಿ 'ವಿವದಂತಂ' ಎಂಬ ಪಾಠವಿದೆ. ಅದಕ್ಕಿಂತ 'ವಿವದಮಾನಂ' ಎಂಬ ಪಾಠವೇ ಸಾಧುವಾಗಿದೆ. ಏಕೆಂದರೆ 'ಭಾಸನೋಪಸಂಭಾಷಾಜ್ಞಾನಯತ್ನವಿಮತ್ಯುಪಮಂತ್ರಣೇಷು ವದಃ' ಎಂಬ ಸೂತ್ರದಲ್ಲಿ 'ವದ' ಎಂಬುದಕ್ಕೂ ಆತ್ಮನೇಪದವನ್ನೇ ವಿಧಾನ ಮಾಡಲಾಗಿದೆ. ಒಂದುವೇಳೆ 'ವಿವದಂತಂ' ಪಾಠವನ್ನು ವಿವಕ್ಷಿಸುವುದಾದರೆ 'ಚಾಂದ್ರಾದಯಸ್ತು ಮನ್ಯಂತೇ ಸರ್ವಸ್ಮಾದುಭಯಂ ಪದಂ' ಎಂಬ ಪ್ರಮಾಣದ ಆಧಾರದಲ್ಲಿ ಪರಸ್ಮೈಪದವನ್ನು ತಿಳಿಯಬೇಕು.

'ಆಪಾದನಮಾತ್ರಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಬೇರೆ ಕಾರಣದಿಂದ ಅಪ್ರಾಮಾಣ್ಯ ಬರುವುದಿಲ್ಲವೆಂದು ಒಪ್ಪಿ ವಿಸಂವಾದವೆಂಬ ಹೇತುವಿಂದಷ್ಟೇ ಅಪ್ರಾಮಾಣ್ಯವನ್ನು ಆಶಂಕಿಸುವುದರಿಂದ ಎಂಬುದು ಇದರ ಅಭಿಪ್ರಾಯ. ಸೂತ್ರದಲ್ಲಿ 'ಶಬ್ದಾತ್' ಎಂಬುದು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ 'ಯುಕ್ತೇಶ್ಚ' ಎಂಬ ವಾಕ್ಯವು ಹೊರಟಿದೆ.

### ಸೂತ್ರದಲ್ಲಿ ಯುಕ್ತಿಯೂ ಕೂಡ ವಿವಕ್ಷಿತ

**भावदीपः** – वेदस्य नित्यत्वे देवतानय भाष्ये स्वतः प्रामाण्ये चात्र

युक्तेरुपन्यस्तत्वादित्यर्थः। तथा च श्रुतौ विवादेत्युक्त्या तयोः। साधनमस्त्वितिभावः। यद्वा युक्त्या वेदस्य नित्यत्वस्वतःप्रामाण्ययोः सिद्धिं मत्वा सूत्रेऽभ्युच्चयत्वेन शब्दादित्युक्तिरितिभावः॥ ४ ॥

ವೇದವು ನಿತ್ಯವಾಗಿದೆ ಎಂಬ ವಿಷಯವನ್ನು ದೇವತಾಧಿಕರಣದ ಭಾಷ್ಯದಲ್ಲಿ ಯುಕ್ತಿಬದ್ಧವಾಗಿ ಸಮರ್ಥಿಸಲಾಗಿದೆ. ಪ್ರಕೃತ ಸ್ವತಃಪ್ರಾಮಾಣ್ಯವಿಷಯವನ್ನು ಯುಕ್ತಿಬದ್ಧವಾಗಿ ಸಮರ್ಥಿಸಲಾಗಿದೆ ಎಂಬುದು ಇದರ ಅರ್ಥ. ಆದ್ದರಿಂದ ಶ್ರುತಿಯಲ್ಲಿ ಯಾರಿಗೆ ವಿವಾದವಿದೆಯೋ ಅಂತಹವರಿಗೆ ವೇದನಿತ್ಯತ್ವ ವಿಷಯದಲ್ಲಿ ಹಾಗೂ ಅದರ ಪ್ರಾಮಾಣ್ಯ ವಿಷಯದಲ್ಲಿ ಯುಕ್ತಿಗಳಿವೆ ಎಂದು ತಿಳಿಯಬೇಕು. ಅಥವಾ ಯುಕ್ತಿಯಿಂದ ವೇದಕ್ಕೆ ನಿತ್ಯತ್ವ ಹಾಗೂ ಪ್ರಾಮಾಣ್ಯಗಳು ಸಿದ್ಧವಾಗುತ್ತವೆ ಎಂಬುದನ್ನು ಒಪ್ಪಿಕೊಂಡು ಅಭ್ಯುಚ್ಚಯಕ್ಕೋಸ್ಕರ ಸೂತ್ರದಲ್ಲಿ ಶ್ರುತಿಪ್ರಾಮಾಣ್ಯವನ್ನು ಹೇಳಿರುತ್ತಾರೆ ಎಂಬುದೂ ಕೂಡ ಈ ವಾಕ್ಯದ ಅಭಿಪ್ರಾಯವಾಗಿದೆ.

## ಬ್ರಹ್ಮಸೂತ್ರ

### 'ದೃಶ್ಯತೇ ತು' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – दृश्यते तु ॥२॥**

ಸೂತ್ರಾರ್ಥ - ವೇದದಲ್ಲಿ ಹೇಳಿದ ಕರ್ಮಾನುಷ್ಠಾನದಿಂದ ಯೋಗ್ಯಾಧಿಕಾರಿಗಳಿಗೆ ಫಲವು ಖಂಡಿತವಾಗಿಯೂ ಲಭಿಸುತ್ತದೆ. ಆದ್ದರಿಂದ ವೇದವು ಅಪ್ರಮಾಣವೆಂದು ಆಶಂಕಿಸಬಾರದು.

'ತು' ಎಂಬ ಪದವು ವಿಶೇಷಾರ್ಥದಲ್ಲಿದ್ದೆ. ವೇದೋಕ್ತಫಲಕ್ಕೆ ಯೋಗ್ಯವಾದ ಅಧಿಕಾರಿವಿಶೇಷ ವರ್ಗಕ್ಕೆ ಶ್ರುತಿಯಲ್ಲಿ ಹೇಳಿದ ಫಲವು ದೃಶ್ಯತೇ = ಉಪಲಬ್ಧವಾಗುತ್ತಿದೆ. ಆದ್ದರಿಂದಲೂ ಅಪ್ರಾಮಾಣ್ಯವನ್ನು ಹೇಳಬಾರದು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ನ ವಿಲಕ್ಷಣತ್ವಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಯಾವುದು ಸ್ವತಃ ಪ್ರಮಾಣಗಳು

**।। दृश्यते तु ।।२।।**

**ब्रह्मसूत्रभाष्यम् – अधिकारिणां फलम् ।**

**भविष्यत्पुराणे च –**

**'ऋग्यजुस्सामाथर्वाख्या मूलरामायणं तथा ।**
**भारतं पञ्चरात्रं च वेदा इत्येव शब्दिताः ।।**
**पुराणानि च यानीह वैष्णवानि विदो विदुः ।**
**स्वतः प्रामाण्यमेतेषां नात्र किञ्चिद्विचार्यते ।।**

ಅನುವಾದ - ವೇದೋಕ್ತವಾದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುವುದಿಲ್ಲವೆಂಬ ಆಕ್ಷೇಪವು ತಪ್ಪು. ಯಾರು ನಿಜವಾದ ಅಧಿಕಾರಿಗಳಾಗಿರುತ್ತಾರೋ ಅವರು ವೇದೋಕ್ತಕರ್ಮಗಳನ್ನು ಅನುಷ್ಠಾನ ಮಾಡಿದರೆ ಉತ್ತಮವಾದ ಫಲವನ್ನು ಹೊಂದುತ್ತಾರೆ. ಭವಿಷ್ಯತ್‌ಪುರಾಣದ ವಚನದಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಹೀಗೆ ಸಮರ್ಥಿಸಲಾಗಿದೆ - ಋಗ್‌ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಮೂಲರಾಮಾಯಣ, ಮಹಾಭಾರತ, ಪಂಚರಾತ್ರ ಇವುಗಳೆಲ್ಲವೂ ವೇದವೆಂದೇ ಕರೆಸಿಕೊಳ್ಳುತ್ತವೆ. ಜ್ಞಾನಿಗಳು ಯಾವುದನ್ನು ವೈಷ್ಣವ ಪುರಾಣಗಳೆಂದು ಕರೆಯುತ್ತಾರೋ ಅವುಗಳು ಸ್ವತಃಪ್ರಮಾಣವಾಗಿವೆ. ಈ ವಿಷಯದಲ್ಲಿ ಸ್ವಲ್ಪವೂ ವಿಚಾರ ಮಾಡಬೇಕಾಗಿಲ್ಲ.

> ಪ್ರತಿಪದಾರ್ಥ -- ಯಾರು ವೇದಗಳಿಗೆ ಸ್ವತಃಪ್ರಾಮಾಣ್ಯವನ್ನು ಒಪ್ಪುತ್ತಾರೊ, ಅವರು ಕೂಡ ದೋಷವನ್ನು ಕಂಡಾಗ ಅಪ್ರಾಮಾಣ್ಯವನ್ನು ಒಪ್ಪಬೇಕು. ವೇದದಲ್ಲಿ ಹೇಳಿದ ಕರ್ಮಗಳನ್ನು ಆಚರಣೆ ಮಾಡಿದರೆ ಫಲವು ದೊರೆಯುತ್ತಿಲ್ಲ. ಆದ್ದರಿಂದ ಅಪ್ರಾಮಾಣ್ಯವನ್ನು ಹೇಳಬೇಕಲ್ಲವೆ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟದೆ. ಅಧಿ ಕಾರಿಣಾಂ = ಕರ್ಮವೈಗುಣ್ಯ ಮೊದಲಾದ ದೋಷಗಳಿಂದ ರಹಿತರಾದ ಯೋಗ್ಯರಾದ ಅಧಿಕಾರಿಗಳಿಗೆ, ಫಲಂ = ವೇದದಲ್ಲಿ ಹೇಳಿದ ಸಂಪೂರ್ಣ

ಫಲವು ದೊರೆಯುವುದು ಕಂಡಿದೆ. ಭವಿಷ್ಯತ್ಪುರಾಣೇ ಚ = ಭವಿಷ್ಯತ್ ಪುರಾಣದಲ್ಲಿ ವೇದಪ್ರಾಮಾಣ್ಯವನ್ನು ಹೀಗೆ ಸಮರ್ಥಿಸಿದ್ದಾರೆ - ಋಗ್ಯಜುಸ್ಸಾಮಾಥರ್ವಾಖ್ಯಾ = ಋಗ್‌ವೇದ ಯಜುರ್ವೇದ ಸಾಮವೇದ ಅಥರ್ವವೇದಗಳು, ತಥಾ = ಹಾಗೆಯೇ, ಮೂಲರಾಮಾಯಣಂ = ಮೂಲರಾಮಾಯಣವು, ಚ = ಮತ್ತು, ಭಾರತಂ = ಮಹಾಭಾರತವು, ಪಂಚರಾತ್ರಂ = ಪಂಚರಾತ್ರಾಗಮವು, ವೇದಾ ಇತ್ಯೇವ = ವೇದಗಳು ಎಂದೇ, ಶಬ್ದಿತಾಃ = ಕರೆಸಿಕೊಳ್ಳುತ್ತವೆ. ಇಹ = ಈ ಪುರಾಣಗಳ ಮಧ್ಯದಲ್ಲಿ, ವಿದುಃ = ಜ್ಞಾನಿಗಳು, ಯಾನಿ = ಯಾವುಗಳನ್ನು, ವೈಷ್ಣವಾನಿ ಪುರಾಣಾನಿ = ವಿಷ್ಣುವಿನ ಉತ್ಕರ್ಷವನ್ನು ಹೇಳುವ ಪುರಾಣಗಳೆಂದು, ವಿದೋ ವಿದುಃ = ತಿಳಿಯುತ್ತಾರೋ, ತಾನಿ ಚ = ಅವುಗಳೆಲ್ಲವೂ, ಸ್ವತಃ = ಮತ್ತೊಂದನ್ನು ಅಪೇಕ್ಷಿಪಡದೆ, ಪ್ರಾಮಾಣ್ಯಮ್ = ಪ್ರಾಮಾಣ್ಯವನ್ನು ಹೊಂದುತ್ತವೆ. ಏತೇಷಾಂ = ಈ ಪುರಾಣಗಳ ಪ್ರಾಮಾಣ್ಯಜ್ಞಾನದಲ್ಲಿ, ಕಿಂಚದ್ = ಸಂವಾದಿಗಳನ್ನು, ಅತ್ರ ಏತೇಷಾಂ = ಈ ಪುರಾಣಾದಿಗಳ ಪ್ರಾಮಾಣ್ಯ-ವಿಷಯದಲ್ಲಿ, ಕಿಂಚಿತ್ = ಸಂವಾದಿವಿಚಾರಗಳನ್ನು, ನ ವಿಚಾರ್ಯತೇ = ಹುಡುಕಬೇಕಾಗಿಲ್ಲ.

### ವೇದ ಹಾಗೂ ತದನುಸಾರಿಗಳಿಗೆ ಅಪ್ರಾಮಾಣ್ಯವಿಲ್ಲ

**ब्रह्मसूत्रभाष्यम् –**

**यीचेषूक्तं न दृश्येत पूर्वकर्मात्र कारणम् ।**
**नाप्रामाण्यं भवेदेषां दृश्यते ह्यधिकारतः ।।**

ಅನುವಾದ - ವೇದ ಮತ್ತು ವೇದಾನುಸಾರಿಯಾದ ಪುರಾಣಗಳಲ್ಲಿ ಯಾವ ಕರ್ಮಗಳನ್ನು ವಿಧಾನ ಮಾಡಿದ್ದಾರೋ ಅದನ್ನು ಅನುಷ್ಠಾನ ಮಾಡಿದರೆ ಫಲವು ಕೆಲವೊಮ್ಮೆ ದೊರೆಯುತ್ತಿಲ್ಲ. ಇಂಥ ಸಂದರ್ಭಗಳಲ್ಲಿ ಕರ್ತುವಿನ ವೈಗುಣ್ಯವನ್ನು ಅಥವಾ ಪ್ರಾಚೀನಕರ್ಮಗಳ ಪ್ರತಿಬಂಧಕತ್ವವನ್ನು ಊಹಿಸಬೇಕು. ಹೊರತು ಅಪ್ರಾಮಾಣ್ಯವನ್ನು ಊಹಿಸಬಾರದು.

ಪ್ರತಿಪದಾರ್ಥ -- ಆ ವಿಷಯದಲ್ಲಿ ಕರ್ತೃವಿನ ಪ್ರಾಚೀನಕರ್ಮವು ಅಥವಾ ಕರ್ಮದ ವೈಗುಣ್ಯದೋಷವು, ಕಾರಣಮ್ = ಕಾರಣವಾಗಿದೆ.

ಏಷಾಂ = ಈ ಪುರಾಣ ಮತ್ತು ವೇದಗಳಿಗೆ, ಅಪ್ರಾಮಣ್ಯಮ್ = ಅಪ್ರಾಮಾಣ್ಯವನ್ನು, ನ ಭವೇತ್ = ಎಂದೂ ಕೂಡ ಒಪ್ಪಬಾರದು, ಅಧಿಕಾರತಃ = ಯೋಗ್ಯರಾದ ಅಧಿಕಾರಿಗಳ ಯೋಗ್ಯತಾನುಸಾರವಾಗಿ, ಏಷಾಂ = ಇವುಗಳಿಗೆ, ದೃಶ್ಯತೇ = ಫಲವು ದೊರೆಯುವುದು ಕಾಣಸುತ್ತದೆ.

### ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯವಿದೆ

**ब्रह्मसूत्रभाष्यम् –**

**इतः प्रामाण्यमन्येषां न स्वतस्तु कथञ्चन ।**
**अदृश्योक्तौ ततस्तेषामप्रामाण्यं न संशयः ।। इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये नविलक्षणत्वाधिकरणम् ।। २ ।।**

ಅನುವಾದ - ಪಾಶುಪತಾದಿಸ್ಮೃತಿಗಳಿಗೆ ಸ್ವತಃಪ್ರಾಮಾಣ್ಯವನ್ನು ಎಂದೂ ಕೂಡ ಒಪ್ಪಲು ಸಾಧ್ಯವಿಲ್ಲ. ಪಾಶುಪತಸ್ಮೃತಿಗಳಲ್ಲಿ ವಿಧಿಸಲ್ಪಟ್ಟ ಕರ್ಮವನ್ನು ಆಚರಣೆ ಮಾಡಿದಾಗ ಫಲವು ದೊರೆಯದಿದ್ದರೆ ಅವುಗಳಿಗೆ ಅಪ್ರಾಮಾಣ್ಯವನ್ನು ಒಪ್ಪಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.

ಪ್ರತಿಪದಾರ್ಥ-- ಅನ್ಯೇಷಾಂ ತು = ಪಾಶುಪತಾದಿಶಾಸ್ತ್ರಗಳಾದರೂ, ಕಥಂಚನ = ಯಾವುದೇ ಕಾರಣದಿಂದಲೂ, ಇತಃ = ಫಲದರ್ಶದಿಂದಲೇ ಪ್ರಾಮಾಣ್ಯವನ್ನು ಬುದ್ಧಿದೋಷವನ್ನು ನಿರಾಸ ಮಾಡುವ ಮೂಲಕ ಒಪ್ಪಬೇಕು. ಹೊರತು ಸ್ವತಃ = ಪ್ರಾಮಾಣ್ಯವನ್ನು ಉತ್ಪತ್ತಿಯ ಮೂಲಕ, ಅದೃಶ್ಯೋಕ್ತೌ = ಅತೀಂದ್ರಿಯವಿಷದಲ್ಲಿ, ತೇಷಾಂ = ಶ್ರುತಿವಿರುದ್ಧವಾದ ಪಾಶುಪತಾದಿಶಾಸ್ತ್ರಗಳಿಗೆ, ಅಪ್ರಾಮಾಣ್ಯಂ = ಅಪ್ರಾಮಾಣ್ಯವನ್ನು ಹೇಳಲೇಬೇಕು, ನ ಸಂಶಯಃ = ಈ ವಿಷಯದಲ್ಲಿ ಯಾವುದೇ ಸಂಶಯವಿಲ್ಲ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ನ ವಿಲಕ್ಷಣತ್ವಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಋಗ್ಯಜುಃಸಾಮಗಳಿಗೆ ಸ್ವತಃ ಪ್ರಾಮಾಣ್ಯ

**सत्तर्कदीपावळिः – अधिकारसम्पत्तौ दृष्टार्थस्य कर्मणो वैदिकस्य फलदर्शनात् । कचित् फलादर्शनं प्रतिबन्धककर्मनिबन्धनमेव । नान्यथा । ऋग्यजुःसामादीनां स्वत एव प्रामाण्यनियमः । यत्र तु तदनुसारित्वं तत्र अन्यागमानामपि प्रामाण्यात् कचित् तदुक्तऐहिककर्मफलदर्शनं युज्यते । तदाह – दृश्यत इत्यादिना ।।**

ಎಲ್ಲಾ ಬಗೆಯ ಅಧಿಕಾರಸಂಪತ್ತಿಯು ಇದ್ದಾಗ ದೃಷ್ಟ ಫಲಕವಾದ ಕರ್ಮವನ್ನು ಆಚರಿಸಿದರೆ ಅಂಥ ವೇದವಾಕ್ಯಗಳಿಂದ ಫಲ ದೊರಕುವುದು ಕಾಣಸುತ್ತಿದೆ. ಕೆಲವೊಮ್ಮೆ ಫಲವು ದೊರಕದೇ ಇರಬಹದು. ಆದಕ್ಕೆ ಕಾರಣ ಪ್ರತಿಬಂಧಕವಾದ ಕರ್ಮವೆಂದು ತಿಳಿಯಬೇಕು. ಇದನ್ನು ಬಿಟ್ಟು ಬೇರೆ ರೀತಿಯಲ್ಲಿ ಚಿಂತನೆ ಮಾಡಬಾರದು. ಋಗ್ವೇದ, ಯಜುರ್ವೇದ, ಸಾಮವೇದಗಳಿಗೆ ಸ್ವಾಭಾವಿಕವಾಗಿಯೇ ಪ್ರಾಮಾಣ್ಯದ ನಿಯಮವಿದೆ. ಮತ್ತು ಇವುಗಳಿಗೆ ಅನುಸಾರಿಯಾದ ಬೇರೆ ಆಗಮಗಳಿಗೂ ಕೂಡ ಸ್ವಾಭಾವಿಕವಾಗಿ ಪ್ರಾಮಾಣ್ಯವಿದೆ. ಅನೇಕ ಕಡೆ ಇವುಗಳಲ್ಲಿ ಹೇಳಿದ ಐಹಿಕ ಕರ್ಮಗಳನ್ನು ಆಚರಣೆ ಮಾಡಿದಾಗ ಫಲ ದೊರಕುವುದು ಕಾಣಸುತ್ತಿದೆ. ಇದನ್ನೇ 'ದೃಶ್ಯತೇ ತು' ಎಂಬ ಸೂತ್ರದಿಂದ ಉಪಪಾದನೆ ಮಾಡುತ್ತಿದ್ದಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ನ ವಿಲಕ್ಷಣತ್ವಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ತತ್ವಪ್ರಕಾಶಿಕಾ

ವೇದೋಕ್ತವಾದದ್ದಕ್ಕೂ ವ್ಯಭಿಚಾರವಿದೆಯಲ್ಲವೇ?

**तत्वप्रकाशिका – यदुदितं नित्यत्वेन निर्दोषस्य वैदस्य नाप्रामाण्यमिति न तद्युक्तम् । तदुक्तफलस्यादर्शनात् ।**

ಹಿಂದೆ ವೇದವು ನಿತ್ಯವಾದ್ದರಿಂದ ನಿರ್ದುಷ್ಟವಾಗಿದೆ. ಆದ್ದರಿಂದ ಅಪ್ರಮಾಣವಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಆದರೆ ಇದು ಸರಿಯಲ್ಲ. ಏಕೆಂದರೆ ವೇದದಲ್ಲಿ ಹೇಳಲ್ಪಟ್ಟ ಕರ್ಮವನ್ನು ಆಚರಣೆ ಮಾಡಿದರೂ ಕೂಡ ಫಲವು ಕಾಣಿಸುತ್ತಿಲ್ಲ. ಆದ್ದರಿಂದ ವೇದವು ಅಪ್ರಮಾಣ.

ಪ್ರಾಮಾಣ್ಯಸ್ವತಸ್ತ್ವವಾದಿಗೆ ಬರುವ ತೊಂದರೆ

**तत्वप्रकाशिका – यावता तदेवाप्रामाण्यं न च प्रामाण्यस्य स्वतस्त्वेन संवादानपेक्षितेत्युक्तमिति वाच्यम् । स्वतःप्रामाण्यवादिनाऽपि दोषदर्शनेऽप्रामाण्यस्यावश्यं ग्राह्यत्वात् ।**

ಅಪ್ರಾಮಾಣ್ಯವೆಂದರೆ 'ಕರ್ಮವನ್ನು ಆಚರಿಸಿದರೂ ಫಲವು ಕಾಣಿಸದಿರುವಿಕೆ' ಎಂದರ್ಥ. ಪ್ರಾಮಾಣ್ಯವನ್ನು ಸ್ವತಃ ಎಂದು ಸಮರ್ಥನೆ ಮಾಡಿರುವುದರಿಂದ ಫಲಸಂವಾದದ ಅಪೇಕ್ಷೆ ಇರುವುದಿಲ್ಲ. ಈ ವಿಷಯವನ್ನು ಈಗಾಗಲೇ ಸಮರ್ಥನೆ ಮಾಡಿದ್ದೇವಲ್ಲವೆ ? ಎಂದು ಪ್ರಶ್ನಿಸಬಾರದು. ಪ್ರಾಮಾಣ್ಯಸ್ವತಸ್ತ್ವವಾದಿಯೂ ಕೂಡ ದೋಷ ಕಂಡಾಗ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಅವಶ್ಯವಾಗಿ ಒಪ್ಪಿಕೊಳ್ಳಲೇಬೇಕು.

ವೇದವು ಅಪ್ರಮಾಣವೆಂದು ಪೂರ್ವಪಕ್ಷ

**तत्वप्रकाशिका – अयमेव हि दोषो यदुक्तस्यादर्शनमित्याशङ्कां परिहरत्सूत्रमुपन्यस्य तच्छेषं पूरयति – दृश्यते त्विति ।।**

ಫಲ ಕಾಣದಿರುವುವಿಕೆ ಎಂಬ ದೋಷವಿರುವುದರಿಂದ ವೇದವು ಅಪ್ರಮಾಣವಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮತ್ತು ಸೂತ್ರದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದ ಪದಗಳನ್ನು ಭಾಷ್ಯದಲ್ಲಿ ಉಲ್ಲೇಖಿಸುತ್ತಿದ್ದಾರೆ 'ದೃಶ್ಯತೇ ತು' ಇತ್ಯಾದಿಯಾಗಿ.

ಫಲ ದೊರೆಯದೇ ಇರಲು ಕರ್ತೃವೈಗುಣ್ಯವು ನಿಮಿತ್ತ

**तत्वप्रकाशिका – न फलादर्शनेन श्रुत्यादेरप्रामाण्यं वक्तव्यम् । फलादर्शनस्य कर्तृरयोग्यतयोपपत्तेः । तत्कुतः कल्प्यते । योग्यानां फलदर्शनात् ।**

ಫಲ ಕಾಣಸುತ್ತಿಲ್ಲವೆಂಬ ಕಾರಣದಿಂದ ಶ್ರುತ್ಯಾದಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ ಫಲವು ಕಾಣಸದಿರಲು ಬೇರೆ ಕಾರಣ ಇರಬಹುದು.

ಫಲ ಕಾಣಸದಿರಲು ವೇದವು ಅಪ್ರಮಾಣವಾಗಬೇಕಾಗಿಲ್ಲ. ಕರ್ತೃವಿನ ದೋಷದಿಂದ ಅಥವಾ ಫಲವನ್ನು ಪಡೆಯುವ ಯೋಗ್ಯತೆ ಕರ್ತೃವಿನಲ್ಲಿ ಇಲ್ಲದಿರುವುದರಿಂದ ಫಲವು ಕಾಣಸದಿರಬಹುದು. ಹೀಗೇಕೆ ಕಲ್ಪನೆ ಮಾಡಬೇಕು ? ಎಂದರೆ ಯೋಗ್ಯರಾದ ವ್ಯಕ್ತಿಗಳು ಅನುಷ್ಠಾನ ಮಾಡುವುದರಿಂದ ಫಲವು ಕಾಣಸುತ್ತಿದೆ. ಆದ್ದರಿಂದ ಫಲ ಕಾಣಸುತ್ತಿಲ್ಲವೆಂಬ ಕಾರಣದಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ.

ಪಾಶುಪತಾದಿ ಸ್ಮೃತಿಗಳಲ್ಲಿ ಇದು ಸಮಾನವಲ್ಲ

**तत्वप्रकाशिका – न च शङ्कनीयं पाशुपतादिस्मृत्युक्तफलव्यभिचारस्यापि कर्तृरयोग्यतानिबन्धनतोपपत्तेर्नाप्रामाण्यं योग्यानां फलदर्शनादिति ।**

ಪ್ರಶ್ನೆ - ಪಾಶುಪತಾದಿ ಸ್ಮೃತಿಗಳ ವಿಷಯದಲ್ಲಿಯೂ ಇದು ಸಮಾನ. ಪಾಶುಪತಾದಿ-ಸ್ಮೃತಿಗಳಲ್ಲಿ ಯಾವ ಕರ್ಮಗಳನ್ನು ಅನುಷ್ಠಾನ ಮಾಡಬೇಕೆಂದು ಹೇಳಿರುತ್ತಾರೋ ಅಂಥ ಫಲವು ದೊರೆಯದಿದ್ದರೆ ಕರ್ತೃವಿಗೆ ಯೋಗ್ಯತೆ ಇಲ್ಲವೆಂದೇ ಹೇಳುತ್ತೇವೆ. ಆದ್ದರಿಂದ ಫಲವ್ಯಭಿಚಾರದಿಂದ ಪಾಶುಪತಾದಿಸ್ಮೃತಿಗಳಿಗೂ ಕೂಡ ಅಪ್ರಾಮಾಣ್ಯವನ್ನು ಸಾಧಿಸಲಾಗದು.

ಉತ್ತರ - ಹೀಗೆ ಕಲ್ಪನೆ ಮಾಡಲು ಯಾವುದೇ ಆಧಾರವಿಲ್ಲ.

ವೇದಕ್ಕೆ ಹೀಗೆ ಒಪ್ಪಲು ಗಮಕವಿದೆ

**तत्वप्रकाशिका – कल्पकाभावात् । वेदस्य तु निर्दोषतया स्वतःप्रामाण्ये सिद्धेऽवश्यं व्यभिचारस्य गत्यन्तरं कल्पनीयम् । पाशुपतादीनां फलदर्शनमन्तरेण प्रामाण्यसाधकाभावात् ।**

ವೇದವು ನಿರ್ದುಷ್ಟವಾದ್ದರಿಂದ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗಿದೆ. ಹೀಗಿರುವಾಗ ಫಲವ್ಯಭಿಚಾರವು ಕಂಡರೆ ಅದಕ್ಕೆ ಕರ್ತೃವೈಗುಣ್ಯಾದಿ ಗತ್ಯಂತರವನ್ನು ಕಲ್ಪನೆ ಮಾಡಬೇಕು.

ಆದರೆ ಪಾಶುಪತಾದಿಸ್ಮೃತಿಗಳಿಗೆ ಫಲದರ್ಶನದಿಂದಷ್ಟೆ ಪ್ರಾಮಾಣ್ಯವನ್ನು ಸಾಧಿಸಲು ಸಾಧ್ಯ. ಫಲವ್ಯಭಿಚಾರದಿಂದ ಅಪ್ರಾಮಾಣ್ಯವನ್ನು ಒಪ್ಪುವುದು ಅನಿವಾರ್ಯವಾಗುತ್ತದೆ.

ಪಾಶುಪತಸ್ಮೃತಿಯು ಸ್ವತಃ ಪ್ರಮಾಣವಲ್ಲ

**तत्वप्रकाशिका – तस्यापि स्वतःप्रामाण्यमिति चेत् । सत्यम् । निर्दोषत्वानिर्णये फलविसंवाददर्शनेनाप्रामाण्यप्राप्तेरेवोक्तत्वादिति भावः ।**

ಪ್ರಶ್ನೆ- ವೇದದಂತೆ ಪಾಶುಪತಾದಿಶಾಸ್ತ್ರಗಳಿಗೂ ಕೂಡ ಸ್ವತಃಪ್ರಾಮಾಣ್ಯವನ್ನು ಒಪ್ಪಬಹುದಲ್ಲವೆ?

ಉತ್ತರ - ಇದು ಸರಿಯಲ್ಲ. ಏಕೆಂದರೆ ಪಾಶುಪತಾದಿಸ್ಮೃತಿಗಳ ನಿರ್ದೋಷತ್ವವು ಇನ್ನು ಕೂಡ ನಿರ್ಧಾರವಾಗಿಲ್ಲ. ಅಷ್ಟೇ ಅಲ್ಲದೆ ಫಲಸಂವಾದವೇ ಕಾಣಸುತ್ತಿದೆ. ಆದ್ದರಿಂದ ಅಪ್ರಾಮಾಣ್ಯವೇ ಸಿದ್ಧವಾಗುತ್ತದೆ. ಹೊರತು ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಈ ವಿಷಯವನ್ನು ಹಿಂದೆಯೇ ನಾವು ಹೇಳಿರುತ್ತೇವೆ.

ಸೂತ್ರದಲ್ಲಿರುವ ತು ಶಬ್ದದ ವ್ಯಾಖ್ಯಾನ

**तत्वप्रकाशिका – तुशब्दः कर्तृविशेषद्योतकः । अधिकारित्वं नाम तत्फलयोग्यत्वं कर्मवैगुण्यप्रतिबन्धादिशून्यत्वं वा।**

ಸೂತ್ರದಲ್ಲಿರುವ 'ತು'ಶಬ್ದವು ಕರ್ತೃವಿಶೇಷವನ್ನು ತಿಳಿಸುತ್ತಿದೆ. ಎಲ್ಲಾ ಬಗೆಯ ಕರ್ತೃಗಳಿಗೂ ವೇದೋಕ್ತಕರ್ಮದಲ್ಲಿ ಅಧಿಕಾರವಿಲ್ಲ. ವಿಶೇಷ ಅಧಿಕಾರಿಗಳಿಗೆ ಮಾತ್ರ ಅಂಥ ಕರ್ಮಾಚರಣೆಯ ಯೋಗ್ಯತೆ ಇರುತ್ತದೆಂದು ಇದರ ಅಭಿಪ್ರಾಯ.

ಅಧಿಕರಣ ಪ್ರಮೇಯಕ್ಕೆ ಸ್ಮೃತಿಯ ಆಧಾರ

**तत्वप्रकाशिका – अधिकरणार्थे स्मृतिं चाह – भविष्यत्पुरणे चेति ।।**

'ಅಧಿಕಾರ' ಎಂದರೆ 'ತತ್‌ಫಲಯೋಗ್ಯತ್ವಮ್' 'ಕರ್ಮಫಲವನ್ನು ಪಡೆಯುವ ಅರ್ಹತೆ' ಎಂದರ್ಥ. ಅಥವಾ 'ಕರ್ಮವೈಗುಣ್ಯಪ್ರತಿಬಂಧಶೂನ್ಯತ್ವ' 'ಕರ್ಮದಲ್ಲಿ ನ್ಯೂನತೆ ಮೊದಲಾದ ಪ್ರತಿಬಂಧಕಗಳು ಇಲ್ಲದಿರುವಿಕೆ' ಎಂದರ್ಥ. ಸಂಪೂರ್ಣ ಅಧಿಕರಣದ ಅಭಿಪ್ರಾಯವನ್ನು ಭವಿಷ್ಯತ್- ಪುರಾಣದ ವಚನವು ಸ್ಪಷ್ಟಪಡಿಸುತ್ತಿದೆಂಬುದನ್ನು 'ಭವಿಷ್ಯತ್‌ಪುರಾಣೇ ಚ' ಇತ್ಯಾದಿ ಭಾಷ್ಯದಲ್ಲಿ ಹೇಳಿರುತ್ತಾರೆ.

ಫಲವು ಕಾಣಿಸದಿರಲು ಕಾರಣವೇನು ?

**तत्वप्रकाशिका – स्वतःफलसंवादादिरहितनिर्दोषतयैव । पूर्वकर्मान्योपलक्षणम्।**

ಈ ಭವಿಷ್ಯತ್‌ಪುರಾಣದ ವಚನದಲ್ಲಿ 'ಸ್ವತಃ' ಎಂಬ ಪದವಿದೆ. ಇದಕ್ಕೆ 'ಫಲಸಂವಾದದ ಅಪೇಕ್ಷೆ ಇಲ್ಲದೆ ನಿರ್ದುಷ್ಟವಾದ್ದರಿಂದ' ಎಂದರ್ಥ. ಅಥವಾ 'ಫಲವು ಕಾಣಿಸದಿರಲು ಹಿಂದಿನ ಕರ್ಮವು ಕಾರಣವಾಗಿದೆ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ವೇದಪ್ರಾಮಾಣ್ಯವು ಯುಕ್ತಿವಿರುದ್ಧವಲ್ಲ

**तत्वप्रकाशिका – इतः फलदर्शनतः । अदृश्योक्तौ अनुपलभ्यमानवचने । अतो वेदादिप्रामाण्यस्य युक्तिविरुद्धत्वाभावाद्युक्तं तेन हरेजगत्काणत्वमिति सिद्धम् ।।५।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**न विलक्षणत्वाधिकरणम् ।।**

'ಇತಃ' ಎಂಬ ಪದಕ್ಕೆ ಫಲದರ್ಶನದಿಂದ ಎಂದರ್ಥ. 'ಅದೃಶ್ಯೋಕ್ತೌ' ಎಂದರೆ ಯಾವ ಫಲವನ್ನು ಹೇಳಿರುತ್ತಾರೋ ಅದು ಕಾಣಿಸದಿದ್ದಾಗ ಎಂದರ್ಥ. ಹೀಗೆ ವೇದಪ್ರಾಮಣ್ಯವು ಯುಕ್ತಿವಿರುದ್ಧವಲ್ಲ ಎಂದು ಈ ಸೂತ್ರದಿಂದ ಸಿದ್ಧವಾಗುತ್ತದೆ. ಇಂಥ ನಿರ್ದುಷ್ಟವಾದ ವೇದದಿಂದ ಶ್ರೀಹರಿಯಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಸಿದ್ಧವಾಗುತ್ತದೆ.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ನ ವಿಲಕ್ಷಣತ್ವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ಭಾವದೀಪ

**भावदीपः – ।। दृश्यते तु ।।** सूत्रे फलदृष्ट्युक्तिर्नप्रामाण्यज्ञप्त्यै स्वतस्त्वभङ्गापत्तेः। किन्तु क्वचिददृष्टेर्गतिं वक्तुं स्मृत्यनुरोधादिति भावेनोक्तशङ्कां निरस्यन्व्याचष्टे – **न फलेति ।।** योग्यानां फलाधिकारिणां प्रतिबन्धकशून्यानामित्यर्थः। भाष्येऽधिकारिणामिति सौत्रतुशब्दार्थ इत्याह – **तु शब्द इति ।। अधिकारित्वं नामेति ।।** कर्मवैगुण्यप्रतिबन्धादिशून्यत्वरूपयोग्यत्वमधिकारित्वमित्यर्थः ॥**अधिकरणार्थ इति ।।** भाष्ये सार्धश्लोकेन स्मृतेः श्रुत्यनुसारित्वोक्तिरित्याहुः॥ **अन्येति ।।** कर्मवैगुण्योपलक्षण-मित्यर्थः॥ **अत इति ।।** शैवादिस्मृतिप्रामाण्यवैलक्षण्यात् विसंवादस्य वैगुण्यादि-हेतुकत्वाच्चेत्यर्थः॥

**।। इति राघवेन्द्रयतिकृते भावदीपे न विलक्षणत्वाधिकरणम् ।।**

ಸೂತ್ರದಲ್ಲಿ ಫಲವು ಕಾಣಸುತ್ತದೆಂದು ಹೇಳಿರುವುದು ಪ್ರಾಮಾಣ್ಯದ ಜ್ಞಾನಕ್ಕೋಸ್ಕರ ಅಲ್ಲ. ಹಾಗೇನಾದರೂ ಹೇಳಿದರೆ ಸ್ವತಸ್ತ್ವವೇ ಭಂಗವಾಗುತ್ತದೆ. ಆದ್ದರಿಂದ ಎಲ್ಲಿಯಾದರೂ ಫಲವು ಕಾಣಿಸಿಲ್ಲ ಎಂದರೆ ಅಂತಹ ಸಂದರ್ಭದಲ್ಲಿ ಅದಕ್ಕೇನು ಕಾರಣ ಎಂಬ ಸಮರ್ಥನೆಗೋಸ್ಕರ ಸ್ಮೃತಿವಾಕ್ಯಕ್ಕೆ ಅನುಗುಣವಾಗಿ ಹಿಂದಿನ ಆಶಂಕೆಯನ್ನು ಪರಿಹರಿಸುವ ಮೂಲಕ ವ್ಯಾಖ್ಯಾನ ಮಾಡಲು 'ನ ಫಲ ಅದರ್ಶನೇನ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಯೋಗ್ಯರಾಗಿದ್ದು ಫಲವನ್ನು ಪಡೆಯಲು ಅಧಿ ಕಾರಿಯಾಗಿದ್ದು ಪ್ರತಿಬಂಧಕ ಇಲ್ಲದವರಿಗೆ ಫಲ ದೊರೆಯುವುದು ಕಂಡಿದೆ ಎಂದು ವಿವಕ್ಷಿಸಬೇಕು. ಭಾಷ್ಯದಲ್ಲಿ 'ಅಧಿಕಾರಿಣಾಂ' ಎಂದು ಹೇಳಿರುವುದು ಸೂತ್ರದ ತುಶಬ್ದಾರ್ಥವಾಗಿದೆ. ಇದನ್ನು ಟೀಕೆಯಲ್ಲಿ 'ತುಶಬ್ದಃ' ಎಂಬುದರಿಂದ ತೋರಿಸಿದ್ದಾರೆ. ಅಧಿಕಾರಿತ್ವಂ ನಾಮ' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ಕರ್ಮವೈಗುಣ್ಯವೆಂಬ ಪ್ರತಿಬಂಧಕವಿಲ್ಲದ ಯೋಗ್ಯತ್ವವೇ ಅಧಿಕಾರಿತ್ವ ಎನಿಸುತ್ತದೆ' ಎಂಬುದು ಇದರ ಅರ್ಥ.

'ಅಧಿಕರಣಾರ್ಥೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಭಾಷ್ಯದಲ್ಲಿ ಅರ್ಧಶ್ಲೋಕದಿಂದ ಸ್ಮೃತಿಯು ಶ್ರುತ್ಯನುಸಾರಿಯಾಗಿದೆ ಎಂದು ತಿಳಿಸಿದ್ದಾರೆ ಎಂದು ಕೆಲವರು ಹೇಳುತ್ತಾರೆ. 'ಅನ್ಯ' ಎಂದರೆ ಕರ್ಮವೈಗುಣ್ಯವನ್ನು ಉಪಲಕ್ಷಣಯಾ ವಿವಕ್ಷಿಸಬೇಕು ಎಂದರ್ಥ. 'ಅತಃ' ಎಂದರೆ ಶೈವಾದಿ ಶ್ರುತಿಪ್ರಾಮಾಣ್ಯಕ್ಕಿಂತ ವೈಲಕ್ಷಣ್ಯವಿರುವುದರಿಂದ ವಿಸಂವಾದವು ವೈಗುಣ್ಯ ಹೇತುಕವಾಗಿರುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ನ ವಿಲಕ್ಷಣತ್ವಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## न विलक्षणत्वाधिकरणम् (२।१।२)

ವೇದ ಹಾಗೂ ತದನುಸಾರಿ ಸ್ಮೃತಿಗಳಲ್ಲಿ ಸ್ವತಃ ಪ್ರಾಮಾಣ್ಯವಿದೆ

।। न विलक्षणत्वादस्य तथात्वं च शब्दात् ।।२-१-४।।

अत्र युक्त्यविरोध उच्यते । अस्य श्रुतिस्मृतिरूपस्य शास्त्रस्य तथात्वं शैवादिस्मृतिवदप्रामण्यं नास्ति । श्रुतेरपौरुषेयत्वेन श्रौतस्मृतेस्तदनुसारित्वेन

विलक्षणत्वात्, स्वतः प्रामाण्यरूपवैलक्षण्याच्च । तथात्वं चापौरुषेयत्वं तदनुसारित्वरूपं वैलक्षण्यं संवादानपेक्षत्वरूपं स्वतःप्रामाण्यरूपं च यथाक्रमं '' वाचा विरूप नित्यया'' इति, ''भारतं पञ्चरात्रं च वेदा'' इति, ''न चक्षुर्न श्रोत्रं न तर्को न स्मृतिर्वेदा ह्येवैनं वेदयन्ति'' इति शब्दात् सिद्धमित्यर्थः । तथात्वमित्यस्योभयत्रान्वयः । एवं च शैवादिस्मृतिवैलक्षण्याच्च फलविसंवादरूपयुक्त्या श्रुत्यादेस्तद्वदप्रामाण्यमिति भावः ॥

ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಸೂತ್ರಾರ್ಥ ಹೀಗಿದೆ -

ಅಸ್ಯ = ಶ್ರುತಿ ಹಾಗೂ ಶ್ರುತ್ಯನುಸಾರಿಯಾದ ಸ್ಮೃತಿರೂಪವಾದ ಶಾಸ್ತ್ರಕ್ಕೆ, ತಥಾತ್ವಂ = ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯವು, ನ = ಇರುವುದಿಲ್ಲ. ಏಕೆಂದರೆ ವಿಲಕ್ಷಣತ್ವಾತ್ = ಶ್ರುತಿಗಳು ಅಪೌರುಷೇಯವಾಗಿರುವುದರಿಂದ ಶ್ರೌತಸ್ಮೃತಿಗಳು ಅಂಥ ಶ್ರುತ್ಯನುಸಾರಿಯಾಗಿರುವುದರಿದ ಅವೈದಿಕ ಸ್ಮೃತಿಗಳಿಗಿಂತ ವಿಲಕ್ಷಣವಾಗಿದೆ. ಮತ್ತು ಸ್ವತಃ ಪ್ರಾಮಾಣ್ಯವೆಂಬ ವೈಲಕ್ಷಣ್ಯವನ್ನು ಹೊಂದಿವೆ. ('ತಥಾತ್ವಂ' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು) ತಥಾತ್ವಂ ಚ = ಅಪೌರುಷೇಯತ್ವ ಹಾಗೂ ತದನುಸಾರಿತ್ವ ಮತ್ತು ಸಂವಾದ ಅನಪೇಕ್ಷತ್ವ ಎಂಬ ಸ್ವತಃ ಪ್ರಾಮಾಣ್ಯವೆಂಬ ವೈಲಕ್ಷಣ್ಯವೂ ಕೂಡ ಕ್ರಮವಾಗಿ ಈ ಶ್ರುತಿಗಳಿಂದ ಸಿದ್ಧವಾಗಿದೆ. ಶಬ್ದಾತ್ = 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯಿಂದ ಅಪೌರುಷೇಯತ್ವವು ಸಿದ್ಧವಾಗಿದೆ. 'ಭಾರತಂ ಪಂಚರಾತ್ರಂ ಚ ವೇದಾ' ಎಂಬುದರಿಂದ ಶ್ರೌತಸ್ಮೃತಿಗಳಿಗೆ ವೇದಾನುಸಾರಿತ್ವವು ಸಿದ್ಧವಾಗಿದೆ. 'ನ ಚಕ್ಷುರ್ನ ಶ್ರೋತ್ರಂ ನ ತರ್ಕೋ ನ ಸ್ಮೃತಿರ್ವೇದಾ ಹ್ಯೇವೈನಂ ವೇದಯಂತಿ' ಎಂಬ ಶ್ರುತಿಯಿಂದ ಸಂವಾದ ಅನಪೇಕ್ಷತ್ವವು ಸಿದ್ಧವಾಗಿದೆ. ಹೀಗೆ ತಥಾತ್ವಂ ಎಂಬುದಕ್ಕೆ ಎರಡೂ ಕಡೆ ಅನ್ವಯವನ್ನು ತಿಳಿಯಬೇಕು. ಆದ್ದರಿಂದ ಶೈವಾದಿ ಸ್ಮೃತಿಗಳಿಗಿಂತ ಶ್ರೌತ ಶ್ರುತಿಗಳಲ್ಲಿ ವೈಲಕ್ಷಣ್ಯವಿದೆ. ಹಾಗಾಗಿ ಫಲವಿಸಂವಾದಿಯೆಂಬ ಯುಕ್ತಿಯಿಂದ ಶ್ರುತ್ಯಾದಿಗಳಿಂದ ಶೈವಾದಿಸ್ಮೃತಿಗಳಂತೆ ಅಪ್ರಾಮಾಣ್ಯವನ್ನು ಹೇಳಬಾರದು ಎಂದಭಿಪ್ರಾಯ.

ಅಪವಾದದ ಮೂಲಕ ಅಪ್ರಾಮಾಣ್ಯವು ಪ್ರಾಪ್ತವಾಗದು

ननु श्रुत्यादेः स्वतःप्रामाण्येऽपि विसंवादरूपापवादेनप्रामाण्यं स्यादित्यत आह - ॥ दृश्यते तु ॥२-१-५॥

तुशब्दोऽधिकारिविशेषद्योतकः । इतरेषामित्यत्र प्रसक्तं फलं अधिकारिणां दृश्यते । कचिद्विसंवादः कर्तृवैगुण्यनिमित्तक इति भावः॥२॥

ಶ್ರುತಿ ಹಾಗೂ ಶ್ರುತ್ಯಾನುಸಾರಿಯಾದ ಸ್ಮೃತಿಗಳು ಸ್ವತಃ ಪ್ರಮಾಣವಾಗಿವೆ ಎಂದು ಒಪ್ಪೋಣ. ಆದರೂ ಕೂಡ ವಿಸಂವಾದವೆಂಬ ಅಪವಾದವಿದ್ದರೆ ಅಪ್ರಾಮಾಣ್ಯವನ್ನು ಒಪ್ಪಲೇ ಬೇಕಲ್ಲವೇ? ಈ ಆಕ್ಷೇಪಕ್ಕೆ ಉತ್ತರವನ್ನು ನೀಡುವುದಕ್ಕಾಗಿ 'ದೃಶ್ಯತೇ ತು' ಎಂಬ ಮುಂದಿನ ಸೂತ್ರವು ಹೊರಟಿದೆ. 'ತು' ಶಬ್ದವು ಅಧಿಕಾರಿವಿಶೇಷವೆಂದು ಸೂಚನೆ ಮಾಡುತ್ತಿದೆ. 'ಇತರೇಷಾಂ' ಎಂಬಲ್ಲಿ ಯಾವ ಫಲವಿದೆಯೋ, ಅದು ಅಧಿಕಾರಿಗಳಿಗೆ ದೊರಕುವುದು ಕಂಡಿದೆ. (ಯಾರು ಯೋಗ್ಯಾಧಿಕಾರಿಗಳೋ, ಅವರು ವೇದೋಕ್ತಕರ್ಮಾನುಷ್ಠಾನವನ್ನು ಆಚರಿಸಿದರೆ ಫಲವು ದೊರಕುವುದರಲ್ಲಿ ಸಂದೇಹವಿಲ್ಲ. ಕೆಲವೊಮ್ಮೆ ವಿಸಂವಾದ ಕಾಣಬಹುದು. ಅದಕ್ಕೆ ಕರ್ತೃವಿನಲ್ಲಿರುವ ವೈಗುಣ್ಯಾದಿದೋಷಗಳೇ ಕಾರಣ ಎಂದಭಿಪ್ರಾಯ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ನ ವಿಲಕ್ಷಣತ್ವಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಭಿಮಾನ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥
॥ ಶ್ರೀವೇದವ್ಯಾಸಾಯ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥
॥ ಶ್ರೀಗುರುಭ್ಯೋ ನಮಃ ॥

# ಅಭಿಮಾನ್ಯಧಿಕರಣ

## ಬ್ರಹ್ಮಸೂತ್ರ

'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – अभिमानिव्यपदेशस्तु विशेषानुगतिभ्याम् ।।**

'ಮಣ್ಣು ಮಾತನಾಡಿತು' ಮೊದಲಾದ ವೇದ ವಾಕ್ಯಗಳು ಯುಕ್ತಿಗೆ ವಿರುದ್ಧವಾಗಿದೆಯೆಂದು ಪ್ರಶ್ನಿಸಬಾರದು. ಸೂತ್ರದೀಪಿಕಾ.

ಅಂತಹ ವಾಕ್ಯಗಳಲ್ಲಿ ಅಭಿಮಾನಿ ದೇವತೆಗಳೇ ಪ್ರತಿಪಾದ್ಯರಾಗಿದ್ದಾರೆ. ಹೊರತು ಜಡವಸ್ತುಗಳಲ್ಲ. ಅಭಿಮಾನಿ ದೇವತೆಗಳು ಬೇರೆ ಚೇತನರಿಗಿಂತಲೂ ವಿಶಿಷ್ಟವಾದ ಅಂತರ್ಧಾನಶಕ್ತಿಯನ್ನೂ ಸರ್ವತ್ರ ವ್ಯಾಪ್ತಿಯನ್ನೂ ಹೊಂದಿದ್ದಾರೆ. ಆದ್ದರಿಂದ ವೇದವಾಕ್ಯಗಳಲ್ಲಿ ಹೇಳಿದ ವಿಷಯಗಳೆಲ್ಲವೂ ಯುಕ್ತಿಯುಕ್ತವೇ ಆಗಿದೆ.

'ತು' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ಅಭಿಮಾನಿವ್ಯಪದೇಶಃ = 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಲ್ಲಿ ಅಭಿಮಾನಿಯಾದ ಚೇತನರೇ ಪ್ರತಿಪಾದ್ಯರಾಗಿದ್ದಾರೆ ಹೊರತು ಜಡವಾದ ಮಣ್ಣು ಮೊದಲಾದವು ಅಲ್ಲ. ಏಕೆಂದರೆ 'ಮೃತ್ ನ ವಕ್ತ್ರೀ ಜಡತ್ವಾತ್' ಜಡವಾದ್ದರಿಂದ ಮಣ್ಣು ಮಾತನಾಡುವುದಿಲ್ಲ ಇತ್ಯಾದಿ ಯುಕ್ತಿಗಳ ವಿರೋಧವು ಬರುತ್ತದೆ.

ಅಭಿಮಾನಿ ದೇವತೆಗಳು ದೇಹವಿಲ್ಲದೆ ಇರಲಾರರು. ದೇಹವುಳ್ಳವರಾದರೆ ಅವರೇಕೆ ಕಾಣಿಸುವುದಿಲ್ಲ? ಮತ್ತು ಜಡಪದಾರ್ಥದಲ್ಲಿ ಅಧಿಷ್ಠಿತರಾಗಿ ಮಾತನಾಡಲು ಹೇಗೆ ಸಮರ್ಥರಾಗುತ್ತಾರೆ? ಜಡಪದಾರ್ಥಗಳು ಬಹಳಷ್ಟು ಇರುವುದರಿಂದ ಅವುಗಳಲ್ಲೆಲ್ಲಾ ಒಬ್ಬರೇ ಇರಲು ಹೇಗೆ ಸಾಧ್ಯ? ಹೀಗೆ ಪ್ರಶ್ನಿಸಬಾರದು. ಏಕೆಂದರೆ 'ವಿಶೇಷಾನುಗತಿಭ್ಯಾಂ' ಅಭಿಮಾನಿದೇವತೆಗಳಿಗೆ ಸಕಲ ಪದಾರ್ಥಗಳಲ್ಲಿ ನೆಲೆಸಿರುವಿಕೆಯೆಂಬ ಅಂತಹ ಸಾಮರ್ಥ್ಯವು ಯುಕ್ತವಾಗುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

### ವೇದಕ್ಕೆ ದೃಢಯುಕ್ತಿಯ ವಿರೋಧ

**ब्रह्मसूत्रभाष्यम् –।। 'मृदब्रवीत्' (श.ब्रा.६.१.३) 'आपोऽब्रुवन्' (श.ब्रा.६.१.३) इत्यादिवचनाद् युक्तिविरुद्धो वेद इति ।**

ಅನುವಾದ - ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್‌ಕರ್ತೃತ್ವ ಪ್ರತಿಪಾದಕ ವೇದಕ್ಕೆ ದೃಢವಾದ ಯುಕ್ತಿವಿರೋಧವನ್ನು ಹೇಳುವ ಮೂಲಕ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡಿ ಪರಿಹರಿಸಲಾಗಿದೆ. ಪೂರ್ವಪಕ್ಷವನ್ನು 'ಮೃದಬ್ರವೀತ್' ಇತ್ಯಾದಿ ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

> ಪ್ರತಿಪದಾರ್ಥ -- ಮೃದಬ್ರವೀತ್ = ಮಣ್ಣು ಮಾತನಾಡಿತು, ಆಪೋಽಬ್ರುವನ್= ನೀರುಗಳು ಮಾತನಾಡಿದವು. ಇತ್ಯಾದಿವಚನಾದ್ = ಇವೇ ಮೊದಲಾದ ಮಾತುಗಳಿಂದ, ವೇದ = ಶ್ರುತಿಯು, ಯುಕ್ತಿವಿರುದ್ಧಃ = ಯುಕ್ತಿಯಿಂದ ವಿರುದ್ಧವಾಗುತ್ತದೆ. ಆದ್ದರಿಂದ ಅಪ್ರಮಾಣವಾಗಿದೆ.

### 'ಮೃದಬ್ರವೀತ್' ಇತ್ಯಾದಿ ವೇದವಚನಗಳಿಗೆ ವ್ಯಾಖ್ಯಾನ

**ब्रह्मसूत्रभाष्यम् – अतोऽब्रवीत् –**

**।। अभिमानिव्यपदेशस्तु विशेषानुगतिभ्याम् ।।१।।**

**मृदाद्यभिमानिदेवता तत्र व्यपदिश्यते ।**

ಅನುವಾದ - ಈ ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂದು ಉತ್ತರಿಸುತ್ತಿದ್ದಾರೆ. 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳು ಜಡಪದಾರ್ಥಕ್ಕೆ ವಚನಕ್ರಿಯೆಯನ್ನು ಹೇಳುತ್ತಿಲ್ಲ. ಜಡಪದಾರ್ಥದಲ್ಲಿರುವ ಅಭಿಮಾನಿಗಳಾದ ದೇವತೆಗಳನ್ನು ಪ್ರತಿಪಾದನೆ ಮಾಡುತ್ತಿವೆ.

ಪ್ರತಿಪದಾರ್ಥ -- ಅತೋಽಬ್ರವೀತ್ = ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ತತ್ರ = ಪ್ರತ್ಯಕ್ಷವಿರುದ್ಧವಾದ ಸ್ಥಳದಲ್ಲಿ, ಮೃದಾದ್ಯಭಿಮಾನಿ-ದೇವತಾ = ಮಣ್ಣು ಮೊದಲಾದ ಭೂತಪದಾರ್ಥಗಳ ಅಭಿಮಾನಿ-ದೇವತೆಗಳು, ವ್ಯಪದಿಶ್ಯತೇ = ಪ್ರತಿಪಾದ್ಯರಾಗಿದ್ದಾರೆ.

'ಮೃದಬ್ರವೀತ್' ಎಂಬ ಶ್ರುತಿಯು ಅಭಿಮಾನಿದೇವತಾ ಪರ

**ब्रह्मसूत्रभाष्यम् – तासां चेतरेभ्यो विशिष्टं सामर्थ्यमनुगतिश्च सर्वत्र । अतस्तासां सर्वमुक्तं युज्यते ।।१।।**

ಅನುವಾದ - ಅಭಿಮಾನಿದೇವತೆಗಳಿಗೆ ಬೇರೆ ಚೇತನಾದಿಗಳಿಗಿಂತ ವಿಶಿಷ್ಟವಾದ ಸಾಮರ್ಥ್ಯವಿದೆ. ಅಂತರ್ಧಾನ ಶಕ್ತಿ ಹಾಗೂ ಎಲ್ಲೆಡೆ ಇರುವಿಕೆ ಎಂಬ ಸಾಮರ್ಥ್ಯವಿರುವುದರಿಂದ ವೇದವಾಕ್ಯಗಳಲ್ಲಿ ಹೇಳಿದ ವಿಷಯವು ಯುಕ್ತಿ ಯುಕ್ತವೇ ಆಗಿದೆ.

ಆದರೂ ಕೂಡ ಅಭಿಮಾನಿದೇವತೆಗಳನ್ನು ಒಪ್ಪುವುದು ಕಷ್ಟ. ಏಕೆಂದರೆ ಅವರಿಗೆ ದೇಹವಿಲ್ಲವೆಂದು ಹೇಳಿದರೆ ವಚನಕರ್ತೃತ್ವವನ್ನು ನಿರಾಕರಣೆ ಮಾಡಿದಂತಾಗುತ್ತದೆ. ದೇಹವನ್ನು ಒಪ್ಪಿದರೆ ಅಭಿಮನ್ಯವಾದ ಸಕಲ ಪದಾರ್ಥಗಳಲ್ಲಿ ಇದ್ದಾರೆಂದು ಹೇಳಬೇಕು. ಆವಾಗ ಪ್ರತಿಯೊಬ್ಬರಿಗೂ ಅವರ ದರ್ಶನವಾಗಬೇಕಾಗುತ್ತದೆ. ಕೆಲವು ಅಭಿಮನ್ಯಮಾನವಾದ ವಸ್ತುಗಳಲ್ಲಿ ಇದ್ದಾರೆಂದು ಹೇಳಿದರೆ ಎಲ್ಲಿ ಇರುವುದಿಲ್ಲವೋ ಆ ಸ್ಥಳದಲ್ಲಿ ಅವರು ಇಲ್ಲದಿದ್ದರೂ ಯುಕ್ತವಾಗುವುದರಿಂದ ವೈಯರ್ಥ್ಯದೋಷ ಬರುತ್ತದೆ ಹೀಗೆ ಯುಕ್ತಿವಿರುದ್ಧವಾದ್ದರಿಂದ ಅಭಿಮಾನಿದೇವತೆಗಳನ್ನು ಒಪ್ಪದಿರುವುದೇ ಲೇಸು. ಈ ಆಕ್ಷೇಪಕ್ಕೆ 'ವಿಶೇಷಾನುಗತಿಭ್ಯಾಂ' ಎಂಬ ಸೂತ್ರಭಾಗವು ಉತ್ತರವನ್ನು ನೀಡುತ್ತಿದೆ. ಅದನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ತಾಸಾಂ ಚ = ತತ್ತ್ವಾಭಿಮಾನಿದೇವತೆಗಳಿಗೆ, ಇತರೇಭ್ಯಃ = ಸಾಮಾನ್ಯದೇವತೆಗಳಿಗಿಂತ, ವಿಶಿಷ್ಟಂ ಸಾಮರ್ಥ್ಯಮ್ = ಹೆಚ್ಚಿನ

ಸಾಮಾರ್ಥ್ಯವು, ಸರ್ವತ್ರ = ಎಲ್ಲೆಡೆಯು, ಅನುಗತಿಶ್ಚ = ಇರುವಿಕೆಯೂ ಕೂಡ ಯುಕ್ತವಾಗುತ್ತದೆ. ಅತಃ = ಈ ವೈಶಿಷ್ಟ್ಯ ಇರುವುದರಿಂದ, ತಾಸಾಂ = ಆ ತತ್ತ್ವಾಭಿಮಾನಿದೇವತೆಗಳಿಗೆ, ಉಕ್ತಂ ಸರ್ವಂ = ಹಿಂದೆ ಹೇಳಿದ್ದೆಲ್ಲವೂ, ಯುಜ್ಯತೇ = ಯುಕ್ತಿಯುಕ್ತವಾಗುತ್ತದೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳೂ ಕೂಡ ಅಪ್ರಮಾಣವಲ್ಲ

**सत्तर्कदीपावळिः – 'यत् मृदादिकं तत् न ब्रवीति' इति युक्त्या विरुद्धत्वात् 'मृदब्रवीत्' इत्यादिवेदैकदेशस्य अप्रामाण्यात् । तद्वत् जगत्कर्तृत्वप्रतिपादकस्य वेदस्य नाप्रामाण्यं शङ्कनीयम् । मृदादिशब्दानां पृथिव्याद्यनुमतवक्तृत्वादिविशेषशक्तियुक्ततत्तद्देवतावाचित्वेन अविरुद्धत्वात् । तदाह – मृदित्यादिना ॥**

"ಮೃದಾದಿಕಂ ನ ಬ್ರವೀತಿ ಜಡತ್ವಾತ್" ಎಂಬ ಯುಕ್ತಿಯಿಂದ ವಿರುದ್ಧವಾಗಿರುವ ಕಾರಣ 'ಮೃದಬ್ರವೀತ್' ಎಂಬ ವೇದೈಕದೇಶಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಅದರಂತೆ ಜಗತ್ ಕರ್ತೃತ್ವಪ್ರತಿಪಾದಕವಾದ ವೇದಕ್ಕೂ ಕೂಡ ಅಪ್ರಾಮಾಣ್ಯವು ಬರುತ್ತದೆ ?

ಹೀಗೆ ಆಶಂಕಿಸಬಾರದು. ಮೃದಾದಿ ಶಬ್ದಗಳು ಪೃಥಿವ್ಯಾದಿಗಳಲ್ಲಿ ಅನುಗತವಾದ ಅಭಿಮಾನಿದೇವತೆಗಳನ್ನು ಪ್ರತಿಪಾದನೆ ಮಾಡುತ್ತಿವೆ. ಅಂಥ ಅಭಿಮಾನಿದೇವತೆಗಳಲ್ಲಿ ವಕ್ತೃತ್ವಾದಿ ವಿಶೇಷ ಶಕ್ತಿಯು ಇರುತ್ತದೆ. ಆದ್ದರಿಂದ ಅನುಮಾನದ ವಿರೋಧವನ್ನು ಶ್ರುತಿಗಳಿಗೆ ಹೇಳಲು ಸಾಧ್ಯವಿಲ್ಲ. ಇದನ್ನೇ 'ಮೃದಬ್ರವೀತ್' ಇತ್ಯಾದಿ ಭಾಷ್ಯದಿಂದ ಉಪಪಾದನೆ ಮಾಡಿದ್ದಾರೆ.

**सत्तर्कदीपावळिः – तदेतत्प्रमाणवचनेन द्रढयति । पृथिव्याद्यभिमानिना इत्यादिना ॥३॥**

ಇದನ್ನೇ ಪ್ರಮಾಣವಚನದಿಂದ ಸ್ಪಷ್ಟ ಪಡಿಸುತ್ತಿದ್ದಾರೆ. 'ಪೃಥಿವ್ಯಾದ್ಯಭಿಮಾನಿನಾ' ಇತ್ಯಾದಿ ಭಾಷ್ಯದಿಂದ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅಭಿಮಾನ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

'ಮೃದಬ್ರವೀತ್' ಇತ್ಯಾದಿ ಶ್ರುತಿಗಳ ವ್ಯಾಖ್ಯಾನ

**तत्वप्रदीपः – 'मृदब्रवीत्' 'तत् तेज ऐक्षत' इत्यादौ अचेतनानां वक्तृत्वाद्युक्तेर्युक्तिविरुद्धोऽयं वेदः । प्रत्यक्षमूला च सा न चालयितुं शक्यत इत्यतोऽब्रवीत् – अभिमानिव्यपदेशस्तु विशेषानुगतिभ्याम् ॥ मृदाद्यभिमानिन्यो देवतास्तत्र वक्त्र्यादयो व्यपदिश्यन्ते । नत्वभिमन्यमानाः। मृदादिशब्दाश्च तासु मुख्याः । तासाम् इतरेभ्यः सामर्थ्याऽविक्यात् सर्वगतत्वाच्च सर्वं उक्तिदृष्ट्यादिकं तत्र तत्र उक्तं युज्यते ॥ इत्यभिमान्यधिकरणम् (४४)**

'ಮೃದಬ್ರವೀತ್' 'ತತ್ ತೇಜ ಐಕ್ಷತ' ಇತ್ಯಾದಿ ವೇದವಾಕ್ಯಗಳು ಜಡಪದಾರ್ಥದಲ್ಲೂ ವಕ್ತೃತ್ವಾದಿಗಳನ್ನು ಹೇಳುತ್ತಿದೆ. ಈ ವೇದವು ಯುಕ್ತಿವಿರುದ್ಧವಾಗಿದೆ. ಆ ಯುಕ್ತಿಯು ಪ್ರತ್ಯಕ್ಷಮೂಲವಾದ್ದರಿಂದ ಬಲಿಷ್ಠವಾಗಿದೆ. ಇದನ್ನು ಅಲ್ಲಾಡಿಸಲೂ ಕೂಡ ಸಾಧ್ಯವಿಲ್ಲ. ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂಬ ಸೂತ್ರವು ಹೊರಟಿದೆ. 'ಮೃದಬ್ರವೀತ್' ಇತ್ಯಾದಿ ವೇದಮಂತ್ರವು ಮೃದಾದಿಗಳಿಗೆ ಯಾವ ಅಭಿಮಾನಿದೇವತೆಗಳಿದ್ದಾರೋ, ಅವರಲ್ಲಿ ವಕ್ತೃತ್ವಾದಿಗಳನ್ನು ಹೇಳುತ್ತಿದೆ. ಅವರಿಂದ

ಅಭಿಮನ್ಯಮಾನವಾದ ಜಡಪದಾರ್ಥದಲ್ಲಿ ವಕ್ತೃತ್ವಾದಿಗಳನ್ನು ಹೇಳುತ್ತಿಲ್ಲ. ಮೃದಾದಿ ಶಬ್ದಗಳು ಅಭಿಮಾನಿದೇವತೆಗಳಲ್ಲೇ ಮುಖ್ಯವಾಗಿ ಸಮನ್ವಯಗೊಳ್ಳುತ್ತವೆ. ಅಂಥ ಅಭಿಮಾನಿದೇವತೆಗಳ ಬೇರೆಯವರಿಗಿಂತ ಅಧಿಕವಾದ ಸಾಮರ್ಥ್ಯವನ್ನು ಹೊಂದಿದ್ದಾರೆ ಮತ್ತು ಸರ್ವಗತರಾಗಿದ್ದಾರೆ. ಆದ್ದರಿಂದ ಮಾತನಾಡುವಿಕೆ, ನೋಡುವಿಕೆ ಮೊದಲಾದ ಅಚಿಂತ್ಯಶಕ್ತಿಗಳು ಅವರಲ್ಲಿ ಯುಕ್ತವಾಗುತ್ತವೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಅಭಿಮಾನ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

### ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಗಳು

**तत्वप्रकाशिका – अत्र पुनर्विष्णोः, सर्वकर्तृत्वादिप्रतिपादकवेदप्रामाण्ये युक्तिविरोधपरिहारादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ಮಹಾವಿಷ್ಣು ಕರ್ತೃವಾಗಿದ್ದಾನೆ ಎಂದು ಪ್ರತಿಪಾದನೆ ಮಾಡುವ ವೇದಗಳಿಗೆ ಯುಕ್ತಿವಿರೋಧದ ಮೂಲಕ ಅಪ್ರಾಮಾಣ್ಯವನ್ನು ಆಶಂಕಿಸಿದರೆ ಅದನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

### ವೇದಪ್ರಾಮಾಣ್ಯ ವಿಷಯದಲ್ಲಿ ಯುಕ್ತಿವಿರೋಧ ಪರಿಹಾರ

**तत्वप्रकाशिका – वेदप्रामाण्यात् सर्वकारणत्वं विष्णोरित्युक्तम् । तत्प्रामाण्यस्य च युक्तिविरोधे न विष्णोर्जगत्कारणत्वं सिध्यतीत्यतोऽसौ परिहार्य एव ।**

ಸಕಲವೇದಗಳು ಪ್ರಮಾಣವಾಗಿರುವುದರಿಂದ ಮಹಾವಿಷ್ಣುವೇ ಸಕಲಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಈ ಹಿಂದೆ ಸಮರ್ಥಿಸಲಾಯಿತು. ಇಂಥ ವೇದಪ್ರಾಮಾಣ್ಯವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು.

### ಅಧಿಕರಣದ ವಿಷಯಾದಿಗಳು

**तत्वप्रकाशिका – स वेदो विषयः । प्रमाणं न वेति सन्देहः । पूर्वोक्तमेवात्र सन्देहबीजम् । पूर्वपक्षयति – मृदिति ।**

ಈ ಅಧಿಕರಣದಲ್ಲಿ ಆಪಾತತಃ ಯುಕ್ತಿವಿರೋಧವಿರುವ ವೇದವಾಕ್ಯಗಳು ವಿಷಯವಾಗಿವೆ. ಅಂಥ ವೇದವಾಕ್ಯಗಳು ಪ್ರಮಾಣವೋ ಅಲ್ಲವೊ ? ಎಂಬುದೇ ಸಂದೇಹ. ಕೆಲವು ವೇದವಾಕ್ಯಗಳು ಫಲಸಂವಾದವಿಲ್ಲದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಇನ್ನು ಕೆಲವು ವಾಕ್ಯಗಳು ಫಲಸಂವಾದಿಯಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಇದು ಸಂದೇಹಕ್ಕೆ ಬೀಜ. ಪೂರ್ವಪಕ್ಷವನ್ನು 'ಮೃದಬ್ರವೀತ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

### ಶ್ರುತಿಗಳು ಬಾಧಿತಾರ್ಥಕಗಳು

**तत्वप्रकाशिका – न वेदः प्रमाणम् । 'मृदब्रवीत्' 'आपोऽपब्रुवन्', 'ता आप ऐक्षन्त' 'तत्तेज ऐक्षत' 'ओषधयः संवदन्ते' इत्यादिना मृदादीनां वचनदर्शनाद्यभिधायकत्वात् ।**

ವೇದವು ಪ್ರಮಾಣವಲ್ಲ. ಏಕೆಂದರೆ 'ಮೃದಬ್ರವೀತ್' 'ಆಪೋ ಅಬ್ರುವನ್' 'ತಾ ಆಪ ಐಕ್ಷಂತ' 'ತತ್‌ತೇಜ ಐಕ್ಷತ' 'ಓಷಧಯಃ ಸಂವದಂತೇ' ಇವೇ ಮೊದಲಾದ ಶ್ರುತಿವಾಕ್ಯಗಳು ಜಡಪದಾರ್ಥಗಳಾದ ಮಣ್ಣು ನೀರು ಮೊದಲಾದವುಗಳಲ್ಲಿಯೂ 'ಮಾತನಾಡುವಿಕೆ' 'ನೋಡುವಿಕೆ' ಮೊದಲಾದ ಕ್ರಿಯೆಗಳನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಇವುಗಳಿಗೆ ಅಪ್ರಾಮಾಣ್ಯವನ್ನು ಒಪ್ಪಬೇಕು.

### ಯುಕ್ತಿವಿರುದ್ಧವಾದದ್ದಕ್ಕೆ ಪ್ರಾಮಾಣ್ಯವಿಲ್ಲ

**तत्वप्रकाशिका – तथात्वेऽपि कुतोऽप्रामाण्यम् । मृत्र वक्त्री**

**जडत्वादित्यादियुक्तिविरुद्धत्वेन मृदादिवचनादेरसत्त्वात् । असदभिधायकत्वमेवाप्रामाण्यम् ।**

ಜಡಪದಾರ್ಥಗಳಿಗೆ ದರ್ಶನಾದಿಕ್ರಿಯೆಗಳನ್ನು ಪ್ರತಿಪಾದನೆ ಮಾಡಿದ ಮಾತ್ರಕ್ಕೆ ಶ್ರುತಿಯು ಏಕೆ ಅಪ್ರಮಾಣವಾಗಬೇಕು ಎಂದು ಪ್ರಶ್ನಿಸಬಾರದು. 'ಮೃತ್ ನ ವದತಿ ಜಡತ್ವಾತ್' ಜಡವಾದ್ದರಿಂದ ಮಣ್ಣು ಮಾತನಾಡುವುದಿಲ್ಲ, ಇವೇ ಮೊದಲಾದ ಯುಕ್ತಿಯ ವಿರೋಧ ಇರುವುದರಿಂದ ಅಂಥ ವಾಕ್ಯಗಳು ಅಪ್ರಮಾಣವಾಗಲೇ ಬೇಕು. ಮಣ್ಣು ಮೊದಲಾದ ಜಡಪದಾರ್ಥಗಳಲ್ಲಿ ವಚನಕ್ರಿಯಾದಿಗಳು ಇರಲು ಸಾಧ್ಯವೇ ಇಲ್ಲ. ಇಲ್ಲದ ವಿಷಯವನ್ನು ಪ್ರತಿಪಾದನೆ ಮಾಡುವ ವೇದವಾಕ್ಯಗಳು ಅಪ್ರಾಮಾಣ್ಯವನ್ನು ಹೊಂದುತ್ತವೆ.

### 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ಶ್ರುತಿಗಳೂ ಕೂಡ ಪ್ರಮಾಣ

**तत्वप्रकाशिका – एवञ्च युक्तिविरुद्धार्थत्वेन वेदैकदेशस्याप्रामाण्येऽन्यस्याप्यप्रामाण्यमिति न विष्णोस्तेन जगत्कारणत्वसिद्धिरिति भावः ।**

ಆದ್ದರಿಂದ ಯುಕ್ತಿವಿರುದ್ಧವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ 'ಮೃದಬ್ರವೀತ್' ಇತ್ಯಾದಿ ವೇದದ ಕೆಲವು ವಾಕ್ಯಗಳು ಅಪ್ರಮಾಣವಾಗುತ್ತವೆ ಎಂದು ಸಾಧಿಸಬಹುದು. ಆದ್ದರಿಂದ ವಿಷ್ಣುವಿಗೆ ಸರ್ವಕರ್ತೃತ್ವವನ್ನು ಪ್ರತಿಪಾದಿಸುವ 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ವೇದವಾಕ್ಯಗಳೂ ಕೂಡ ಅಪ್ರಮಾಣವಾಗುತ್ತವೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

### ಅಭಿಮಾನ್ಯಧಿಕರಣಕ್ಕೆ ಸಂಗತಿ ಹೇಗೆ ?

**तत्वप्रकाशिका – ननु मृदादिवचनाद्यभिधायकवाक्यस्य प्रत्यक्षविरोध एव प्रथमं स्फुरत्यतो न पादसङ्गतिः ।**

ಪ್ರಶ್ನೆ - 'ಮಣ್ಣು ಮಾತನಾಡುತ್ತದೆ' 'ನೀರು ನೋಡುತ್ತದೆ' ಇತ್ಯಾದಿಯಾಗಿ ಹೇಳುವ ಶ್ರುತಿವಾಕ್ಯಗಳಿಗೆ ಪ್ರತ್ಯಕ್ಷವಿರೋಧವೇ ಮೊಟ್ಟಮೊದಲು ಉಪಸ್ಥಿತವಾಗುತ್ತದೆ. ಹೀಗಿರುವಾಗ

ಯುಕ್ತಿವಿರೋಧವನ್ನು ಪರಿಹರಿಸುವ ಈ ಪಾದದಲ್ಲಿ ಅಭಿಮಾನ್ಯಧಿಕರಣಕ್ಕೆ ಹೇಗೆ ಸಂಗತಿಯು ಕೂಡುತ್ತದೆ ?

ಈ ಅಧಿಕರಣವು ಯುಕ್ತಿವಿರೋಧವನ್ನೇ ಪರಿಹರಿಸುತ್ತಿದೆ

**ತत्वप्रकाशिका – मैवम् । आदिसृष्टावेवपृथिव्यादीनां तदभिधानात् । तदानीन्तनवचनाद्यभावस्यास्मदाद्यप्रत्यक्षत्वेन युक्तेरेवाश्रयणीयत्वात् ।**

ಉತ್ತರ - ಈ ಆಕ್ಷೇಪ ಸರಿಯಲ್ಲ. ಏಕೆಂದರೆ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಲ್ಲಿ ಸೃಷ್ಟಿಯ ಪ್ರಾರಂಭದ ಪೃಥಿವ್ಯಾದಿಗಳನ್ನು ವಿವಕ್ಷಿಸಿ ವಚನಕ್ರಿಯೆಯನ್ನು ಹೇಳಲಾಗಿದೆ. ಸೃಷ್ಟಿಯ ಪ್ರಾರಂಭದ ಪೃಥಿವ್ಯಾದಿಗಳು ನಮ್ಮ ಪ್ರತ್ಯಕ್ಷದಿಂದ ಸಿದ್ಧವಾಗಿಲ್ಲ. ಹೀಗಿರುವಾಗ ಪ್ರತ್ಯಕ್ಷ-ವಿರೋಧವನ್ನು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಯುಕ್ತಿವಿರೋಧವನ್ನೇ ಆಶ್ರಯಿಸಬೇಕು. ವೇದವಾಕ್ಯಗಳಿಗೆ ಹೀಗೆ ಯುಕ್ತಿವಿರೋಧವೇ ಸ್ಪಷ್ಟವಾಗಿರುವುದರಿಂದ ಯುಕ್ತಿವಿರೋಧವನ್ನು ಪರಿಹರಿಸುವ ಈ ಪಾದದಲ್ಲಿ ಅಭಿಮಾನ್ಯಧಿಕರಣವು ಸಂಗತವಾಗುತ್ತದೆ.

ಅಧಿಕರಣದ ಸಿದ್ಧಾಂತ

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। तुशब्दोऽवधारणे ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ಅಥ' ಇತ್ಯಾದಿ ಭಾಷ್ಯದ ಮಾತು ಹೊರಟಿದೆ. 'ತು' ಶಬ್ದವು ಅವಧಾರಣಾರ್ಥದಲ್ಲಿದೆ.

ದೇವತೆಗಳಲ್ಲಿ ವಚನಕ್ರಿಯಾದಿಗಳನ್ನು ಹೇಳುತ್ತಿದೆ

**तत्वप्रकाशिका – भवेदेतदुक्तं यद्यत्र मृदाद्येवोच्यते नैतदस्ति । मृदाद्यभिमानिनीनां देवतानामेव तत्र व्यपदेशादित्यर्थः ।**

ಒಂದುವೇಳೆ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳು ಜಡಪದಾರ್ಥಗಳಿಗೆ ವಚನಾದಿಗಳನ್ನು ಹೇಳಿದ್ದಲ್ಲಿ ಅಪ್ರಾಮಾಣ್ಯವು ಬರುತ್ತಿತ್ತು. ಆದರೆ ಜಡಪದಾರ್ಥಗಳಿಗೆ ವಚನಾದಿಕ್ರಿಯೆಗಳನ್ನು

ಹೇಳುವುದರಲ್ಲಿ ಶ್ರುತಿಗೆ ಅಭಿಪ್ರಾಯವಿಲ್ಲ. ಹೊರತು ಮಣ್ಣು, ನೀರು ಮೊದಲಾದ ಜಡಪದಾರ್ಥಗಳಲ್ಲಿ ಯಾವ ಅಭಿಮಾನಿದೇವತೆಗಳು ನೆಲೆಸಿದ್ದಾರೊ ಅಂಥ ದೇವತೆಗಳು ಮಾತನಾಡಿದರು, ನೋಡಿದರು ಎಂದು ಶ್ರುತಿ ಪ್ರತಿಪಾದನೆ ಮಾಡುತ್ತಿದೆ. ಚೇತನರಾದ ದೇವತೆಗಳಲ್ಲಿ ವಚನಾದಿಕ್ರಿಯೆಗಳು ಯುಕ್ತವಾಗುತ್ತವೆ.

### ಅಪೌರುಷೇಯವಾದ ಶ್ರುತಿಯು ಅತ್ಯಂತ ಪ್ರಬಲ

**तत्वप्रकाशिका – स्यान्मतम् । श्रुतियुक्त्योः श्रुतेरेव प्राबल्यात् तद्विरुद्धयुक्तेवाप्रामाण्यं वक्तव्यं किं युक्तिविरोधपरिहाराय श्रुतेरन्यार्थकल्पनया ।**

ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡುತ್ತಿರುವುದೇ ತಪ್ಪು. ಏಕೆಂದರೆ ಶ್ರುತಿ ಮತ್ತು ಯುಕ್ತಿಗಳಲ್ಲಿ ಪರಸ್ಪರ ವಿರೋಧ ಬಂದಾಗ ಶ್ರುತಿಯು ಅಪೌರುಷೇಯವಾದ್ದರಿಂದ ಪ್ರಬಲವಾಗಿದೆ. ಅದರ ವಿರೋಧವನ್ನು ಯುಕ್ತಿಗೆ ಹೇಳಬೇಕೆ ಹೊರತು ದುರ್ಬಲವಾದ ಯುಕ್ತಿಯ ವಿರೋಧವನ್ನು ಶ್ರುತಿಗೆ ಹೇಳಬಾರದು. ಯುಕ್ತಿವಿರೋಧದಿಂದ ಶ್ರುತಿಗೆ ಅನ್ಯಾರ್ಥವನ್ನು ಏಕೆ ಕಲ್ಪಿಸುತ್ತಿದ್ದೀರಿ ?

### 'ಮೃದಬ್ರವೀತ್' ಎಂಬುದಕ್ಕೆ ಪ್ರತ್ಯಕ್ಷವಿರೋಧವಿಲ್ಲ

**तत्वप्रकाशिका – न चोपजीव्यप्रत्यक्षविरोध इत्युक्तमिति ।**

ವೇದವಾಕ್ಯಗಳಿಗೆ ಉಪಜೀವ್ಯವಾದ ಪ್ರತ್ಯಕ್ಷವಿರೋಧ ಬಂದಾಗ ಅನ್ಯಾರ್ಥವನ್ನು ಕಲ್ಪಿಸುವುದು ಕಂಡಿದೆ. ಆದರೆ 'ಮೃದಬ್ರವೀತ್' ಇತ್ಯಾದಿ ಸ್ಥಳದಲ್ಲಿ ಪ್ರತ್ಯಕ್ಷವಿರೋಧಕ್ಕೆ ಅವಕಾಶವೇ ಇಲ್ಲ ಎಂದು ಈ ಹಿಂದೆಯೇ ನಿರೂಪಣೆ ಮಾಡಿದ್ದಾಗಿದೆ. ಆದ್ದರಿಂದ ಅಭಿಮಾನಿದೇವತಾಪರವಾಗಿ ಈ ವಾಕ್ಯಗಳನ್ನು ಏಕೆ ವ್ಯಾಖ್ಯಾನ ಮಾಡುತ್ತಿದ್ದೀರಿ ?

### ಮುಖ್ಯಾರ್ಥವನ್ನು ಬಿಟ್ಟಿಲ್ಲ

**तत्वप्रकाशिका – मैवम् । अन्यार्थकल्पने मुख्यार्थलाभात् ।**

ಉತ್ತರ - ಈ ಪ್ರಶ್ನೆ ಸರಿಯಿಲ್ಲ. ಏಕೆಂದರೆ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಿಗೆ

ಅನ್ಯಾರ್ಥವನ್ನು ಕಲ್ಪನೆ ಮಾಡುವುದರಿಂದಲೇ ಮುಖ್ಯಾರ್ಥವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಮುಖ್ಯಾರ್ಥವನ್ನು ಬಿಟ್ಟಿರುವ ದೋಷವು ತಟ್ಟುವುದಿಲ್ಲ.

ಅಭಿಮಾನಿ ದೇವತೆಗಳು ಇದ್ದಾರೆಯೇ ?

**तत्वप्रकाशिका – (ननु) नाभिमानिदेवता नाम सन्ति । तथाहि किं ता अभिमन्यमानव्यापिन्यः किं वा तदेकदेशवर्तिन्यः ।**

ಅಭಿಮಾನಿದೇವತೆಗಳೇ ಇರುವುದಿಲ್ಲ. ಹೀಗಿರುವಾಗ 'ಅಭಿಮಾನಿದೇವತೆಯು ಮಾತನಾಡಿತು' ಎಂದು ಅರ್ಥೈಸುವುದು ಹೇಗೆ ಸರಿ ? ಏಕೆಂದರೆ ಅಭಿಮಾನಿದೇವತೆಗಳು ಇರುವುದಾದರೆ ಅಭಿಮಾನ್ಯಮಾನವಾದ ಸಕಲ ಪದಾರ್ಥಗಳಲ್ಲಿ ವ್ಯಾಪಿಸಿಕೊಂಡು ಇದ್ದರೋ, ಅಥವಾ ಏಕದೇಶದಲ್ಲಿ ಇದ್ದರೋ ? ಎಂಬ ಪ್ರಶ್ನೆಗೆ ಉತ್ತರಿಸಬೇಕು.

ಅಭಿಮಾನಿದೇವತೆಗಳನ್ನು ಕಲ್ಪಿಸುವುದು ವ್ಯರ್ಥವಲ್ಲವೇ?

**तत्वप्रकाशिका – आद्येऽपि विग्रहवत्यो न वा । न प्रथमः । उपलम्भप्रसङ्गात्। न द्वितीयः । वचनाद्ययोगात् । नान्त्यः । तद्रहितदेशवद्देशान्तरावस्थानोपपत्तौ तद्वैयर्थ्यादित्यत आह – तासां चेति ।।**

ಅಭಿಮನ್ಯಮಾನವಾದ ಸಕಲ ಪದಾರ್ಥದಲ್ಲಿ ವ್ಯಾಪಿಸಿದ್ದಾರೆ ಎಂದು ಉತ್ತರಿಸುವುದಾದರೆ ಅವರಿಗೆ ಶರೀರ ಇದೆಯೋ, ಇಲ್ಲವೊ? ಎಂಬ ಪ್ರಶ್ನೆಗೆ ಉತ್ತರಿಸಬೇಕು. 'ಶರೀರ ಇದೆ' ಎನ್ನುವುದಾದರೆ ನಮಗೂ ಕಾಣಿಸಬೇಕಾದೀತು. ಶರೀರ ಇಲ್ಲದಿದ್ದರೆ ಮಾತನಾಡಲು ಅಸಮರ್ಥರಾಗುತ್ತಾರೆ. ಇನ್ನು ಏಕದೇಶದಲ್ಲಿ ಅಭಿಮಾನಿದೇವತೆಗಳು ಇರುತ್ತಾರೆ ಎಂದು ಹೇಳಬೇಕು. ಇದು ವ್ಯರ್ಥ. ಏಕೆಂದರೆ ಯಾವ ಏಕದೇಶದಲ್ಲಿ ಅಭಿಮಾನಿದೇತೆಗಳು ಇಲ್ಲವೊ, ಆದರೂ ಅಲ್ಲಿ ಹೇಗೆ ವ್ಯವಹಾರ ನಡೆಯುತ್ತದೋ; ಆದರಂತೆ ಉಳಿದ ಕಡೆಯು ಕೂಡಿಸಲು ಬರುವಾಗ ಕೆಲವು ಸ್ಥಳದಲ್ಲಿ ಮಾತ್ರ ಅಭಿಮಾನಿದೇವತೆಗಳನ್ನು ಕಲ್ಪಸುವುದು ವ್ಯರ್ಥವಾಗಿದೆ. ಈ ಆಕ್ಷೇಪಕ್ಕೆ 'ತಾಸಾಂಚ' ಇತ್ಯಾದಿ ಭಾಷ್ಯದ ಮಾತುಗಳಿಂದ ಉತ್ತರಿಸಿದ್ದಾರೆ.

### ಅಭಿಮಾನಿದೇವತೆಗಳು ಇದ್ದಾರೆ

**तत्वप्रकाशिका – न चाभिमानिदेवताभावो वाच्यः । यत् प्रागुक्तं तत्रास्त्येव तासां सर्वत्रानुगतिर्विग्रहश्चेति ब्रूमः ।**

ಅಭಿಮಾನಿದೇವತೆಗಳೇ ಇಲ್ಲವೆಂದು ಹೇಳಬಾರದು. ಮತ್ತು ಹಿಂದೆ ಹೇಳಿದಂತೆ ಶರೀರವಿಲ್ಲವೆಂದು ಹೇಳಬಾರದು. ಅಭಿಮಾನಿದೇವತೆಗಳಿಗೆ ಅಭಿಮನ್ಯಮಾನವಸ್ತುಗಳಲ್ಲಿ ವ್ಯಾಪ್ತಿಯು ಬರುತ್ತದೆ. ಮತ್ತು ಶರೀರವೂ ಕೂಡ ಇರುತ್ತದೆ.

### ಇದ್ದ ಮಾತ್ರಕ್ಕೆ ಕಾಣಬೇಕಾಗಿಲ್ಲ

**तत्वप्रकाशिका – न च दर्शनप्रसङ्गः सर्वगतानां विग्रहवतीनामपि तासामितरपदार्थेभ्यो विशेषसामार्थ्येनादर्शनसम्भवादिति भावः ।**

ಹಾಗಾದರೆ ಅಭಿಮಾನಿದೇವತೆಗಳ ದರ್ಶನವು ನಮಗೂ ಆಗಬೇಕಲ್ಲವೆ ? ಎಂದು ಪ್ರಶ್ನಿಸಬಾರದು. ಅಭಿಮಾನಿದೇವತೆಗಳು ಎಲ್ಲೆಡೆ ಇದ್ದರೂ, ಶರೀರವುಳ್ಳವರಾಗಿದ್ದರೂ ಉಳಿದ ಪದಾರ್ಥಗಳಿಗಿಂತ ವಿಶೇಷಸಾಮರ್ಥ್ಯವು ಅವರಲ್ಲಿದೆ. ನಮ್ಮ ಕಣ್ಣಿಗೆ ಕಾಣದೆ ಇರುವ ಶಕ್ತಿ ಅವರಲ್ಲಿ ಇದೆ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

### ಅಭಿಮಾನಿದೇವತೆಗಳಲ್ಲೇ ವಚನಕ್ರಿಯಾದಿಗಳಿವೆ

**तत्वप्रकाशिका – सन्तु देवताः प्रकृते किमायातमित्यत आह – अत इति।। यतोऽत्र मृदादिशब्दैर्देवता व्यपदिश्यन्तेऽतस्तासां चेतनत्वनेन श्रुत्युक्तं सर्वं वचनादिकं युक्तमतो न युक्तिविरुद्धं वेदवाक्यमिति भावः ।**

ಅಭಿಮಾನಿದೇವತೆಗಳಿರಲಿ; ಅವರಲ್ಲಿ ಅಂಥ ವಿಶೇಷಶಕ್ತಿಯೂ ಕೂಡ ಇರಲಿ ಇದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ಅಥ' ಎಂಬ ಭಾಷ್ಯದ ಮಾತಿನಿಂದ ಉತ್ತರಿಸಿದ್ದಾರೆ. ಯಾವ ಕಾರಣದಿಂದ ಮೃದಾದಿಶಬ್ದಗಳಿಂದ ಆಯಾ ದೇವತೆಗಳನ್ನು ಕರೆಯಲಾಗಿದೆಯೊ ಆ ಕಾರಣದಿಂದ ಚೇತನರಾದ ದೇವತೆಗಳಲ್ಲಿ ವಚನಕ್ರಿಯಾದಿಗಳೆಲ್ಲವೂ

ಸಂಗತವಾಗುತ್ತವೆ. ಮತ್ತು ವೇದವಾಕ್ಯಕ್ಕೆ ಹಿಂದೆ ಹೇಳಿದಂತೆ ಯುಕ್ತಿವಿರೋಧವು ಕೂಡ ಬರುವುದಿಲ್ಲ. ಇಷ್ಟು ಅಭಿಪ್ರಾಯವನ್ನು 'ಅತಃ' ಎಂಬ ವಾಕ್ಯಕ್ಕೆ ತಿಳಿಯಬೇಕು.

ಏಕವಚನ ಪ್ರಯೋಗಕ್ಕೆ ಕಾರಣ

**तत्वप्रकाशिका – अत्रैकवचनस्य सूत्रगतत्वादभिमानिदेवतेत्युक्तम् । तच्च समुदायविवक्षयेति भावेन तासामित्यादि दृश्यते । चेत्युत्तरसूत्रानुगुण्येनात्र विग्रहस्य ग्राह्यत्वात् ।**

'ಅಭಿಮಾನಿದೇವತಾ ವ್ಯಪದಿಶ್ಯತೇ' ಎಂಬಲ್ಲಿ ಏಕವಚನಪ್ರಯೋಗವನ್ನು ಮಾಡಿದ್ದಾರೆ. ವಾಸ್ತವಿಕವಾಗಿ ಅಭಿಮಾನಿದೇವತೆಗಳು ಅನೇಕ ಮಂದಿ ಇರುವುದರಿಂದ ಬಹುವಚನವನ್ನು ಪ್ರಯೋಗಿಸಬೇಕಿತ್ತು. ಆದರೂ ಏಕವಚನವನ್ನು ಹೇಗೆ ಪ್ರಯೋಗಿಸಿದರು ? ಅಭಿಮಾನಿದೇವತೆಗಳು ಅನೇಕರಿಲ್ಲದ ಕಾರಣ ಏಕವಚನವನ್ನು ಪ್ರಯೋಗಿಸಿದ್ದಾರೆ ಎನ್ನುವುದಾದರೆ ಮುಂದಿನ ವಾಕ್ಯದಲ್ಲಿ 'ತಾಸಾಂ ಚ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಹಿಂದಿನ ವಾಕ್ಯದಲ್ಲಿ ಪ್ರಕೃತವಾದದ್ದನ್ನೇ ಮುಂದಿರುವ ಸರ್ವನಾಮಶಬ್ದದಿಂದ ಪರಾಮರ್ಶೆ ಮಾಡಬೇಕು. ಹೀಗಿರುವಾಗ ಏಕವಚನವನ್ನು ಪ್ರಯೋಗ ಮಾಡಿದ್ದು ತಪ್ಪು.

ಇದು ತಪ್ಪು. ಸೂತ್ರದಲ್ಲಿ ಏಕವಚನವಿರುವುದರಿಂದ ಅದಕ್ಕೆ ಅನುಗುಣವಾಗಿ ಭಾಷ್ಯದಲ್ಲಿಯೂ ಏಕವಚನವನ್ನೇ ಪ್ರಯೋಗಿಸಿದ್ದಾರೆ. ಸಮುದಾಯವನ್ನು ಹೇಳುವ ಸಂದರ್ಭದಲ್ಲಿ ಏಕವಚನವನ್ನು ಪ್ರಯೋಗ ಮಾಡಬೇಕೆಂಬ ನಿಯಮವಿದೆ. ಅದಕ್ಕೆ ಅನುಗುಣವಾಗಿ ಸೂತ್ರ ಹಾಗೂ ಭಾಷ್ಯಗಳಲ್ಲಿ ಏಕವಚನವನ್ನು ಪ್ರಯೋಗಿಸಿದ್ದಾರೆ. ಅದಕ್ಕೆ ಅನುಗುಣವಾಗಿ ಟೀಕೆಯಲ್ಲಿಯೂ ಕೂಡ ಏಕವಚನವನ್ನು ಕೂಡಿಸಬೇಕು. ಆದ್ದರಿಂದ ದೇವತೆಗಳು ಬಹಳ ಮಂದಿ ಇದ್ದಾರೆಂದು ತಿಳಿಯುತ್ತದೆ. ಆದ್ದರಿಂದ ಮುಂದಿನ ವಾಕ್ಯದಲ್ಲಿರುವ 'ತಾಸಾಮ್' ಎಂಬ ಬಹುವಚನಶಬ್ದದಿಂದ ಅನೇಕ ದೇವತೆಗಳನ್ನು ಪರಾಮರ್ಶೆ ಮಾಡಬಹುದು.

ಅಭಿಮಾನಿವ್ಯಪದೇಶ ಎಂಬಲ್ಲಿ ಹೇಗೆ ವಿಗ್ರಹ ?

**तत्वप्रकाशिका – दृश्यन्ते मुनिभिरिति स्मृत्यानुकूल्यान्न तत्र शक्तिमात्रमुच्यते ।।६।।**

ಸೂತ್ರದಲ್ಲಿ 'ಅಭಿಮಾನಿನಾಮ್ ವ್ಯಪದೇಶಃ' ಎಂದು ವಿಗ್ರಹ ಮಾಡಬೇಕೋ 'ಅಭಿಮಾನಿನಃ ವ್ಯಪದೇಶಃ' ಎಂದು ವಿಗ್ರಹ ಮಾಡಬೇಕೋ ? ಎಂಬ ಪ್ರಶ್ನೆಗೆ 'ದೃಶ್ಯತೇ ಚ' ಎಂಬ ಮುಂದಿನ ಸೂತ್ರದಲ್ಲಿ ಏಕವಚನವಿರುವುದರಿಂದ 'ಅಭಿಮಾನಿನಃ ವ್ಯಪದೇಶಃ' ಎಂದು ಏಕವಚನಾಂತವಿಗ್ರಹನ್ನು ಮಾಡಬೇಕು.

ಪ್ರಶ್ನೆ - 'ದೃಶ್ಯತೇ ಚ' ಎಂಬ ಸೂತ್ರದ ಭಾಷ್ಯದಲ್ಲಿ 'ದೃಶ್ಯಂತೇ ಮುನಿಭಿಃ' ಎಂಬುದಾಗಿ ಭವಿಷ್ಯತ್ ಪುರಾಣದ ಮಾತಿನಿಂದ ಬಹುವಚನವನ್ನು ಪ್ರಯೋಗಿಸಿದ್ದಾರೆ. ಅದಕ್ಕೆ ಅನುಗುಣವಾಗಿ ಸೂತ್ರದಲ್ಲಿರುವ 'ದೃಶ್ಯತೇ ಚ' ಎಂಬ ಏಕವಚನವನ್ನು ಕೂಡ ಬಹುವಚನಾರ್ಥದಲ್ಲೇ ವಿವಕ್ಷಿಸಬೇಕು. ಆದ್ದರಿಂದ ಅಭಿಮಾನಿದೇವತೆಗಳು ಮುನಿಗಳ ಪ್ರತ್ಯಕ್ಷದಿಂದ ಸಿದ್ಧರಾಗಿದ್ದಾರೆ. ಅಭಿಮಾನಿದೇವತೆಗಳ ಶಕ್ತಿ ಸಾಮರ್ಥ್ಯಗಳು ಕೂಡ ಮುನಿಗಳ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಇದಕ್ಕೆ ಅನುಗುಣವಾಗಿ 'ದೃಶ್ಯತೇ ಚ' ಎಂಬ ಸೂತ್ರಕ್ಕೆ ದೇವತೆಗಳನ್ನು ಅವರ ಸಾಮರ್ಥ್ಯವನ್ನು ಮುನಿಗಳು ಕಂಡಿದ್ದಾರೆ ಎಂದು ಅರ್ಥೈಸಬೇಕು. ಆದ್ದರಿಂದ ಸೂತ್ರದಲ್ಲಿ ಶಕ್ತಿಮಾತ್ರವನ್ನು ಹೇಳುತ್ತಿಲ್ಲವಾದ್ದರಿಂದ ಹಿಂದಿನ ಸೂತ್ರದ ವಿಗ್ರಹವಾಕ್ಯವು ನಿರ್ಣಯವಾಗುತ್ತದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

# ಭಾವದೀಪ

### ದೃಢಯುಕ್ತಿಯ ವಿರೋಧ ಪರಿಹಾರಕ್ಕಾಗಿ ಅಭಿಮಾನ್ಯಧಿಕರಣ

**ಭावदीपः – अभिमानि व्यपदेशस्तु ।। ६ ।। युक्तीति ।।** श्रुतेः प्रतीतार्थप्रच्याव्रनं विना अनुपपद्यमानत्वरूपदृढयुक्तिविरोधपरिहारादित्यर्थः। दृढ्युक्तिविरोधे तु सर्वत्र न्यायईदृश इत्यनुभाष्योक्तेः। तेन न पूर्वेण गतार्थत्वमितिज्ञेयम्। पूर्वसङ्गतिमाह **– वेदेति ।।**

ಗ್ರಂಥದಲ್ಲಿ 'ಯುಕ್ತಿವಿರೋಧಪರಿಹಾರಾತ್' ಎಂದು ಹೇಳಿದ್ದಾರೆ. 'ಶ್ರುತೇಃ ಪ್ರತೀತಾರ್ಥಪ್ರಚ್ಯಾನಂ ವಿನಾ ಅನುಪಪದ್ಯಮಾನತ್ವಂ' 'ಶ್ರುತಿಗೆ ಪ್ರತೀತಾರ್ಥವನ್ನು ಪರಿತ್ಯಾಗ ಮಾಡದಿದ್ದರೆ ಪ್ರಾಮಾಣ್ಯವು ಅನುಪಪದ್ಯಮಾನವಾಗುತ್ತದೆ' ಎಂಬ ದೃಢಯುಕ್ತಿಯ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಎಂಬುದು ಇದರ ಅರ್ಥ.

'ದೃಢಯುಕ್ತಿವಿರೋಧೇ ತು ಸರ್ವತ್ರ ನ್ಯಾಯ ಈದೃಶಃ' 'ದೃಢಯುಕ್ತಿಯ ವಿರೋಧ ಬಂದಾಗ ಈ ನ್ಯಾಯವು ಎಲ್ಲೆಡೆಯೂ ಅನ್ವಯವಾಗುತ್ತದೆ' ಎಂಬ ಅನುವ್ಯಾಖ್ಯಾನದಲ್ಲಿ ಯುಕ್ತಿಯ ವಿರೋಧ ಬಂದಾಗ ಪ್ರತೀತಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಸ್ವೀಕರಿಸಬೇಕು ಎಂದು ಹೇಳಿರುವುದು ಇದಕ್ಕೆ ಗಮಕವಾಗಿದೆ. ಹೀಗೆ ದೃಢಯುಕ್ತಿಯ ಪರಿಹಾರಕ್ಕೋಸ್ಕರ ಈ ಅಧಿಕರಣ ಹೊರಟಿರುವುದರಿಂದ ಹಿಂದಿನ ಅಧಿಕರಣದಿಂದ ಪೌನಯು ಬರುವುದಿಲ್ಲ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಸಾಮಾನ್ಯವಾದ ಯುಕ್ತಿಯ ವಿರೋಧವನ್ನಷ್ಟೇ ಪರಿಹರಿಸಿದ್ದಾರೆ. ಈಗ ಹಿಂದಿನ ಅಧಿಕರಣದಿಂದ ಸಂಗತಿಯನ್ನು 'ವೇದಪ್ರಾಮಾಣ್ಯಾತ್' ಎಂಬ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ.

'ಇತ್ಯಾದಿ ವಚನಾತ್ ಯುಕ್ತಿವಿರುದ್ಧ' ಎಂಬ ಭಾಷ್ಯಕ್ಕೆ ವ್ಯಾಖ್ಯಾನ

**भावदीपः** – पूर्ववद्व्याख्या । मृदादीनां वचनाद्यदृष्टिः श्रुत्यप्रामाण्यकारणमिति न्यायविवरणानुसारेण पूर्वपक्षभाष्यं व्याचष्टे ॥ **न वेदः प्रमाणमित्यादिना ॥** मृदादिशब्दैः सर्गाद्यकालीनपृथिव्यादिकमुच्यते ! इत्यादिवचनादित्यस्यार्थ इत्यादिनेति। युक्तीत्यादि व्याचष्टे ॥ **तथात्वेपीत्यादिना** ॥ इत्यादीत्यादिपदेन मृत्त्वादघटवदिति युक्तिर्गृह्यते। मृत्वेनैव हेतुना जडत्वं सिद्धमिति भावः।

'ವೇದಪ್ರಾಮಾಣ್ಯಾತ್' ಎಂಬ ವಾಕ್ಯವನ್ನು ಹಿಂದಿನ ಅಧಿಕರಣದಲ್ಲಿ ವ್ಯಾಖ್ಯಾನ ಮಾಡಿದಂತೆ ಸಂಗತಿ ಪರವಾಗಿ ವ್ಯಾಖ್ಯಾನವನ್ನು ತಿಳಿಯಬೇಕು. 'ಮೃದಾದೀನಾಂ ವಚನಾದ್ಯದೃಷ್ಟಿಃ ಶ್ರುತ್ಯಪ್ರಾಮಾಣ್ಯಕಾರಣಂ' 'ಮಣ್ಣು ಮೊದಲಾದವುಗಳು ಮಾತನಾಡುವುದು ಕಂಡಿಲ್ಲ. ಇದೇ ಶ್ರುತಿಯ ಅಪ್ರಾಮಾಣ್ಯಕ್ಕೆ ಕಾರಣವಾಗಿದೆ' ಎಂಬ ನ್ಯಾಯವಿವರಣದ ಮಾತಿಗೆ ಅನುಸಾರಿಯಾಗಿ ಪೂರ್ವಪಕ್ಷಭಾಷ್ಯವನ್ನು 'ನ ವೇದಃ ಪ್ರಮಾಣಂ' ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮೃತ್, ಅಪ, ತೇಜಸ್ಸು ಈ ಶಬ್ದಗಳಿಂದ ಸೃಷ್ಟಿಯ ಪ್ರಾರಂಭದಲ್ಲಿರುವ ಮಣ್ಣು, ನೀರು ಹಾಗೂ ತೇಜಸ್ಸುಗಳನ್ನು ವಿವಕ್ಷಿಸಬೇಕು. ಭಾಷ್ಯದಲ್ಲಿ 'ಇತ್ಯಾದಿವಚನಾತ್' ಎಂದು ಹೇಳಿದ್ದಾರೆ. ಇದರ ಅರ್ಥವನ್ನು ಟೀಕೆಯಲ್ಲಿ 'ಇತ್ಯಾದಿನಾ' ಎಂಬುದಾಗಿ ನಿರೂಪಣೆ ಮಾಡುತ್ತಿದ್ದಾರೆ. 'ಯುಕ್ತಿವಿರುದ್ಧಃ' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಅದನ್ನೇ ಟೀಕೆಯಲ್ಲಿ 'ತಥಾತ್ವೇಪಿ' ಎಂಬ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ. 'ಇತ್ಯಾದಿ ಯುಕ್ತಿವಿರುದ್ಧತ್ವೇನ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿರುವ ಆದಿ ಪದದಿಂದ 'ಮೃತ್ ನ ವಕ್ತ್ರೀ ಮೃತ್ವಾತ್ ಘಟವತ್' ಎಂಬ ಯುಕ್ತಿಯನ್ನು ಸಂಗ್ರಹ ಮಾಡಬೇಕು. ಮೃತ್ವವೆಂಬ ಹೇತುವಿನಿಂದಲೇ ಜಡತ್ವವು ಸಿದ್ಧವಾಗುತ್ತದೆ ಎಂಬುದು ಇದರ ಅಭಿಪ್ರಾಯ.

## ಯಾವುದು ಪಕ್ಷ?

**भावदीपः** – भाष्ये वेदैकदेश इति वाच्ये वेद इत्युक्तेरुपपत्तिमाह॥ **एवं चेति ।।** तत्सामान्यादिति न्यायदिति भावः॥ **युक्तेरेवेति ।।** प्रागुक्तजडत्वादियुक्तेरेवेत्यर्थः। न च युक्तेर्मृदब्रवीदित्यादिधर्मिग्राहिश्रुतिबाधः। इदानींतनमृदादिकारणत्वेनादिकालीनमृदाद्यनु-मानसिद्धमात्रस्य पक्षीकरणाद्वा एतत् श्रुतेरनुमानधर्म्यसमर्पकत्वेन प्राबल्याभावादिति भावः ॥ छ ॥

ಭಾಷ್ಯದಲ್ಲಿ 'ವೇದೈಕದೇಶಃ' ಎಂದು ಹೇಳಬೇಕಿತ್ತು. ಹೀಗಿರುವಾಗ 'ವೇದಃ' ಎಂದೇಕೆ ಹೇಳಿದರು? ಈ ಪ್ರಶ್ನೆಗೆ ಉತ್ತರವನ್ನು ನೀಡಲು ಉಪಪತ್ತಿಯನ್ನು 'ಏವಂ ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಕೆಲವು ವಾಕ್ಯಗಳು ಈ ಯುಕ್ತಿಯಿಂದ ವಿರುದ್ಧವಾದ ಮೇಲೆ 'ತತ್ಸಾಮಾನ್ಯಾತ್' ಎಂಬ ಜೈಮಿನಿಯ ನ್ಯಾಯಕ್ಕೆ ಅನುಸಾರವಾಗಿ ಸಮಸ್ತ ವೇದವು ಅಪ್ರಮಾಣವಾಗುತ್ತದೆ ಎಂಬುದು ಈ ವಾಕ್ಯದ ಅಭಿಪ್ರಾಯ. 'ಯುಕ್ತೇರೇವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಹಿಂದೆ ಹೇಳಲ್ಪಟ್ಟ ಜಡತ್ವಾದಿ ಯುಕ್ತಿಗಳನ್ನೇ ಎಂಬುದು ಇದರ ಅರ್ಥ.

ಪ್ರಶ್ನೆ – ಮೃತ್, ನ ವಕ್ತ್ರೀ, ಜಡತ್ವಾತ್ ಎಂಬ ಅನುಮಾನದಲ್ಲಿ ಮೃತ್ ಎಂಬುದು ಪಕ್ಷವಾಗಿದೆ. ಈ ಪಕ್ಷ ಎಂಬ ಧರ್ಮಿಯು ಸಿದ್ಧವಾಗುವುದೇ 'ಮೃದಬ್ರವೀತ್' ಎಂಬ ಶ್ರುತಿಯಿಂದ. ಆ ಶ್ರುತಿಯಿಂದ ಪಕ್ಷವು ಸಿದ್ಧವಾಗಬೇಕಾದರೆ ವಚನಕ್ರಿಯಾ ಉಳ್ಳದ್ದಾಗಿದೆ ಎಂದೇ ತಿಳಿಯುತ್ತದೆ. ಹೀಗಿರುವಾಗ ಅದಕ್ಕೆ ವಿರುದ್ಧವಾಗಿ ಅನುಮಾನವನ್ನು ಮಾಡಿದರೆ ಧರ್ಮಿಗ್ರಾಹಿ ಶ್ರುತಿಬಾಧವು ಬರುತ್ತದಲ್ಲವೇ?

ಉತ್ತರ – ಈ ಪ್ರಶ್ನೆ ತಪ್ಪು. ನಾವು ಮಾಡಿದ ಅನುಮಾನದಲ್ಲಿ ಯಾವ ಮೃತ್ ಎಂಬ ಪಕ್ಷವಿದೆಯೋ ಈ ಧರ್ಮೀಭೂತವಾದ ಪಕ್ಷವು ಶ್ರುತಿಯಿಂದ ಸಿದ್ಧವೇ ಆಗಿಲ್ಲ. ಕಣ್ಣಿಗೆ ಕಾಣಸುತ್ತಿರುವ ಮೃದಾದಿಗಳಿಗೆ ಕಾರಣವಾದುದ್ದು ಆದಿಕಾಲೀನವಾದ ಮೃತ್ ಎಂಬುದಾಗಿ ಅನುಮಾನವನ್ನು ಮಾಡುತ್ತೇವೆ. ಆ ಅನುಮಾನದಿಂದ ಸಿದ್ಧವಾದ್ದನ್ನು ಪಕ್ಷವನ್ನಾಗಿ ಮಾಡಿದ್ದೇವೆ. 'ಮೃದಬ್ರವೀತ್' ಎಂಬ ಶ್ರುತಿಯು ಹೀಗೆ ಅನುಮಾನದಲ್ಲಿ ಧರ್ಮಿಸಮರ್ಪಕ ಆಗುವುದಿಲ್ಲ ಎಂದು ತಿಳಿಯಬೇಕು. ಆದ್ದರಿಂದ ಶ್ರುತಿಗೆ ಪ್ರಾಬಲ್ಯವು ಕೂಡುವುದಿಲ್ಲ.

## ಒಮ್ಮೆ ಏಕವಚನ ಮತ್ತೊಮ್ಮೆ ಬಹುವಚನ ಏಕೆ ?

**भावदीपः** – तत्तन्नामान एवैते तत्तद्वस्त्वभिमानिन इत्यनुभाष्यदिशा सूत्रे तुशब्दो योग्यतयाभिमानिपदेनान्वेतीति भावेन तदर्थं योजनां च दर्शयन् भाष्यं व्याचष्टे॥ **तुशब्द इति**।। भाष्येऽग्रेतनसूत्रानुरोधेन एकवचनान्त तया सूत्रार्थभाषणं समुदायाशयमिति भावेन देवतानामित्यादि बहुवचनप्रयोगस्तासामित्युत्तरभाष्यवाक्यानुरोधेन कृतः। दृश्यते मुतिभिश्च ता इति स्मृतौ तथा प्रयोगात् भाष्ये तासामिति बहुवतनोक्तिरिति भावः।

'ತತ್ತನ್ನಾಮಾನ ಏವೈತೇ ತತ್ತದ್ವಸ್ತ್ವಭಿಮಾನಿನಃ' 'ಆಯಾ ವಸ್ತುಗಳ ಅಭಿಮಾನಿದೇವತೆಗಳು ಆಯಾ ಪದಾರ್ಥಗಳ ಹೆಸರುಗಳಿಂದ ಪ್ರತಿಪಾದ್ಯರಾಗಿದ್ದಾರೆ' ಎಂಬ ಅನುವ್ಯಾಖ್ಯಾನದ ಮಾತಿನಂತೆ ಸೂತ್ರದಲ್ಲಿರುವ 'ತು' ಎಂಬ ಶಬ್ದವು ಅನ್ವಯಯೋಗ್ಯವಾದ್ದರಿಂದ ಅಭಿಮಾನಿ ಪದದ ಜೊತೆ ಅನ್ವಯವನ್ನು ಹೊಂದುತ್ತದೆ. ಈ ಅಭಿಪ್ರಾಯದಿಂದ ತದರ್ಥವನ್ನು ಯೋಜನೆ ಮಾಡುವ ಮೂಲಕ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತುಶಬ್ದಃ' ಎಂಬ ಟೀಕಾ ಪಂಕ್ತಿಯು ಹೊರಟಿದೆ.

ಭಾಷ್ಯದಲ್ಲಿ ಮುಂದಿನ ಸೂತ್ರಕ್ಕೆ ಅನುಗುಣವಾಗಿ ಏಕವಚನಾಂತವಾಗಿ ಸೂತ್ರವನ್ನು ವ್ಯಾಖ್ಯಾನವನ್ನು ಮಾಡಿದ್ದಾರೆ. ಈ ಏಕವಚನಾಂತವಾದ ಸೂತ್ರಾರ್ಥವು ಸಮುದಾಯಾಭಿಪ್ರಾಯದಲ್ಲಿದೆ ಎಂಬುದನ್ನು ತಿಳಿಸಲು 'ದೇವಾನಾಂ' ಇತ್ಯಾದಿಯಾಗಿ ಬಹುವಚನ ಪ್ರಯೋಗವನ್ನು 'ತಾಸಾಂ' ಎಂಬ ಉತ್ತರ ಭಾಷ್ಯಕ್ಕೆ ಅನುಸಾರಿಯಾಗಿ ಮಾಡಿದ್ದಾರೆ. 'ದೃಶ್ಯತೇ ಮುನಿಭಿಶ್ಚ ತಾಃ' ಎಂಬ ಶ್ರುತಿಯಲ್ಲಿ ಹೀಗೆಯೇ ಪ್ರಯೋಗ ಮಾಡಲಾಗಿದೆ. ಆದ್ದರಿಂದ ಭಾಷ್ಯದಲ್ಲಿ 'ತಾಸಾಂ' ಎಂಬ ಬಹುವಚನ ಪ್ರಯೋಗವನ್ನು ಮಾಡಿರುತ್ತಾರೆ.

## ಶ್ರುತಿಗೆ ಹೇಗೆ ವ್ಯಾಖ್ಯಾನ ಮಾಡಬೇಕು ?

**भावदीपः**– अवधारणार्थतुशब्दसूचितमुख्यत्वव्यावर्त्यचोद्यमाह – **स्यान्मतमिति**।। ननूपजीव्यविरोधे तु वेदस्यान्यार्थकल्पना । प्रत्यक्षमुपजीव्यं स्यात्प्रायोयुक्तिरपि क्वचिदिति पूर्वनयानुभाष्योक्त्याऽस्ति श्रुतेरप्यर्थान्तरकल्पनमित्यत आह – **न चेति**।। उपजीव्यप्रत्यक्षविरोधश्च नास्तीत्युक्तं पूर्वपक्षदशायामेवेत्यर्थः। इयं च युक्तिर्न श्रुतेरुपजीव्येति भावः॥

ಅವಧಾರಣಾರ್ಥದಲ್ಲಿರುವ ತುಶಬ್ದದಿಂದ ಸೂಚಿತವಾದ ಯಾವ ಮುಖ್ಯತ್ವವಿದೆಯೋ ಇದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು 'ಸ್ಯಾನ್‌ಮತಂ' ಎಂಬುದರಿಂದ ಹೇಳಿದ್ದಾರೆ.

'ಉಪಜೀವ್ಯವಿರೋಕೇತು ವೇದಸ್ಯಾನ್ಯಾರ್ಥಕಲ್ಪನಾ ಪ್ರತ್ಯಕ್ಷಮುಪಜೀವ್ಯಂ ಸ್ಯಾತ್ ಪ್ರಾಯೋ ಯುಕ್ತಿರಪಿ ಕ್ವಚಿತ್' 'ಉಪಜೀವ್ಯವಿರೋಧವು ಬಂದರೆ ವೇದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು. ಪ್ರತ್ಯಕ್ಷವೇ ಉಪಜೀವ್ಯ ಎನಿಸುತ್ತದೆ. ಕೆಲವೊಮ್ಮೆ ಯುಕ್ತಿಯೂ ಕೂಡ ಉಪಜೀವ್ಯ ಎನಿಸುತ್ತದೆ'. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದ್ದರಿಂದ ಶ್ರುತಿಗೂ ಕೂಡ ಅನ್ಯಾರ್ಥವನ್ನು ಕಲ್ಪನೆ ಮಾಡುವುದು ಕಂಡಿದೆಯಲ್ಲವೇ? ಎಂಬ ಪ್ರಶ್ನೆಗೆ 'ನ ಚ ಉಪಜೀವ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಉಪಜೀವ್ಯ ಪ್ರತ್ಯಕ್ಷ ವಿರೋಧವು ಬರುವುದಿಲ್ಲವೆಂದು ಪೂರ್ವಪಕ್ಷ ದೆಶೆಯಲ್ಲಿಯೇ ಹೇಳಲಾಗಿದೆ. ಈ ಯುಕ್ತಿಯು ಶ್ರುತಿಗೆ ಉಪಜೀವ್ಯವೇ ಅಲ್ಲ ಎಂಬುದು ಅಭಿಪ್ರಾಯ.

### ಶ್ರುತಿಗೆ ಅನುಮಾನ ವಿರೋಧವಿಲ್ಲ

**भावदीपः – मुख्यार्थेति ।।** अभिमन्यमानगतमृत्वादिमृदादिशब्दप्रवृत्ति-निमित्तस्याभिमान्यधीनत्वेन तदधीनत्वादिति न्यायेनाभिमानिनां मृदादिशब्द-मुख्यार्थत्वात्तैः। शब्दैस्तेषां ग्रहणे मुख्यार्थलाभात्। युक्तिविरोधेनापातप्रतीतार्थत्यागेन तात्पर्यार्थत्याग इत्यर्थः। तथा च मृन्नवदतीति जडस्य पक्षत्वे सिद्धसाधनम्। चेतनस्य पक्षत्वे हेतोरसिद्धिरित्यनुमानदूषणं व्यक्तमिति भावः।

ಟೀಕೆಯಲ್ಲಿರುವ 'ಮುಖ್ಯಾರ್ಥ' ಇತ್ಯಾದಿ ಮಾತಿನ ಅರ್ಥ ಹೀಗಿದೆ – ಅಭಿಮನ್ಯಮಾನವಾದ ಮೃದಾದಿಗಳಲ್ಲಿ ಯಾವ ಮೃತ್ವ ಎಂಬ ಪ್ರವೃತ್ತಿನಿಮಿತ್ತವಿದೆಯೋ ಅದು ಅಭಿಮಾನಿದೇವತಾಧೀನವಾಗಿದೆ. 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಮೃದಾದಿಶಬ್ದಗಳಿಂದ ಅಭಿಮಾನಿದೇವತೆಗಳೇ ಮುಖ್ಯವಾಗಿ ಪ್ರತಿಪಾದ್ಯರಾಗುತ್ತಾರೆ. ಅವರ ಅಧೀನವಾಗಿ ಜಡಪದಾರ್ಥವು ಪ್ರತಿಪಾದ್ಯವಾಗುತ್ತದೆ. 'ಮೃತ್' ಇತ್ಯಾದಿ ಶಬ್ದಗಳಿಂದ ಅಭಿಮಾನಿದೇವತೆಗಳನ್ನು ವಿವಕ್ಷಿಸಿದರೆ ಮುಖ್ಯಾರ್ಥವನ್ನೇ ಹೇಳಿದಂತಾಗುತ್ತದೆ, ಅಮುಖ್ಯಾರ್ಥವನ್ನು ಆಶ್ರಯಿಸಿದಂತೆ ಆಗುವುದಿಲ್ಲ. ಆದ್ದರಿಂದ ಯುಕ್ತಿವಿರೋಧವು ಬಂದಾಗ ಆಪಾತತಃ ಪ್ರತೀತವಾದ ಅರ್ಥವನ್ನು ತ್ಯಾಗ ಮಾಡಿದಂತಾಗುತ್ತದೆ ಹೊರತು ಮುಖ್ಯಾರ್ಥವನ್ನು ತ್ಯಾಗ ಮಾಡಿದಂತೆ ಆಗುವುದಿಲ್ಲ.

ಮೃತ್, ನ ವದತಿ ಎಂಬ ಅನುಮಾನದಲ್ಲಿ ಜಡವನ್ನು ಪಕ್ಷವನ್ನಾಗಿ ಮಾಡಿದರೆ ಸಿದ್ಧಸಾಧನತಾದೋಷವು ಬರುತ್ತದೆ. ಚೇತನವನ್ನು ಪಕ್ಷವನ್ನಾಗಿ ಮಾಡಿದರೆ ಜಡತ್ವ ಹೇತುವಿಗೆ ಅಸಿದ್ಧಿ ದೋಷವು ಬರುತ್ತದೆ. ಹೀಗೆ ಅನುಮಾನವನ್ನು ನಿರಾಕರಣೆ ಮಾಡಿದಂತಾಯಿತು. ಇಂತಹ ದುಷ್ಟವಾದ ಅನುಮಾನದ ವಿರೋಧವನ್ನು ಶ್ರುತಿಗೆ ಹೇಳಲು ಸಾಧ್ಯವಿಲ್ಲ ಎಂಬುದು ಅಭಿಪ್ರಾಯ.

'ಅಭಿಮಾನಿವ್ಯಪದೇಶಃ' ಎಂಬಲ್ಲಿ ವಿಗ್ರಹ ಹೇಗೆ ?

**भावदीपः** – सूत्रखण्डभाष्यमवतारयति॥ **(ननु)नाभिमानीति ।।** सूत्रभाष्ययोरनुगतिरूपलक्षणं मत्वाऽऽह – **अनुगतिर्विग्रहश्चेति ।।** देहश्चेत्यर्थः। भाष्ये पूर्वोत्तरविरोधमाशङ्क्याह – **अत्रेति ।।** भाष्य इत्यर्थः। ननु एकवचनस्य सूत्रगतत्वादित्यसिद्धम्। अभिमानिनां व्यपदेश इत्यपि विग्रहप्रदर्शनस्य सुशकत्वादित्यत आह – **दृश्यते चेति ।।** विग्रहस्याभिमानिनो व्यपदेश इत्येवंरूपस्य समासार्थप्रदर्शकवाक्यस्येत्यर्थः।

ಸೂತ್ರ ಖಂಡವನ್ನು ವ್ಯಾಖ್ಯಾನ ಮಾಡುವ ಭಾಷ್ಯಕ್ಕೆ 'ನಾಭಿಮಾನಿದೇವತಾ' ಎಂಬುದರಿಂದ ಅವತಾರಿಕೆಯನ್ನು ನೀಡಿದ್ದಾರೆ. ಸೂತ್ರ ಹಾಗೂ ಭಾಷ್ಯದಲ್ಲಿರುವ ಅನುಗತಿ ಶಬ್ದವು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ 'ಅನುಗತಿಃ ವಿಗ್ರಹಶ್ಚ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ದೇವತೆಗಳು ಎಲ್ಲೆಡೆ ಅನುಗತರಾಗಿದ್ದಾರೆ ಎಂದಷ್ಟೇ ಅಲ್ಲ; ದೇಹವುಳ್ಳವರೂ ಕೂಡ ಆಗಿದ್ದಾರೆ ಎಂಬುದು ಇದರ ಅರ್ಥ. ಭಾಷ್ಯದ ಪೂರ್ವೋತ್ತರ ವಾಕ್ಯಗಳಿಗೆ ವಿರೋಧವನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ಆಶಂಕಿಸಿದ್ದಾರೆ. 'ಅತ್ರ' ಎಂದರೆ ಭಾಷ್ಯದಲ್ಲಿ ಎಂದರ್ಥ.

ಸೂತ್ರದಲ್ಲಿ ಏಕವಚನವಿದೆ ಎಂದು ಹೇಳಿದ್ದೇ ತಪ್ಪು. ಏಕೆಂದರೆ 'ಅಭಿಮಾನಿನಾಂ ವ್ಯಪದೇಶಃ' ಎಂಬುದಾಗಿ ಬಹುವಚನಾಂತವಾಗಿಯೂ ಕೂಡ ವಿಗ್ರಹವನ್ನು ವಿವಕ್ಷಿಸಬಹುದು. ಈ ಪ್ರಶ್ನೆಗೆ 'ದೃಶ್ಯತೇ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅಭಿಮಾನಿನಃ ವ್ಯಪದೇಶಃ' ಎಂಬ ಏಕವಚನಾಂತವಾದ ಸಮಾಸವನ್ನೇ ವಿವಕ್ಷಿಸಬೇಕು. ಈ ಅರ್ಥವನ್ನು ವಿವಕ್ಷಿಸದೇ ಇದ್ದರೆ ಮುಂದಿನ ಸೂತ್ರದಿಂದ ಅನಾನುಗುಣ್ಯದೋಷವು ಪ್ರಾಪ್ತವಾಗುತ್ತದೆ.

## ಭಾಷ್ಯದ ಪೂರ್ವೋತ್ತರ ವಾಕ್ಯಗಳಿಗೆ ವಿರೋಧ ಪರಿಹಾರ

**भावदीपः** – ननूत्तरसूत्रे दृश्यते चाभिमानिदेवतेति यद्यर्थः स्यात्तदा तदनुसारात्पूर्वसूत्रेऽप्युक्तदिशा एकवचनानन्ततया विग्रहः स्यात् । नैतदस्ति। दृश्यते च तासां सामर्थ्यं महद्भिरित्येव तत्र भाषणादित्यत आह – **दृश्यन्त इति ।।** तत्र तासां सामर्थ्यमिति भाष्ये न शक्तिमात्रमुच्यते किन्तु देवता चेत्युपलक्ष्यते कुतः दृश्यन्त इति तत्रोदाहरिष्यमाणस्मृत्यनुसारादित्यर्थः। स्मृतौ बहुवचनोक्तावपि समुदायविवक्षया दृश्यते च देवतेत्यपि विवक्षणीयमिति भावः॥ ६ ॥

ಮುಂದಿನ 'ದೃಶ್ಯತೇ ಚ' ಎಂಬ ಸೂತ್ರದಲ್ಲಿ 'ಅಭಿಮಾನಿದೇವತಾ ದೃಶ್ಯತೇ' ಎಂಬುದಾಗಿ ಏಕವಚನಾಂತವಾಗಿ ಅರ್ಥವನ್ನು ವಿವಕ್ಷಿಸಿದರೆ ಇದಕ್ಕೆ ಅನುಸಾರಿಯಾಗಿ ಹಿಂದಿನ ಸೂತ್ರದಲ್ಲೂ ಕೂಡ ಏಕವಚನಾಂತವಾಗಿ 'ಅಭಿಮಾನಿನಃ ವ್ಯಪದೇಶಃ' ಎಂದು ವಿವಕ್ಷಿಸುವುದು ಸಾಧುವಾಗುತ್ತದೆ. ಆದರೆ 'ಅಭಿಮಾನಿದೇವತಾ ದೃಶ್ಯತೇ' ಎಂಬರ್ಥವನ್ನು ಮುಂದಿನ ಸೂತ್ರದಲ್ಲಿ ವಿವಕ್ಷಿಸುವುದೇ ಇಲ್ಲ. 'ಅಭಿಮಾನಿದೇವಾನಾಂ ಸಾಮರ್ಥ್ಯಂ ಮಹದ್ಭಿಃ ದೃಶ್ಯತೇ' ಎಂಬರ್ಥವನ್ನೇ ವಿವಕ್ಷಿಸಲಾಗುತ್ತದೆ. ಈ ಪ್ರಶ್ನೆಗೆ 'ದೃಶ್ಯಂತೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ಭಾಷ್ಯದಲ್ಲಿ 'ತಾಸಾಂ ಸಾಮರ್ಥ್ಯಂ' ಎಂದು ಹೇಳಿದ್ದಾರೆ. ಮಹಾಜನರು ದೇವತೆಗಳ ಸಾಮರ್ಥ್ಯವನ್ನು ಕಂಡಿದ್ದಾರೆ ಎಂಬುದು ಇದರ ಅರ್ಥ. ಸಾಮರ್ಥ್ಯ ಮಾತ್ರವನ್ನಲ್ಲ ದೇವತೆಗಳನ್ನೂ ಕೂಡ ಕಂಡಿದ್ದಾರೆ ಎಂಬುದನ್ನು ಇಲ್ಲಿ ಉಪಲಕ್ಷಣಯಾ ವಿವಕ್ಷಿಸಬೇಕು. ಏಕೆಂದರೆ 'ದೃಶ್ಯಂತೇ ಮುನಿಭಿಶ್ಚ ತಾಃ' ಎಂಬ ಮುಂದೆ ಉದಾಹರಿಸುವ ಸ್ಮೃತಿಗೆ ಅನುಗುಣವಾಗಿದೆ. ಸ್ಮೃತಿಯಲ್ಲಿ ಬಹುವಚನವನ್ನು ಹೇಳಿದ್ದರೂ ಕೂಡ ಸಮುದಾಯಾರ್ಥದಲ್ಲಿ ಏಕವಚನದ ವಿವಕ್ಷೆಯಿಂದ 'ದೃಶ್ಯತೇ ಚ ದೇವತಾ' ಎಂಬುದಾಗಿಯೂ ಕೂಡ ವಿವಕ್ಷಿಸಬೇಕು.

## ಬ್ರಹ್ಮಸೂತ್ರ

### 'ದೃಶ್ಯತೇ ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – दृश्यते च ।।२।।**

ಅಭಿಮಾನಿದೇವತೆಗಳಲ್ಲಿ ವಿಚಿತ್ರವಾದ ಸಾಮರ್ಥ್ಯವು ಇರುತ್ತದೆಂಬುದನ್ನು ಯೋಗಿಗಳು ಪ್ರತ್ಯಕ್ಷವಾಗಿ ಕಂಡಿರುತ್ತಾರೆ. ಆದ್ದರಿಂದ ವಿರೋಧವಿಲ್ಲ.

ಅರ್ಥ -- ದೃಶ್ಯತೇ ಚ = ಅಭಿಮಾನಿದೇವತೆಗಳಲ್ಲಿ ಇರುವಂತಹ ಅದ್ಭುತವಾದ ಸಾಮರ್ಥ್ಯವನ್ನು ಯೋಗಿಗಳು ತಮ್ಮ ಪ್ರತ್ಯಕ್ಷದಿಂದ ಕಾಣುತ್ತಾರೆ. ಆದ್ದರಿಂದ ಅದರ್ಶನವಿರೋಧಕ್ಕೆ ಕಾರಣವಿಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅಭಿಮಾನ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಅಭಿಮಾನಿದೇವತೆಗಳಲ್ಲಿ ವಿಶಿಷ್ಟ ಸಾಮರ್ಥ್ಯವಿದೆ

**ब्रह्मसूत्रभाष्यम् – ।। दृश्यते च ।।२।।**

**तासां समार्थ्यं महद्भिः ।।**

ಅನುವಾದ - ಅಭಿಮಾನಿದೇವತೆಗಳಿರುವ ವಿಶಿಷ್ಟಸಾಮರ್ಥ್ಯವು ಯೋಗಿ ಜನರಿಂದ ಕಾಣಲ್ಪಟ್ಟಿದೆ.

ಪ್ರತಿಪದಾರ್ಥ -- ಅಪ್ರಾಮಾಣಿಕವಾದ ಅಭಿಮಾನಿದೇವತೆಗಳನ್ನು ಒಪ್ಪಿ ಅವರಲ್ಲಿ ಅಪ್ರಾಮಾಣಿಕವಾದ ಸಾಮರ್ಥ್ಯವನ್ನು ಒಪ್ಪವುದಕ್ಕಿಂತ ಕೇವಲ ವೇದಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ಸುಲಭವಲ್ಲವೆ? ಎಂಬ ಪ್ರಶ್ನೆಗೆ ಮುಂದಿನ ಸೂತ್ರದಿಂದ ಉತ್ತರವನ್ನು ಹೇಳುತ್ತಿದ್ದಾರೆ. ತಾಸಾಂ = ಪೃಥಿವ್ಯಾದ್ಯಭಿಮಾನಿದೇವತೆಗಳ, ಸಾಮರ್ಥ್ಯಂ = ಅಂತರ್ಧಾನ ಶಕ್ತಿ ಹಾಗೂ ಎಲ್ಲೆಡೆ ಇರುವಿಕೆಯ ಸಾಮರ್ಥ್ಯವು, ಮಹದ್ಭಿಃ = ಜ್ಞಾನಿಜನರಿಂದ ಕಾಣಲ್ಪಟ್ಟಿದೆ.

ಈ ವಿಷಯದಲ್ಲಿ ಭವಿಷ್ಯತ್‌ಪುರಾಣವೇ ಆಧಾರ

**ब्रह्मसूत्रभाष्यम् – भविष्यत्पुराणे च –**

**'पृथिव्याद्यभिमानिन्यो देवताः प्रथितौजसः ।**
**अचिन्त्याश्शक्तयस्तासां दृश्यन्ते मुनिभिश्च ताः ।**
**ताश्च सर्वगता नित्यं वासुदेवैकसंश्रयाः ।।' इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये अभिमान्यधिकरणम् ।। ३ ।।**

ಅನುವಾದ - ಭವಿಷ್ಯತ್‌ಪುರಾಣದಲ್ಲಿ ಇದನ್ನು ಸಮರ್ಥಿಸಿದ್ದಾರೆ. ಪ್ರಸಿದ್ಧವಾದ ಸಾಮರ್ಥ್ಯವುಳ್ಳ ಪೃಥಿವ್ಯಾದ್ಯಭಿಮಾನಿದೇವತೆಗಳು ಹಾಗೂ ಅವರಲ್ಲಿರುವ ಅಚಿಂತ್ಯವಾದ ಶಕ್ತಿಸಾಮರ್ಥ್ಯಗಳು ಜ್ಞಾನಿಜನರಿಂದ ಕಾಣಲ್ಪಟ್ಟಿದೆ. ಆ ದೇವತೆಗಳು ನಿರಂತರವಾಗಿ ಎಲ್ಲೆಡೆ ವ್ಯಾಪ್ತರಾಗಿ ಪರಮಾತ್ಮನನ್ನೇ ಆಶ್ರಯಿಸಿದ್ದಾರೆ.

ಪ್ರತಿಪದಾರ್ಥ -- 'ಪರಬುದ್ಧೇರಪ್ರತ್ಯಕ್ಷತ್ವಾತ್' ಎಂಬ ನಿಯಮದಂತೆ, ಜ್ಞಾನಿಜನರು ಅಭಿಮಾನಿದೇವತೆಗಳನ್ನು ಕಂಡಿದ್ದಾರೆ ಎಂಬ ಹೇತುವು ಅಸಿದ್ಧವಾಗಿದೆ. ಈ ಪ್ರಶ್ನೆಗೆ ಪ್ರಮಾಣವಾಕ್ಯವನ್ನು ಭವಿಷ್ಯತ್ ಪುರಾಣದಿಂದ ನೀಡಿದ್ದಾರೆ. ಭವಿಷ್ಯತ್ ಪುರಾಣೇ ಚ = ಭವಿಷ್ಯತ್ ಪುರಾಣದಲ್ಲಿ ಹೀಗೆ ಹೇಳಲ್ಪಟ್ಟಿದೆ - ಪೃಥಿವ್ಯಾದ್ಯಭಿಮಾನಿನ್ಯಃ = ಪೃಥಿವೀ, ಅಪ್ ಮೊದಲಾದ ಅಭಿಮಾನಿದೇವತೆಗಳಾದ, ದೇವತಾಃ = ದೇವತೆಗಳು ಪ್ರಥಿತೌಜಸಃ = ಪ್ರಸಿದ್ಧವಾದ ಶಕ್ತಿಯಿಂದ ಪೂರ್ಣರು, ತಾಸಾಂ = ಆ ದೇವತೆಗಳ, ಶಕ್ತಯಃ = ಸಾಮರ್ಥ್ಯವು, ಅಚಿಂತ್ಯಾಃ = ಚಿಂತಿಸಲು ಅಸಾಧ್ಯವಾಗಿದೆ. ಮುನಿಭಿಃ = ಜ್ಞಾನಿಜನರಿಂದ ತಾಃ = ಆ ಶಕ್ತಿಸಾಮರ್ಥ್ಯಗಳು, ದೃಶ್ಯಂತೇ = ಕಾಣಲ್ಪಡುತ್ತವೆ. ಯಾಃ = ಯಾವ ದೇವತೆಗಳು ನಿತ್ಯಂ = ನಿರಂತರವಾಗಿ, ಸರ್ವಗತಾಃ = ಎಲ್ಲೆಡೆ

ವ್ಯಾಪ್ತರಾಗಿರುವ, ವಾಸುದೇವೈಕಸಂಶ್ರಯಾಃ = ವಾಸುದೇವರೂಪಿಯಾದ ಪರಮಾತ್ಮನನ್ನು ಆಶ್ರಯಿಸಿರುತ್ತಾರೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅಭಿಮಾನ್ಯಧಿಕರಣವು ಸಮಾಪ್ತವಾಯಿತು ॥

## ತತ್ವಪ್ರಕಾಶಿಕಾ

ವೇದವನ್ನು ಅಪ್ರಮಾಣವೆನ್ನುವುದೇ ಲೇಸು

**नन्वत्राप्रामणिकदेवताकल्पनात्तासां च विशिष्टसामर्थ्यकल्पनाद्वरं वेदाप्रामाण्यग्रहणमेव लाघवात् ।**

ಪ್ರಶ್ನೆ - 'ಮೃದಬ್ರವೀತ್' ಇವೇ ಮೊದಲಾದ ವೇದವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುವುದಕ್ಕಾಗಿ 'ಅಭಿಮಾನಿದೇವತೆಗಳು ಮಾತನಾಡಿದರು' ಇತ್ಯಾದಿಯಾಗಿ ಅನ್ಯಾರ್ಥವನ್ನು ಕಲ್ಪನೆ ಮಾಡುತ್ತಿದ್ದೀರಿ. ಇಂಥ ದೇವತೆಗಳನ್ನು ಕಲ್ಪನೆ ಮಾಡಲು ಯಾವುದೇ ಪ್ರಮಾಣ ಇರುವುದಿಲ್ಲ. ಅಷ್ಟೇ ಅಲ್ಲದೆ ಕಲ್ಪಿಸಿದ ದೇವತೆಗಳಲ್ಲಿ ಮಾತನಾಡಲು ಆವಶ್ಯಕವಾದ ವಿಶಿಷ್ಟಸಾಮರ್ಥ್ಯಾದಿಗಳನ್ನು ಕೂಡ ಕಲ್ಪನೆ ಮಾಡಬೇಕು. ಹೀಗೆ ಅನೇಕ ವಿಷಯವನ್ನು ಕಲ್ಪನೆ ಮಾಡುವುದಕ್ಕಿಂತ ವೇದವನ್ನು ಅಪ್ರಮಾಣವೆಂದು ಕಲ್ಪನೆ ಮಾಡುವುದೇ ಲಘುಭೂತವಾಗಿದೆ.

ಈ ಶಂಕೆಯ ಪರಿಹಾರಕ್ಕಾಗಿ 'ದೃಶ್ಯತೇ ಚ' ಎಂಬ ಸೂತ್ರ

**तत्वप्रकाशिका – न च वेदेन तत्सिद्धिस्तत्प्रामाण्ये विवादादित्याशङ्कां परिहरत्सूत्रं पठित्वा तच्छेषमेव पूरयति – दृश्यते चेति ।।**

ವೇದದಿಂದಲೇ ದೇವತೆಗಳು ಸಿದ್ಧರಾಗಿದ್ದಾರೆ ಮತ್ತು ಅವರ ಸಾಮರ್ಥ್ಯವೂ ಕೂಡ ಸಿದ್ಧವಾಗಿದೆ ಆದ್ದರಿಂದ ಕಲ್ಪನಾಗೌರವದೋಷವು ಬರುವುದಿಲ್ಲವೆಂದು ಹೇಳಬಾರದು. ಏಕೆಂದರೆ ವೇದ ಪ್ರಾಮಾಣ್ಯವಿಷಯದಲ್ಲಿಯೇ ವಿವಾದವಿದೆ. ಎಂಬ ಶಂಕೆಯನ್ನು ಪರಿಹರಿಸುವ

ಸೂತ್ರವನ್ನು ಪಠನ ಮಾಡಿ ಸೂತ್ರದಲ್ಲಿ ಇಲ್ಲದೆ ಇರುವ ಪದಗಳನ್ನು ಅಧ್ಯಹಾರ ಮಾಡುವ ಮೂಲಕ ವ್ಯಾಖ್ಯಾನ ಮಾಡಲು ಭಾಷ್ಯದಲ್ಲಿ 'ದೃಶ್ಯತೇ ಚ' ಇತ್ಯಾದಿ ವಾಕ್ಯಗಳು ಹೊರಟಿವೆ.

### ಮಹಾಜನರು ದೇವತೆಗಳ ಶಕ್ತಿಸಾಮರ್ಥ್ಯ ನೋಡಿದ್ದಾರೆ

**तत्वप्रकाशिका – नाप्रामाणिकत्वमभिमानिदेवतानां तत्सामर्थ्यस्य च महद्भिर्दृश्यमानत्वादित्यर्थः :**

ಅಭಿಮಾನಿದೇವತೆಗಳು ಅಪ್ರಾಮಾಣಿಕರಲ್ಲ. ಅವರಲ್ಲಿರುವ ವಿಶಿಷ್ಟಸಾಮರ್ಥ್ಯಾದಿಗಳೂ ಕೂಡ ಅಪ್ರಾಮಾಣಿಕವಲ್ಲ. ಏಕೆಂದರೆ ಮಹಾಜನರು ಅಂಥ ದೇವತೆಗಳನ್ನು, ಅವರಲ್ಲಿರುವ ಶಕ್ತಿ ಸಾಮರ್ಥ್ಯಾದಿಗಳನ್ನು ಸಾಕ್ಷಾತ್ತಾಗಿ ನೋಡಿರುತ್ತಾರೆ. ಇಷ್ಟು 'ದೃಷ್ಯತೇ ಚ' ಎಂಬ ಸೂತ್ರದ ಅರ್ಥ.

### ಪುರಾಣವೂ ಇದನ್ನೇ ಹೇಳಿದೆ

**तत्वप्रकाशिका – परबुद्धेरप्रत्यक्षत्वात् कुत एतदित्यत आह – भविष्यत्पुराणे चेति**

'ಪರಬುದ್ಧೇರಪ್ರತ್ಯಕ್ಷತ್ವಾತ್' ಮತ್ತೊಬ್ಬರ ಬುದ್ಧಿಯು ಪ್ರತ್ಯಕ್ಷವಿಷಯವಲ್ಲ. ಆದ್ದರಿಂದ ಇದನ್ನು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಭವಿಷ್ಯತ್‌ಪುರಾಣದ ವಚನದಿಂದ ಸಿದ್ಧವಾಗಿದೆ. ಎಂದು ಉತ್ತರಿಸುತ್ತಿದ್ದಾರೆ. 'ಭವಿಷ್ಯತ್ ಪುರಾಣೇ ಚ' ಎಂಬುದಾಗಿ

### ಅಭಿಮಾನಿದೇವತೆಗಳಿಗೆ ಶರೀರವಿಲ್ಲವೇ?

**तत्वप्रकाशिका – ता देवताः शक्तयश्च । अथवा विग्रहवतीनां सर्वगतानां तासां दर्शनप्रसङ्ग इत्युक्ते प्रष्टव्यम् । किमज्ञैर्दृश्येरन् महद्भिर्वा ।**

'ಮುನಿಭಿಶ್ಚ ತಾಃ' ಎಂಬಲ್ಲಿರುವ 'ತಾಃ' ಎಂಬ ಪದಕ್ಕೆ ದೇವತೆಗಳು ಮತ್ತು ಅವರ ಶಕ್ತಿ ಸಾಮರ್ಥ್ಯಗಳು ಎಂದರ್ಥ.

ಅಥವಾ ಅಭಿಮಾನಿದೇವತೆಗಳು ಶರೀರವನ್ನು ಹೊಂದಿದ್ದಾರೆ ಮತ್ತು ಎಲ್ಲೆಡೆ ವ್ಯಾಪ್ತರಾಗಿದ್ದಾರೆ ಆದ್ದರಿಂದ ಅವರು ಎಲ್ಲರಿಗೂ ಕಾಣಸಬೇಕಾದೀತು ಎಂದು ಆಕ್ಷೇಪಿಸಿದರೆ ಹೀಗೆ ಪ್ರಶ್ನಿಸುತ್ತೇವೆ - ಅಜ್ಞಜನರಿಗೆ ಕಾಣಸಬೇಕೆಂದು ಅಭಿಪ್ರಾಯವೋ ? ಮಹಾಜನರಿಗೆ ಕಾಣಸಬೇಕೆಂದು ಅಭಿಪ್ರಾಯವೊ?

ಶರೀರವಿದ್ದರೂ ಕಾಣಿಸುವುದಿಲ್ಲ

**तत्वप्रकाशिका – आद्यस्योत्तरं विशेषसामर्थ्यम् । द्वितीयेऽभ्युपगमो दृश्यते चेति ।**

ಅಜ್ಞಜನರಿಗೆ ದರ್ಶನವಾಗಲು ಸಾಧ್ಯವಿಲ್ಲ. ಏಕೆಂದರೆ ದೇವತೆಗಳಿಗೆ ವಿಶೇಷಸಾಮರ್ಥ್ಯ-ವಿರುವುದರಿಂದ ಅಜ್ಞಾನಿಗಳಿಗೆ ಅವರು ಕಾಣಿಸಿಕೊಳ್ಳುವುದಿಲ್ಲ. ಇನ್ನು ಮಹಜ್ಜನರಿಗೆ ಕಾಣಸಬೇಕಾದೀತು ಎಂಬ ಆಕ್ಷೇಪಕ್ಕೆ 'ದೃಶ್ಯತೇ ಚ' ಎಂಬ ಸೂತ್ರವೇ ಉತ್ತರಿಸುತ್ತಿದೆ. ಮಹಾತ್ಮರಿಗೆ ದೇವತೆಗಳ ಶಕ್ತಿ ಸಾಮರ್ಥ್ಯಗಳು ಪ್ರತ್ಯಕ್ಷವಾಗಿಯೇ ಸಿದ್ಧವಾಗಿದೆ.

ಅನುಪಲಬ್ಧಿದೋಷ ಪರಿಹಾರಕ್ಕಾಗಿ ಸೂತ್ರ ಹೊರಟಿದೆ

**तत्वप्रकाशिका – अथवा वस्त्वन्तरमधिष्ठाय तासां वचनादिकं कथमित्यस्योत्तरं तासामिति । परिच्छिन्नानामभिमानिनीनां कथमनेकाभिमन्य-मानाधिष्ठातृत्वमपीत्यस्यानुगतिरिति । अनुपलब्धिबाधपरिहाराय सूत्रमिति ।**

ಅಥವಾ ಮತ್ತೊಂದು ಬಗೆಯಲ್ಲಿಯೂ ಸೂತ್ರದ ಅರ್ಥವನ್ನು ತಿಳಿಯಬಹುದು-

ದೇವತೆಗಳು ಮತ್ತೊಂದು ವಸ್ತುವನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ವಚನಾದಿ-ಕ್ರಿಯೆಗಳಲ್ಲಿ ತೊಡಗುತ್ತಾರೆಂದು ಹೇಳುವುದು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ 'ತಾಸಾಮ್' ಎಂಬ ಉತ್ತರವನ್ನು ನೀಡಿದ್ದಾರೆ. ದೇವತೆಗಳಿಗೆ ವಿಶಿಷ್ಟವಾದ ಸಾಮರ್ಥ್ಯ-ವಿರುವುದರಿಂದ ಬೇರೆ ವಸ್ತುವನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ವಚನಾದಿಕ್ರಿಯೆಗಳ ಕಾರ್ಯದಲ್ಲಿ ತೊಡಗಬಹುದು.

ಪರಿಚ್ಛಿನ್ನರಾದ ಅಭಿಮಾನಿದೇವತೆಗಳು ಅಭಿಮನ್ಯಮಾನವಾದ ಎಲ್ಲಾ ವಸ್ತುಗಳಲ್ಲಿಯೂ ಅಧಿಷ್ಠಿತರಾಗಿ ವಚನಾದಿಕ್ರಿಯೆಗಳನ್ನು ನಡೆಸಲು ಹೇಗೆ ಸಾಧ್ಯ ? ಎಂಬ ಆಶಂಕೆಗೆ 'ಅನುಗತಿಃ' ಎಂದು ಉತ್ತರಿಸಿದ್ದಾರೆ. ವಿಶೇಷಸಾಮರ್ಥ್ಯವುಳ್ಳ ದೇವತೆಗಳು ಎಲ್ಲಾ ಪದಾರ್ಥಗಳಲ್ಲಿ ಇರುವುದಾದರೆ ನಮ್ಮ ಕಣ್ಣಿಗೇಕೆ ಕಾಣಿಸುತ್ತಿಲ್ಲ. ಆದ್ದರಿಂದ ಅಂಥ ದೇವತೆಗಳು ಇಲ್ಲವೆಂದೇ ಹೇಳಬೇಕಲ್ಲವೆ ? ಎಂಬ ಅನುಪಲಬ್ಧಿ ದೋಷವನ್ನು ಪರಿಹಾರ ಮಾಡುವುದಕ್ಕಾಗಿ 'ದೃಶ್ಯತೇ ಚ' ಎಂಬ ಸೂತ್ರವು ಹೊರಟಿದೆ. ಜ್ಞಾನಿಗಳಿಗೆ ಆ ದೇವತೆಗಳು ಕಾಣಿಸುತ್ತಾರಾದ್ದರಿಂದ ಯಾವುದೇ ದೋಷಕ್ಕೂ ಅವಕಾಶವಿಲ್ಲ.

ಅನ್ಯಥಾನುಪಪತ್ತಿಪ್ರಮಾಣದಿಂದ ಅಭಿಮಾನಿದೇವತಾಪರ

**तत्वप्रकाशिका – न च वाच्यं देवतासद्भावेऽपि कुतोऽत्र तद् व्यपदेशकल्पनेति । अचेतनानां वचनाद्यदृष्ट्या निर्दोषवाक्यस्याप्रामाण्यदृष्ट्या च तत्कल्पनोपपत्तेः ।**

ಅಭಿಮಾನಿದೇವತೆಗಳು ಇರುತ್ತಾರೆಂದು ಒಪ್ಪೋಣ. ಆದರೆ ಅಂಥ ದೇವತೆಗಳನ್ನೇ ವಾಕ್ಯಗಳು ಪ್ರತಿಪಾದನೆ ಮಾಡುತ್ತವೆಂದೇಕೆ ಒಪ್ಪಬೇಕು ? ಎಂದು ಪ್ರಶ್ನಿಸಬಾರದು. ಏಕೆಂದರೆ ಜಡಪದಾರ್ಥವು ಮಾತನಾಡುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ವೇದಗಳು ನಿರ್ದುಷ್ಟವಾಗಿವೆ ಎಂದು ಸಿದ್ಧವಾಗಿದೆ. ನಿರ್ದುಷ್ಟವಾದ ವಾಕ್ಯಗಳು ಅಪ್ರಮಾಣವಾಗಲು ಸಾಧ್ಯವಿಲ್ಲ. ಇವೆರಡನ್ನು ಕೂಡಿಸಬೇಕೆಂದರೆ ಅಭಿಮಾನಿದೇವತೆಗಳನ್ನು ವೇದವು ಪ್ರತಿಪಾದನೆಮಾಡುತ್ತಿದೆಯೆಂದು ಒಪ್ಪಬೇಕು.

ಜಗಜ್ಜನ್ಮಾದಿಕಾರಣತ್ವವಿಷಯದಲ್ಲಿ ಯುಕ್ತಿವಿರೋಧವಿಲ್ಲ

**तत्वप्रकाशिका – अतो वेदप्रामाण्ये युक्तिविरोधाभावयुक्तं तेन भगवतो जगत्कारणत्वसाधनमिति सिद्धम् ।। ७ ।।**

।। इति श्रीमज्जयतीर्थभिक्षुविरचितायां तत्वप्रकाशिकायाम् अभिमान्यधिकरणम् ।।

ಆದ್ದರಿಂದ ವೇದಪ್ರಾಮಾಣ್ಯವಿಷಯದಲ್ಲಿ ಯಾವುದೇ ಯುಕ್ತಿಯ ಉಪಯೋಗಕ್ಕೆ ಆಸ್ಪದವಿಲ್ಲ. ಆದ್ದರಿಂದ ಅಂಥ ನಿರ್ದುಷ್ಟವಾದ ವೇದವಾಕ್ಯದಿಂದ ಭಗವಂತನಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಸಿದ್ಧವಾಗುತ್ತದೆ.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಅಭಿಮಾನ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಭಾವದೀಪ

### 'ದೃಶ್ಯತೇ ಚ' ಎಂಬ ಸೂತ್ರಕ್ಕೆ ಅವತಾರಿಕೆ

**भावदीपः – दृश्यते च ।। ७ ।।** ननु सूत्रे देवतातत्सामर्थ्ययोर्मानोक्तिर्निर्बीजा तदुक्तावपि श्रुत्युक्तिं विना प्रत्यक्षोक्तिर्निर्बीजेत्यतोऽवतारयति॥ **नन्विति ।।** तत्सिद्धिः तयोः सिद्धिरित्यर्थः। देवतातच्छक्तितपरत्वेन भाष्यं सूत्रान्विततया व्याचष्टे॥ **नाप्रामाणिकत्वमिति ।।**

ಸೂತ್ರದಲ್ಲಿ ದೇವತೆಗಳು ಹಾಗೂ ಅವರ ಸಾಮರ್ಥ್ಯ; ಈ ಎರಡು ವಿಷಯದಲ್ಲಿ ಪ್ರಮಾಣವನ್ನು ಹೇಳುವುದು ಅನಾವಶ್ಯಕ. ಹಾಗೇನಾದರೂ ಪ್ರಮಾಣ ಹೇಳುವುದಾದರೆ ಶ್ರುತಿಯನ್ನೇ ಹೇಳಬೇಕು. ಅದನ್ನು ಬಿಟ್ಟು ಪ್ರತ್ಯಕ್ಷ ಪ್ರಮಾಣವನ್ನು ಹೇಳುವುದು ವ್ಯರ್ಥ ಎಂಬ ಆಕ್ಷೇಪವನ್ನು ಮಾಡುವ ಮೂಲಕ 'ದೃಶ್ಯತೇ ಚ' ಎಂಬ ಸೂತ್ರಕ್ಕೆ ಅವತಾರಿಕೆಯನ್ನು 'ನನ್ವತ್ರ' ಇತ್ಯಾದಿ ಟೀಕಾವಾಕ್ಯದಿಂದ ಮಾಡುತ್ತಿದ್ದಾರೆ.

'ತತ್ಸಿದ್ಧಿಃ' ಎಂಬ ಪದಕ್ಕೆ ದೇವತೆಗಳು ಹಾಗೂ ಅವರ ಸಾಮರ್ಥ್ಯ ಇವುಗಳು ಸಿದ್ಧವಾಗುತ್ತವೆ ಎಂದರ್ಥ. ದೇವತೆಗಳು ಹಾಗೂ ಅವರ ಸಾಮರ್ಥ್ಯ ಎರಡನ್ನೂ ಭಾಷ್ಯದಲ್ಲಿ ವಿವಕ್ಷಿಸಬೇಕು ಎಂಬುದಾಗಿ ಸೂತ್ರದ ಜೊತೆ ಅನ್ವಯ ಮಾಡಿ ವ್ಯಾಖ್ಯಾನ ಮಾಡಲು 'ನ ಅಪ್ರಾಮಾಣಿಕತ್ವಂ' ಇತ್ಯಾದಿ ಟೀಕಾ ಪಂಕ್ತಿಯು ಹೊರಟಿದೆ.

### ವೇದವನ್ನು ಬಿಟ್ಟು ಯೋಗಿಪ್ರತ್ಯಕ್ಷವನ್ನೇಕೆ ಪ್ರಮಾಣವೆಂದರು ?

**भावदीपः** – ता इत्यनूद्यार्थमाह – **ता देवताश्शक्तयश्चेति**।। द्वयोरपि प्रकृतत्वादिति भावः। ननु वेदादिप्रामाण्यविवादे बीजाभावस्योक्तत्वात्तत्यागेन देवतादौ योगिप्रत्यक्षोक्तिरयुक्ता। अन्यथा योगिप्रत्यक्षे स्मृतेः प्रमाणीकरणायोगादिति पूर्वत्रारुच्याऽऽह – **अथवेति**।।

ಟೀಕೆಯಲ್ಲಿ 'ತಾಃ' ಎಂಬುದಾಗಿ ಭಾಷ್ಯದಲ್ಲಿರುವ ಪದವನ್ನು ಅನುವಾದ ಮಾಡಿ 'ದೇವತಾಃ, ಶಕ್ತೀಶ್ಚ' ಎಂಬುದಾಗಿ ಅರ್ಥವನ್ನು ಬರೆದಿದ್ದಾರೆ. ಏಕೆಂದರೆ ದೇವತೆಗಳು ಮಾತ್ರ ಪ್ರಸಕ್ತರಲ್ಲ, ಅವರ ಶಕ್ತಿಯೂ ಕೂಡ ಪ್ರಸಕ್ತವಾಗಿದೆ.

ವೇದಾದಿ ಪ್ರಾಮಾಣ್ಯದಲ್ಲಿ ವಿವಾದವಿದೆ ಎನ್ನಲು ಯಾವುದೇ ಕಾರಣವಿಲ್ಲ. ಹೀಗಿರುವಾಗ ಇದನ್ನು ಬಿಟ್ಟು ದೇವತೆಗಳು ಹಾಗೂ ಅವರ ಸಾಮರ್ಥ್ಯ ಈ ಎರಡರ ವಿಷಯದಲ್ಲಿ ಯೋಗಿ ಪ್ರತ್ಯಕ್ಷವನ್ನು ಪ್ರಮಾಣವನ್ನಾಗಿ ಏಕೆ ಹೇಳಿದರು? ಒಂದು ವೇಳೆ ವೇದಾದಿ ಪ್ರಾಮಾಣ್ಯದಲ್ಲಿ ವಿವಾದ ಇದೆ ಎನ್ನುವುದಾದರೆ ಆಗ ಯೋಗಿಪ್ರತ್ಯಕ್ಷಕ್ಕೆ ಸ್ಮೃತಿ ಪ್ರಮಾಣವನ್ನು ಆಧಾರವನ್ನಾಗಿ ನೀಡುವುದೂ ಕೂಡ ಅಯುಕ್ತವಾಗುತ್ತದೆ. ಏಕೆಂದರೆ ವೇದದಂತೆ ಸ್ಮೃತಿಯೂ ಕೂಡ ವಿವಾದಗ್ರಸ್ತವಾಗಿದೆ. ಹೀಗೆ ಹಿಂದಿನ ಪಕ್ಷದಲ್ಲಿ ಅಸ್ವಾರಸ್ಯವನ್ನು ಕಂಡು ಮತ್ತೊಂದು ಪಕ್ಷವನ್ನು 'ಅಥವಾ' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

### 'ವಿಶೇಷಾನುಗತಿಭ್ಯಾಂ' ಎಂಬ ಹೇತುವಿಗೆ ಎಲ್ಲಿ ಅನ್ವಯ ?

**भावदीपः** – अत्र पक्षद्वयेऽपि विशेषानुगतिभ्यामिति हेत्वोर्न च दर्शनप्रसङ्ग इत्याद्यध्याहृतसाध्यन्वयादरुच्याऽभिमानिव्यपदेश इति श्रुतसाध्यान्वयेन मतान्तरमाह – **अथवा वस्त्वन्तरमिति**।। तर्हि दृश्यते चेति सूत्रं किमर्थमित्यत आह – **अनुपलब्धीति**।।

ಈ ಎರಡು ಪಕ್ಷಗಳಲ್ಲಿ 'ವಿಶೇಷಾನುಗತಿಭ್ಯಾಂ' ಎಂಬ ಹೇತುಗಳಿಗೆ 'ನ ದರ್ಶನ ಪ್ರಸಂಗಃ' ಎಂಬ ಅಧ್ಯಾಹೃತವಾದ ಸಾಧ್ಯದ ಜೊತೆ ಅನ್ವಯವನ್ನು ಮಾಡಿದ್ದಾರೆ. ಇದರಲ್ಲಿ ಅರುಚಿಯನ್ನು ಕಂಡು

'ಅಭಿಮಾನಿವ್ಯಪದೇಶಃ' ಎಂಬ ಸೂತ್ರದಲ್ಲಿ ಶ್ರುತವಾದ ಸಾಧ್ಯದ ಜೊತೆ ಅನ್ವಯವನ್ನು ಮಾಡುವುದಕ್ಕಾಗಿ 'ಅಥವಾ' ಎಂಬ ವಾಕ್ಯದಿಂದ ಮತ್ತೊಂದು ಪಕ್ಷವನ್ನು ಉಪಪಾದನೆ ಮಾಡುತ್ತಿದ್ದಾರೆ.

'ಅಭಿಮಾನಿವ್ಯಪದೇಶಃ' ಎಂಬ ಹಿಂದಿನ ಸೂತ್ರದ ಜೊತೆ ಅನ್ವಯವನ್ನು ಮಾಡುವುದಾದರೆ 'ದೃಶ್ಯತೇ ಚ' ಎಂಬ ಸೂತ್ರವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಅನುಪಲಬ್ಧಿ' ಎಂಬ ವಾಕ್ಯವು ಹೊರಟಿದೆ. 'ಅನುಪಲಬ್ಧಿ' ಎಂಬ ಬಾಧದ ಪರಿಹಾರಕ್ಕೋಸ್ಕರ ಎರಡನೇ ಸೂತ್ರವು ಸಾರ್ಥಕವಾಗಿದೆ.

## ನ್ಯಾಯವಿವರಣಕ್ಕೆ ವ್ಯಾಖ್ಯಾನ

**भावदीपः –** योगिभिरप्यनुपलभ्यमानत्वान्नास्त्यभिमानिदेवतादीत्याशङ्कानिरसाय दृश्यते चेति सूत्रमित्यर्थः। न मृदादीनां वचनाद्यदृष्टिः श्रुत्यप्रामाण्यकारणं अपि तु वचनादिशक्ताया मृदादिदेवतायाः शब्दैर्वाच्यत्वद्योतिकैवेति न्यायविवरणे पूर्वपक्षांशस्य भाष्यव्याख्यायैव प्राग्विवृतत्वात्सिद्धान्तांशं अत्र योजयितुं शङ्कामाह **– न च वाच्यमिति ।। अत इति ।।**

मृदादिशब्दानामभिमानिदेवतापरत्वादित्यर्थः ॥ ७ ॥ अ० ३ ॥

ಯೋಗಿಗಳಿಗೂ ಕೂಡ ದೇವತೆಗಳು ಕಂಡಿರುವುದಿಲ್ಲ. ಆದ್ದರಿಂದ ಅಭಿಮಾನಿದೇವತೆಯೇ ಇರುವುದಿಲ್ಲವೆಂದು ಆಕ್ಷೇಪ ಮಾಡಿದರೆ ಇದರ ಪರಿಹಾರಕ್ಕಾಗಿ 'ದೃಶ್ಯತೇ ಚ' ಎಂಬ ಸೂತ್ರವು ಹೊರಟಿದೆ ಎಂಬುದು ಅನುಪಲಬ್ಧಿ ಎಂಬ ವಾಕ್ಯದ ಅಭಿಪ್ರಾಯವಾಗಿದೆ.

ಮೃದಾದಿಗಳಲ್ಲಿ ಮಾತನಾಡುವಿಕೆಯು ಕಾಣಿಸುತ್ತಿಲ್ಲ. ಇದು ಶ್ರುತಿಯ ಅಪ್ರಾಮಾಣ್ಯಕ್ಕೆ ಕಾರಣವಲ್ಲ. ಮತ್ತೇನೆಂದರೆ ಮಾತನಾಡಲು ಸಮರ್ಥರಾದ ಮೃದಾದ್ಯಭಿಮಾನಿ ದೇವತೆಗಳು ಮೃತ್ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆ ಎಂಬುದಕ್ಕೆ ಮೃದಾದಿಗಳಲ್ಲಿರುವ ವಚನಾದ್ಯದೃಷ್ಟಿಯು ದ್ಯೋತಕವಾಗಿದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಿರುತ್ತಾರೆ. ಇಲ್ಲಿರುವ ಪೂರ್ವಪಕ್ಷಾಂಶವನ್ನು ಭಾಷ್ಯವನ್ನು ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಈ ಹಿಂದೆಯೇ ವ್ಯಾಖ್ಯಾನಿಸಿದಂತಾಯಿತು. ಪ್ರಕೃತ ನ್ಯಾಯವಿವರಣದ ಸಿದ್ಧಾಂತ ಭಾಗವನ್ನು ಯೋಜನೆ ಮಾಡುವುದಕ್ಕಾಗಿ 'ನ ಚ ವಾಚ್ಯಂ' ಎಂಬ

ವಾಕ್ಯದಿಂದ ಆಶಂಕಿಸುತ್ತಿದ್ದಾರೆ. 'ಅತಃ' ಎಂಬ ಪದಕ್ಕೆ ಮೃದಾದಿ ಶಬ್ದಗಳು ಅಭಿಮಾನಿದೇವತಾ ಪರವಾಗಿರುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಅಭಿಮಾನ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## अभिमान्यधिकरणम् (२।१।३)

ಪ್ರಬಲ ಯುಕ್ತಿವಿರೋಧ ಪರಿಹಾರ

।। अभिमानिव्यपदेशस्तु विशेषानुगतिभ्याम् ।।२-१-६।।

अथ दृढयुक्त्यविरोध उच्यते । तुरेव । योग्यतयाऽभिमानिपदेनान्वेति । ''मृदब्रवीत्'', ''ता आप ऐक्षन्त'' इत्यादिश्रुतावभिमानिनश्चेतनस्यैव व्यपदेशः न तु जडस्य । येन मृन्न वक्त्री जडत्वादित्यादियुक्तिविरोधः स्यादिति भावः ।

ಈ ಅಧಿಕರಣದಲ್ಲಿ ಪ್ರಬಲವಾದ ಯುಕ್ತಿವಿರೋಧವನ್ನು ಪರಿಹರಿಸಲಾಗಿದೆ. ಸೂತ್ರದಲ್ಲಿರುವ 'ತು' ಶಬ್ದವು ಅವಧಾರಣಾರ್ಥದಲ್ಲಿದೆ. ಇದು ಅನ್ವಯಕ್ಕೆ ಯೋಗ್ಯವಾಗಿರುವುದರಿಂದ

ಅಭಿಮಾನಿಪದದ ಜೊತೆ ಅನ್ವಿತವಾಗುತ್ತದೆ. 'ಮೃದಬ್ರವೀತ್', 'ತಾ ಆಪ ಐಕ್ಷಂತ' ಇವೇ ಮೊದಲಾದ ಶ್ರುತಿಗಳಲ್ಲಿ ಅಭಿಮಾನಿಚೇತರನ್ನೇ ಹೇಳಲಾಗಿದೆ ಹೊರತು, ಜಡವನ್ನಲ್ಲ. ಜಡವನ್ನು ಹೇಳಿದ್ದಲ್ಲಿ 'ಮೃತ್ ನ ವಕ್ತ್ರೀ ಜಡತ್ವಾತ್' ಇತ್ಯಾದಿ ಯುಕ್ತಿವಿರೋಧವು ಪ್ರಾಪ್ತವಾಗುತ್ತಿತ್ತು ಎಂಬುದು ಸೂತ್ರದ ಅಭಿಪ್ರಾಯ.

**नन्वभिमानिनः प्रादेशिकत्वविदेहत्वयोर्वैय्यर्थ्यं वक्तृत्वाद्ययोगो व्याप्तत्व सदेहत्वयोरनुपलम्भबाध इत्यत उक्तम् - विशेषेति । विशिष्यत इति विशेषः शक्तिः । अनुगतिर्व्याप्तिः, ताभ्याम् । व्याप्तत्वसदेहत्वयोरङ्गीकारेऽप्यन्तर्धानशक्त्या अदर्शनोपपत्तेरिति भावः ।**

ಅಭಿಮಾನಿದೇವತೆಗಳಿಗೆ ಪ್ರಾದೇಶಿಕತ್ವ ಹಾಗೂ ವಿದೇಹತ್ವಗಳನ್ನು ಒಪ್ಪಿದರೆ ವೈಯರ್ಥ್ಯ ಬರುತ್ತದೆ. ಹಾಗೂ ವಕ್ತೃತ್ವವೂ ಕೂಡ ಕೂಡುವುದಿಲ್ಲ. ಒಂದುವೇಳೇ ವ್ಯಾಪ್ತತ್ವ ಮತ್ತು ಸದೇಹಗಳನ್ನು ಒಪ್ಪಿದರೆ ಅನುಪಲಂಭಬಾಧವು ಪ್ರಾಪ್ತವಾಗುತ್ತದೆ. ಅ, [illegible] ಉತ್ತರಿಸುವುದಕ್ಕಾಗಿ 'ವಿಶೇಷಾನುಗತಿಭ್ಯಾಮ್' ಎಂಬ ಸೂತ್ರಭಾಗವು ಹೊರಟಿದೆ. ವಿಶೇಷ ಶಬ್ದಕ್ಕೆ 'ವಿಶಿಷ್ಯತೇ ಇತಿ ವಿಶೇಷಃ' ಎಂಬ ನಿಷ್ಪತ್ತಿಯಿಂದ ಶಕ್ತಿಯೆಂದರ್ಥ. 'ಅನುಗತಿ' ಶಬ್ದಕ್ಕೆ ವ್ಯಾಪ್ತಿ ಎಂದರ್ಥ. ಶಕ್ತಿ ಹಾಗೂ ವ್ಯಾಪ್ತಿಗಳಿರುವುದರಿಂದ ಎಂಬರ್ಥವನ್ನು ಹೇಳಿದಂತಾಗುತ್ತದೆ. ವ್ಯಾಪ್ತತ್ವ ಮತ್ತು ಸದೇಹತ್ವಗಳನ್ನು ಅಂಗೀಕಾರ ಮಾಡಿದರೂ ಕೂಡ ಅಂತರ್ಧಾನಶಕ್ತಿಯಿರುವುದರಿಂದ ಕಾಣಿಸದಿರುವುದು ಉಪಪನ್ನವಾಗುತ್ತದೆ ಎಂಬುದು ಅಭಿಪ್ರಾಯ. (ಅಭಿಮನ್ಯಮಾನವೆಂದು ಹೇಳಲ್ಪಟ್ಟ ಯಾವ ವಸ್ತುವಿದೆಯೋ, ಅದರಲ್ಲಿ ಕೆಲವು ಭಾಗದಲ್ಲಿ ಮಾತ್ರ. ಯಾವ ಭಾಗದಲ್ಲಿ ಅಭಿಮಾನಿದೇವತೆಯು ಇರುವುದಿಲ್ಲವೋ, ಅದರಂತೆ ಇತರ ಭಾಗವೂ ಕೂಡ ಅಭಿಮಾನಿದೇವತೆಯು ಇರುವುದಿಲ್ಲವೆಂದು ಒಪ್ಪಬಹುದು. ಹಾಗಾಗಿ ಅಭಿಮಾನಿದೇವತೆಯನ್ನು ಒಪ್ಪುವುದು ವ್ಯರ್ಥವಾಗುತ್ತದೆ ಎಂಬುದು ಇಗಗ [illegible].)

ವಿವರಣೆ - ಅಭಿಮಾನಿದೇವತೆಯು ತನ್ನಿಂದ ಅಭಿಮನ್ಯಮಾನವಾದ ವಸ್ತುವಿನಲ್ಲಿ ಸಮಗ್ರವಾಗಿರುವುದಿಲ್ಲ. ಏಕದೇಶದಲ್ಲಿ ಮಾತ್ರ ಇರುತ್ತಾರೆ ಎಂಬುದಾಗಿ ಪ್ರಾದೇಶಿಕತ್ವವನ್ನು ಒಪ್ಪಿದರೆ ಅಥವಾ ಅಭಿಮಾನಿದೇವತೆಗೆ ದೇಹವೇ ಇರುವುದಿಲ್ಲವೆಂದು ಒಪ್ಪಿದರೆ ಅಂಥ ಅಭಿಮಾನಿದೇವತೆಯನ್ನು ಒಪ್ಪಿಯೂ ಕೂಡ ಉಪಯೋಗವಿಲ್ಲ. ಹಾಗೂ ದೇಹವೇ ಇಲ್ಲದ

ಕಾರಣ ವಕ್ತೃತ್ವವೂ ಕೂಡ ಯುಕ್ತವಾಗುವುದಿಲ್ಲ. ಆದಕ್ಕಾಗಿ ಅಭಿಮನ್ಯಮಾನವಾದ ವಸ್ತುವಿನಲ್ಲಿ ಅಭಿಮಾನಿದೇವತೆಯೇ ವ್ಯಾಪ್ತವಾಗಿರುತ್ತಾರೆ. ಮತ್ತು ದೇಹಸಹಿತವಾಗಿರುತ್ತಾರೆಂದೇ ಹೇಳಬೇಕು. ಹೀಗೆ ಹೇಳಿದರೆ ಅಭಿಮಾನಿದೇವತೆಯು ಇದ್ದೂ ಕೂಡ ಕಾಣಸುತ್ತಿಲ್ಲವಾದ್ದರಿಂದ ಅನುಪಲಂಭಬಾದವು ಬರುತ್ತದೆ. ಈ ಆಕ್ಷೇಪದ ಪರಿಹಾರಕ್ಕಾಗಿಯೇ 'ವಿಶೇಷಾನುಗತಿಭ್ಯಾಮ್' ಎಂಬುದಾಗಿ ಸೂತ್ರದಲ್ಲಿ ಹೇಳಿದ್ದಾರೆ.

ಅಭಿಮಾನಿದೇವತೆಗೆ ದೇಹವಿದ್ದರೂ ಕೂಡ ಅಂತರ್ಧಾನಶಕ್ತಿಯಿದೆ. ಮತ್ತು ಎಲ್ಲೆಡೆಯು ವ್ಯಾಪ್ತತ್ವವು ಇರುತ್ತದೆ. ಆದ್ದರಿಂದ ವಕ್ತೃತ್ವಾದ್ಯಯೋಗವಾಗಲೀ, ಅನುಪಲಂಬಬಾಧವಾಗಲೀ ಇರುವುದಿಲ್ಲ.

'ಅನುಗತಿವಿಶೇಷಾಭ್ಯಾಂ' ಎಂದು ಹೇಳಬೇಕಿತ್ತಲ್ಲವೇ?

**अत्राकाङ्क्षाक्रमोल्लङ्घनेऽल्पाक्षरत्वं प्रयोजकम् । यद्वा कथमभिमानिनः पृथ्वियादिवस्त्वन्तरमधिष्ठाय वचनादिकम् । कथं च परिच्छिन्नस्यानेकाभिमन्यमानाधिष्ठातृत्वमित्यत उक्तं विशेषेति । तस्य तथा सामर्थ्यादभिमन्यमाने सर्वत्रांशतो व्याप्त्वाच्चेत्यर्थः ।**

ಇಲ್ಲಿ ಆಕಾಂಕ್ಷಾಕ್ರಮವನ್ನು ಉಲ್ಲಂಘಿಸಲು ಅಲ್ಪಾಕ್ಷರತ್ವವು ಪ್ರಯೋಜಕವಾಗಿದೆ. ಅಥವಾ 'ವಿಶೇಷಾನುಗತಿಭ್ಯಾಂ' ಎಂಬುದಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನವನ್ನು ತಿಳಿಯಬಹುದು - ಅಭಿಮಾನಿದೇವತೆಯು ಪೃಥಿವೀ ಮೊದಲಾದ ಬೇರೆ ವಸ್ತುವನ್ನೇ ಅಧಿಷ್ಠಾನ ಮಾಡಿಕೊಂಡು, ವಚನಾದಿಗಳನ್ನು ಹೊಂದಲು ಹೇಗೆ ಸಾಧ್ಯವಾಗುತ್ತದೆ ? ಅಥವಾ ಪರಿಚ್ಛಿನವಾದ ಅಭಿಮಾನಿದೇವತೆಯು ಅನೇಕ ಅಭಿಮನ್ಯವಾದ ಪದಾರ್ಥಗಳಲ್ಲಿ ಇರಲು ಹೇಗೆ ಸಾಧ್ಯ ? ಈ ಪ್ರಶ್ನೆಗೆ 'ವಿಶೇಷಾನುಗತಿಭ್ಯಾಂ' ಎಂಬುದರಿಂದ ಉತ್ತರಿಸಿದ್ದಾರೆ. ಅಭಿಮಾನಿದೇವತೆಗೆ ಅಂಥ ಸಾಮರ್ಥ್ಯವಿದೆ. ಮತ್ತು ಆ ಅಭಿಮನ್ಯಮಾನವಾದ ವಸ್ತುಗಳಲ್ಲೆಲ್ಲೆಡೆಯೂ ಅಂಶತಃ ವ್ಯಾಪ್ತಿಯೂ ಕೂಡ ಇರುತ್ತದೆ. ಆದ್ದರಿಂದ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

ವಿವರಣೆ - ಹಿಂದೆ ಅಭಿಮಾನಿದೇವತೆಯು ಒಂದು ಪ್ರದೇಶದಲ್ಲಿ ಇರುತ್ತಾರೋ, ಅಥವಾ ಎಲ್ಲೆಡೆಯೂ ಇರುತ್ತಾರೋ ಎಂಬುದಾಗಿ ವಿಕಲ್ಪವನ್ನು ಮಾಡಲಾಗಿತ್ತು. ಹಾಗೂ

ಆ ಅಭಿಮಾನಿದೇವತೆಗೆ ದೇಹವಿದೆಯೋ, ಇಲ್ಲವೋ ಎಂಬುದಾಗಿಯೂ ಕೂಡ ವಿಕಲ್ಪ ಮಾಡಲಾಗಿತ್ತು. ಈ ಆಕಾಂಕ್ಷೆಗೆ ಅನುಗುಣವಾಗಿ ಸೂತ್ರದಲ್ಲಿ ಅನುಗತಿಶಬ್ದನ್ನು ಮೊದಲು ಹೇಳಿ, ಅನಂತರ ವಿಶೇಷಶಬ್ದವನ್ನು ಪ್ರಯೋಗ ಮಾಡಬೇಕಿತ್ತು. ಈ ಆಕಾಂಕ್ಷಾಕ್ರಮವನ್ನು ಉಲ್ಲಂಘನೆ ಮಾಡಲು ಏನು ಕಾರಣ ? ಎಂಬ ಪ್ರಶ್ನೆಗೆ 'ಅತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ವಿಶೇಷ' ಮತ್ತು 'ಅನುಗತಿ' ಎಂಬೆರಡು ಪದಗಳಲ್ಲಿ ವಿಶೇಷ ಎಂಬ ಪದವು ಅಲ್ಪಾಕ್ಷರವುಳ್ಳದ್ದಾಗಿದೆ. ದ್ವಂದ್ವಸಮಾಸದಲ್ಲಿ 'ಅಲ್ಪಾಚ್‌ತರಂ ಪೂರ್ವಂ' ಎಂಬ ಸೂತ್ರದಂತೆ ಅಲ್ಪಾಚ್‌ವುಳ್ಳ ಪದವೇ ಮೊದಲು ಪ್ರಯೋಗ ಮಾಡಬೇಕಾಗಿದ್ದರಿಂದ ವಿಶೇಷಶಬ್ದವನ್ನು ಮೊದಲು ಪ್ರಯೋಗಿಸಿದ್ದಾರೆ. ಅಥವಾ 'ವಿಶೇಷಾನುಗತಿಭ್ಯಾಂ' ಎಂಬ ಪ್ರಯೋಗಕ್ಕೆ ಮತ್ತೊಂದು ಕಾರಣ ಹೀಗಿದೆ - ಅಭಿಮಾನಿದೇವತೆಯು ಮತ್ತೊಂದು ಅಧಿಷ್ಠಾನವನ್ನು ಅಪೇಕ್ಷಿಸಿ ವಚನಕ್ರಿಯಾದಿಗಳನ್ನು ಹೊಂದುತ್ತಾನೆ ಎಂಬುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ವಿಶೇಷ' ಎಂಬ ಪದದಿಂದ ಅಂಥ ಸಾಮರ್ಥ್ಯವು ಅಭಿಮಾನಿದೇವತೆಗಿದೆ ಎಂದು ಉತ್ತರಿಸಿದ್ದಾರೆ. ಪರಿಚ್ಛಿನ್ನನಾದ ಅಭಿಮಾನಿದೇವತೆಯು ಎಲ್ಲೆಡೆಯು ವ್ಯಾಪ್ತನಾಗಿರಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅನುಗತಿ' ಎಂಬ ಪದದಿಂದ ಅಭಿಮಾನಿದೇವತೆಯು ಅಂಶತಃ ಎಲ್ಲೆಡೆಯೂ ವ್ಯಾಪ್ತನಾಗಿರುತ್ತಾನೆ ಎಂಬುದಾಗಿ ಉತ್ತರಿಸಿದ್ದಾರೆ.

### ಸೂತ್ರದಲ್ಲಿ ಚೇತನ ಪದವನ್ನು ಪ್ರಯೋಗಿಸಬಹುದಿತ್ತಲ್ಲವೇ?

**अत्र चेतनेति वाच्येऽभिमानीत्युक्तिरभिमन्यमानगतमृत्वादिमृच्छब्द-प्रवृत्तिनिमित्तस्याभिमान्यधीनत्वादिदि न्यायो मृदादिशब्दानां मृदादिभ्योऽप्यभिमानिनि तुशब्दसूचितमुख्यत्वोपपादानायानुसन्धेय इति सूचनाय ।**

ಸೂತ್ರದಲ್ಲಿ 'ಅಭಿಮಾನಿ' ಎಂಬ ಪದದ ಬದಲು 'ಚೇತನ' ಎಂಬ ಪದವನ್ನು ಪ್ರಯೋಗಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಮೃತ್ ಮೊದಲಾದ ಜಡಪದಾರ್ಥಗಳಿಗೆ ಯಾವ ಅಭಿಮಾನಿದೇವತೆಗಳು ಇದ್ದಾರೋ, ಅವರ ಅಧೀನವಾಗಿಯೇ ಮೃದಾದಿಗಳಲ್ಲಿ ಮೃತ್ವ ಮೊದಲಾದ ಧರ್ಮಗಳಿವೆ. ಈ ಪ್ರಮೇಯವನ್ನು ತಿಳಿಸಬೇಕಾಗಿದೆ. ಆದ್ದರಿಂದ 'ಮೃತ್' ಶಬ್ದದಿಂದ ಮೃತ್ವವೆಂಬ ಪ್ರವೃತ್ತಿನಿಮಿತ್ತವನ್ನು ಹೊಂದಿರುವ ಮಣ್ಣು ಎಂಬರ್ಥಕ್ಕಿಂತ ಅಭಿಮಾನಿದೇವತೆಯೆಂಬರ್ಥವೇ ಮುಖ್ಯಾರ್ಥವಾಗುತ್ತದೆ. ಇದನ್ನು ಉಪಪಾದನೆ ಮಾಡುವುದಕ್ಕಾಗಿ ಚೇತನ ಎಂಬ ಪದವನ್ನು ಪ್ರಯೋಗಿಸಿರುವುದಿಲ್ಲ.

### ಸೂತ್ರದಲ್ಲಿರುವ ವಿಶೇಷಪದದ ಸ್ವಾರಸ್ಯ

**तेन कथं युक्तिविरोधमात्रेण श्रुतेः प्रतीतार्थप्रच्यावनमिति निरस्तम् । चेतनग्रहणे मुख्यार्थलाभेन श्रुत्यर्थाबाधनादिति हेतोः । मुख्यत्वसूचकत्वं चान्यनिरासार्थकत्वादिति ध्येयम् । सर्वथाऽन्यनिरासायोगात् । शरीररूपक विन्यस्तगृहीतेरिति न्यायाद्वाक्यशेषे त्रिवृत्करणाद्युक्तेश्च । शक्तीति वाच्ये विशेषेत्युक्त्याऽस्मदादिभ्यो विशिष्टाऽतिशयिता सेति सूचयति ।**

ಮೇಲೆ ತಿಳಿಸಿದ ಪ್ರಮೇಯದಂತೆ ಕೇವಲ ಯುಕ್ತಿವಿರೋಧ ಬಂದ ಮಾತ್ರದಿಂದ ಶ್ರುತಿಗೆ ಪ್ರತೀತಾರ್ಥವನ್ನು ಪರಿತ್ಯಾಗ ಮಾಡುವುದು ಅಯುಕ್ತವಲ್ಲವೇ ? ಎಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಏಕೆಂದರೆ ಮೃದಾದಿಶಬ್ದಗಳಿಂದ ತದಭಿಮಾನಿಯಾದ ಚೇತರನ್ನು ನಾವು ವಿವಕ್ಷಿಸಿದ್ದೇವೆ. ಆದ್ದರಿಂದ ಮುಖ್ಯಾರ್ಥವನ್ನೇ ಮೃದಾದಿಶಬ್ದಗಳಿಗೆ ಸ್ವೀಕರಿಸದಂತಾಗುತ್ತದೆ. ಹೀಗಿರುವಾಗ ಶ್ರುತ್ಯರ್ಥವನ್ನು ಪರಿತ್ಯಾಗ ಮಾಡಿದ ದೋಷ ಬರುವುದಿಲ್ಲ.

ಮೇಲೆ ಹೇಳಿದಂತೆ 'ತು' ಶಬ್ದವು ಮುಖ್ಯತ್ವವನ್ನು ಸೂಚನೆ ಮಾಡುತ್ತಿದೆ. ಅಭಿಮಾನಿದೇವತೆಯನ್ನು ಬಿಟ್ಟು, ಬೇರೆ ಅರ್ಥವು ಮೃದಾದಿಶಬ್ದಗಳಿಂದ ಪ್ರತಿಪಾದ್ಯ-ವಾಗುವುದಿಲ್ಲವೆಂದು ನಿರಾಕರಣೆ ಮಾಡುತ್ತಿದೆ. ಆದರೆ ಮೃದಾದಿಶಬ್ದಗಳಿಂದ ಮಣ್ಣು ಮೊದಲಾದವು ಪ್ರತಿಪಾದ್ಯವಾಗುವುದಿಲ್ಲವೆಂದು ಸರ್ವಥಾ ನಿರಾಕರಣೆ ಮಾಡುತ್ತಿಲ್ಲ. 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯದಂತೆ ಹಾಗೂ ವಾಕ್ಯಶೇಷದಲ್ಲಿ ತ್ರಿವೃತ್ಕರಣಾದಿಗಳನ್ನು ಹೇಳಿರುವುದರಿಂದ ಮಣ್ಣು ಮೊದಲಾದವು ಮೃದಾದಿಶಬ್ದಗಳಿಂದ ಪ್ರತಿಪಾದ್ಯವೇ ಆಗುವುದಿಲ್ಲವೆಂದು ತಿಳಿಯಬಾರದು. ಮುಖ್ಯವಾಗಿ ಅಭಿಮಾನಿದೇವತೆಗಳು ಪ್ರತಿಪಾದ್ಯರೆಂದಷ್ಟೇ ತಿಳಿಯಬೇಕು.

ಸೂತ್ರದಲ್ಲಿ ವಿಶೇಷ ಎಂಬ ಪದದ ಬದಲು ಶಕ್ತಿಯೆಂದು ಹೇಳಬೇಕಿತ್ತು. ಆದರೆ ನಮ್ಮೆಲ್ಲರಿಗಿಂತಲೂ ಅಭಿಮಾನಿದೇವತೆಯಲ್ಲಿ ಅತಿಶಯಿತವಾದ ವೈಶಿಷ್ಟ್ಯವನ್ನು ತೋರಿಸಬೇಕಾಗಿದೆ. ಅದಕ್ಕಾಗಿ 'ವಿಶೇಷ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ವಿವರಣೆ - 'ಮೃತ್' ಎಂಬ ಪದವು ಮಣ್ಣನ್ನು ಪ್ರತಿಪಾದನೆ ಮಾಡುತ್ತದೋ, ಅಥವಾ ಅಭಿಮಾನಿದೇವತೆಯನ್ನು ಪ್ರತಿಪಾದನೆ ಮಾಡುತ್ತದೋ, ಎಂಬುದು ಇಲ್ಲಿ ಮಾಡುತ್ತಿರುವ ವಿಚಾರ. ಈ ಸೂತ್ರವು ಅಭಿಮಾನಿದೇವತೆಯನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತಾ ಇದೆ ಎಂದು ಉತ್ತರಿಸುತ್ತಿದೆ. ಅಂದಮಾತ್ರಕ್ಕೆ ಮಣ್ಣು ಮೃದಾದಿ ಶಬ್ದಗಳಿಂದ ಪ್ರತಿಪಾದ್ಯ ಆಗುವುದಿಲ್ಲವೆಂದು ತಿಳಿಯಬಾರದು. ಅಭಿಮಾನಿದೇವತೆಯ ಅಧೀನವಾದ್ದರಿಂದ ಮಣ್ಣೂ ಕೂಡ ಅಮುಖ್ಯವಾಗಿ 'ಮೃತ್' ಎಂಬ ಪದದಿಂದ ಪ್ರತಿಪಾದ್ಯವಾಗುತ್ತದೆ.

ಬ್ರಹ್ಮನ ಸಂಬಂಧವಿರುವುದರಿಂದ ವಸ್ತುಗಳೂ ಕೂಡ ಬ್ರಹ್ಮಪ್ರತಿಪಾದಕವಾದ ಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆ ಎಂಬ ನ್ಯಾಯವನ್ನು 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಅದರಂತೆ ಪ್ರಕೃತ ಮೃದಭಿಮಾನಿ ದೇವತೆಗಳಲ್ಲಿರುವ ಶಬ್ದಗಳು ಅವರ ಸಂಬಂಧವನ್ನು ಹೊಂದಿರುವ ಪದಾರ್ಥಗಳಲ್ಲೂ ಕೂಡ ಪ್ರಯುಕ್ತವಾಗುತ್ತದೆ. ಮತ್ತು 'ತಾಸಾಂ ತ್ರಿವೃತಂ ತ್ರಿವೃತಂ ಏಕೈಕಾಮಕರೋತ್' ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯಶೇಷದ ಬಲದಿಂದಲೂ ಕೂಡ ಮೃದಾದಿಶಬ್ದಗಳು ಮಣ್ಣು ಮೊದಲಾದವನ್ನು ಪ್ರತಿಪಾದನೆ ಮಾಡುತ್ತವೆಂದು ತಿಳಿಯುತ್ತದೆ. ಅದು ಹೀಗೆ - ಈ ಶ್ರುತಿಯು ತ್ರಿವೃತ್ಕರಣವನ್ನು ಹೇಳುತ್ತಿದೆ. ತ್ರಿವೃತ್ಕರಣವು ಉಪಪನ್ನವಾಗಬೇಕಾದರೆ ತೇಜಸ್ಸು, ನೀರು ಹಾಗೂ ಮಣ್ಣು ಇವುಗಳ ಮಿಶ್ರಣವನ್ನು ಶ್ರುತಿಯು ಹೇಳಬೇಕು. ಕೇವಲ ಅಭಿಮಾನಿದೇವತೆಯನ್ನಷ್ಟೇ ಹೇಳಿದರೆ ತ್ರಿವೃತ್ಕರಣವೇ ಅಸಿದ್ಧವಾಗುತ್ತದೆ. ಆದ್ದರಿಂದ ಅಭಿಮಾನಿದೇವತೆಯಲ್ಲಿ ಮೃದಾದಿಶಬ್ದಗಳು ಮುಖ್ಯವಾಗಿವೆ. ಜಡಪದಾರ್ಥಗಳಲ್ಲಿ ಅಮುಖ್ಯವಾಗಿವೆ ಎಂಬುದನ್ನು ಒಪ್ಪಬೇಕು.

ನ್ಯಾಯಸುಧೆಯ ಪ್ರಕಾರ 'ವಿಶೇಷಾನುಗತಿಭ್ಯಾಂ' ಎಂಬುದಕ್ಕೆ ವ್ಯಾಖ್ಯಾನ

**सुधायां त्वभिमानितद्विग्रहतदन्तर्धानशक्त्यादेः मृत्त्वादियुक्तिमृदादि-वक्तृत्वश्रुत्युभयान्यथानुपपत्तिरूपार्थपत्त्यैव सिद्धेर्विशेषानुगतिपदेन तत्प्रतिपादकं पृथिव्याद्यभिमानिन्य इत्यादिवचनं गृह्यते । तथा च न केवलं अभिमान्यादिसकमर्थापत्त्यैव सिद्धमागमसिद्धं चेत्युक्तम् ।।**

ನ್ಯಾಯಸುಧೆಯಲ್ಲಿ ಹೀಗೆ ಹೇಳಿದ್ದಾರೆ - 'ಮೃತ್ ನ ವಕ್ತ್ರೀ ಮೃತ್ವಾತ್' ಎಂಬ ಯುಕ್ತಿಯು ಮಣ್ಣಿನಲ್ಲಿ ವಕ್ತೃತ್ವವಿಲ್ಲವೆಂದು ಹೇಳುತ್ತಿದೆ. 'ಮೃದಬ್ರವೀತ್' ಎಂಬ ಶ್ರುತಿಯು ಮಣ್ಣಿನಲ್ಲಿ ವಕ್ತೃತ್ವವಿದೆಯೆಂದು ಹೇಳುತ್ತಿದೆ. ಅಭಿಮಾನಿದೇವತೆಯನ್ನು ಅಂಗೀಕಾರ ಮಾಡದಿದ್ದರೆ

ಇವೆರಡೂ ಕೂಡ ಪರಸ್ಪರವಿರುದ್ಧವಾಗಿ ಅಪ್ರಮಾಣವಾಗುತ್ತವೆ. ಆದ್ದರಿಂದ 'ಏತದುಭಯಾನ್ಯಥಾನುಪಪತ್ತಿ' ಎಂಬ ಪ್ರಮಾಣದಿಂದ ಅಭಿಮಾನಿದೇವತೆಯು ಹಾಗೂ ಅಭಿಮಾನಿದೇವತೆಯ ಶರೀರವು, ಅಭಿಮಾನಿದೇವತೆಯ ಅಂತರ್ಧಾನಶಕ್ತಿ ಇವುಗಳು ಸಿದ್ಧವಾಗುತ್ತವೆ. ಹೀಗೆ ಅರ್ಥಾಪತ್ತಿ ಪ್ರಮಾಣದಿಂದಲೇ ಇದೆಲ್ಲವನ್ನೂ ನ್ಯಾಯಸುಧೆಯಲ್ಲಿ ಸಮರ್ಥನೆ ಮಾಡಿದ್ದಾರೆ. ಈ ಪಕ್ಷದಲ್ಲಿ 'ವಿಶೇಷಾನುಗತಿ' ಎಂಬ ಪದದಿಂದ ಅಭಿಮಾನಿದೇವತೆಗಳಿಗಿರುವ ಶಕ್ತಿ ಹಾಗೂ ವ್ಯಾಪ್ತಿ ಇವುಗಳನ್ನು ಪ್ರತಿಪಾದನೆ ಮಾಡುವ 'ಪೃಥಿವ್ಯಾದ್ಯಭಿಮಾನಿನಃ' ಇವೇ ಮೊದಲಾದ ವಾಕ್ಯಗಳನ್ನು ವಿವಕ್ಷಿಸಬೇಕು. ಹಾಗಾಗಿ ಅಭಿಮಾನಿದೇವತೆಗಳು ಹಾಗೂ ಅವರಲ್ಲಿರುವ ಶಕ್ತಿ ಮೊದಲಾದವುಗಳು ಕೇವಲ ಅರ್ಥಾಪತ್ತಿಪ್ರಮಾಣದಿಂದಷ್ಟೇ ಸಿದ್ಧವಾಗಿರುವುದಲ್ಲ. ಆಗಮಪ್ರಮಾಣದಿಂದಲೂ ಕೂಡ ಸಿದ್ಧವಾಗಿದೆ ಎಂಬುದು ನ್ಯಾಯಸುಧೆಯ ಅಭಿಪ್ರಾಯವಾಗಿದೆ.

### ಅಭಿಮಾನಿದೇವತೆಗಳು ಕಣ್ಣಿಗೆ ಕಾಣಿಸುತ್ತಾರೆ

विशेषेत्यादेराद्येऽर्थे अदर्शनमुपेत्य पूर्वं शक्त्या समाहितम् इदानीं तदेव नेति वा नास्त्येवाभिमानी अदर्शनादित्यतो वाह -

।। दृश्यते च ।।२-१-७।।

योगिभिरुपलभ्यते च । अभिमानीति बुद्धिविभागेनानुवर्तते । एतच्च ''दृश्यन्ते मुनिभिश्च ताः'' इत्यादिनाऽवसेयमिति भावः । सूत्रयोरेकवचनं समुदायाभिप्रायम् ।।३।।

ಹಿಂದಿನ ಸೂತ್ರದಲ್ಲಿ ವಿಶೇಷ ಇತ್ಯಾದಿ ಪದಕ್ಕೆ ಎರಡು ಅರ್ಥವನ್ನು ವ್ಯಾಖ್ಯಾನ ಮಾಡಲಾಯಿತು. ಅವೆರೆಡರಲ್ಲಿ ಮೊದಲನೆಯ ಅರ್ಥದಲ್ಲಿ ಅಭಿಮಾನಿದೇವತೆಗಳು ಕಣ್ಣಿಗೆ ಕಾಣಿಸುವುದಿಲ್ಲವೆಂದು ಅಂಗೀಕಾರ ಮಾಡಿ, ಅಂತರ್ಧಾನಶಕ್ತಿಯನ್ನು ಒಪ್ಪುವ ಮೂಲಕ ಸಮಾಧಾನವನ್ನು ನೀಡಲಾಯಿತು. ಪ್ರಕೃತ ಅಭಿಮಾನಿದೇವತೆಗಳು ಕಣ್ಣಿಗೆ ಕಾಣಿಸುವುದಿಲ್ಲ ಎಂಬುದೇ ತಪ್ಪು ಎಂಬುದನ್ನು ಸಮರ್ಥನೆ ಮಾಡುವುದಕ್ಕಾಗಿ ಅಥವಾ ಅಭಿಮಾನಿದೇವತೆಯೇ

ಇಲ್ಲವೆಂದು ಪೂರ್ವಪಕ್ಷಿಯು ಆಕ್ಷೇಪ ಮಾಡಿದರೆ ಅದರ ನಿರಾಕರಣೆಗಾಗಿ ದೃಶ್ಯತೇ ಚ' ಎಂಬ ಸೂತ್ರವು ಹೊರಟಿದೆ.

ಅಭಿಮಾನಿದೇವತೆಗಳನ್ನು ಯೋಗಿಜನರು ಕಣ್ಣಿಂದ ಕಾಣುತ್ತಿದ್ದಾರೆ. ಆದ್ದರಿಂದ ಕಣ್ಣಿಗೆ ಕಾಣಿಸುವುದಿಲ್ಲ ಎಂದು ಹೇಳಿದ್ದು ತಪ್ಪು. ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ ಅಭಿಮಾನಿ ಎಂಬ ಪದವನ್ನು ಬುದ್ಧಿಯಿಂದ ವಿಭಾಗ ಮಾಡಿಕೊಂಡು ಅನುವೃತ್ತಿ ಮಾಡಿಕೊಳ್ಳಬೇಕು. ಈ ವಿಷಯವನ್ನು 'ದೃಶ್ಯಂತೇ ಮುನಿಭಿಶ್ಚ ತಾಃ' ಎಂಬ ಪ್ರಮಾಣವಾಕ್ಯದಿಂದ ಸ್ಪಷ್ಟವಾಗಿ ತಿಳಿಯಬೇಕು. ಎರಡು ಸೂತ್ರಗಳಲ್ಲಿರುವ ಏಕವಚನವು ಸಮುದಾಯಾಭಿಪ್ರಾಯವುಳ್ಳದ್ದಾಗಿದೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಭಿಮಾನ್ಯಧಿಕರಣವು ಮುಗಿಯಿತು ॥

# ಪರಿಶಿಷ್ಟ

ಆನುಮಾನಿಕಾಧಿಕರಣ - ಸತ್ತರ್ಕದೀಪಾವಳಿ

ಸಮನ್ವಯ ಮುಗಿಯಿತು ಈಗ ಮಹಾಸಮನ್ವಯ

**सत्तर्कदीपावळिः – ।। अनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।१-४-१।।**

**अधिगते सर्वाधिकारिसाधारणे समन्वये अतिमुख्याधिकारिविषये महासमन्वये दुर्गमेऽपि बुद्धिरप्रभवतीत्यधुना सोऽभिधीयते भगवत इति भावेन पादार्थमाह – श्रुतिः लिङ्गादिभिरिति ।**

[१]ಸರ್ವಾಧಿಕಾರಿ ಸಾಧಾರಣವಾದ ಸಮನ್ವಯವನ್ನು ಹಿಂದಿನ ಮೂರುಪಾದಗಳಲ್ಲಿ ಮಾಡಿದ್ದಾಯಿತು. ಅತ್ಯಂತ ಮುಖ್ಯಾಧಿಕಾರಿಗಳಿಗೆ ಸಂಬಂಧಪಟ್ಟ ಮಹಾಸಮನ್ವಯವು ಈಗ ಉಳಿದಿದೆ. ಇದನ್ನು ಸಾಮಾನ್ಯರು ತಿಳಿಯುವುದು ಕಷ್ಟ. ಸಾಮಾನ್ಯ ಜನರಿಗೆ ಮಹಾಸಮನ್ವಯದಲ್ಲಿ ಬುದ್ಧಿಯು ತಿಳಿಯುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಆದ್ದರಿಂದ ಕಠಿಣವಾದ ಕಾರಣ ಕೊನೆಯಲ್ಲಿ ಸೂತ್ರಕಾರರು ಈ ಮಹಾಸಮನ್ವಯವನ್ನು ಮಾಡಲು ಹೊರಟಿದ್ದಾರೆ. ಈ ಪಾದದ ಪ್ರಮೇಯವನ್ನು 'ಶ್ರುತಿಲಿಂಗಾದಿಭಿಃ' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಅನ್ನ ಪ್ರಾಣಾದಿ ಶಬ್ದಗಳು ವಿಷ್ಣುವಿನಲ್ಲೂ ಪ್ರಸಿದ್ಧವೆನ್ನಬಾರದು

**सत्तर्कदीपावळिः – न चान्यत्र प्रसिद्धानाम् अन्नप्राणेन्द्रादिशब्दानां समन्वयः प्रथमपाद एवोक्तः, न हि विष्णावपि प्रसिद्धाः । तथा च सति**

(೧) ಹಿಂದಿನ ಸಂಪುಟದಲ್ಲಿ ಆನುಮಾನಿಕಾಧಿಕರಣದ ಸತ್ತರ್ಕದೀಪಾವಳಿಯು ಪ್ರಮಾದದಿಂದ ಅನುವಾದ ಮಾಡುವುದು ಬಿಟ್ಟು ಹೋಗಿತ್ತು. ಅದನ್ನು ಗಮನಿಸಿ, ಈ ಸಂಪುಟಗಲ್ಲಿ ಪ್ರತ್ಯೇಕವಾಗಿ ಇದನ್ನು ಮುದ್ರಿಸಿ ಅನುವಾದ ಮಾಡಲಾಗಿದೆ.

**तृतीयपादभेदानुपपत्तिरित्यत उक्तम् । श्रुतिलिङ्गादिभिरिति ।**

ಅನ್ಯತ್ರಪ್ರಸಿದ್ಧವಾದ ಅನ್ನ, ಪ್ರಾಣ, ಇಂದ್ರ ಮೊದಲಾದ ಶಬ್ದಗಳ ಸಮನ್ವಯವನ್ನು ಪ್ರಥಮಪಾದದಲ್ಲಿ ಮಾಡಿದ್ದಾಯಿತು. ಇದು ವಿಷ್ಣುವಿನಲ್ಲೂ ಕೂಡ ಪ್ರಸಿದ್ಧವೆಂದು ತಿಳಿಯಬಾರದು. ಹಾಗಾದಲ್ಲಿ ಉಭಯತ್ರಪ್ರಸಿದ್ಧವೆನಿಸುವುದರಿಂದ ತೃತೀಯಪಾದದಲ್ಲೇ ಇದರ ಸಮನ್ವಯವು ಪ್ರಸಕ್ತವಾಗುತ್ತದೆ. ಈ ಕಾರಣದಿಂದ 'ಶ್ರುತಿಲಿಂಗಾದಿಭಿಃ' ಇತ್ಯಾದಿ ವಾಕ್ಯವು ಹೊರಟಿದೆ.

ನಾಕನೇ ಪಾದದ ಸಮನ್ವಯ ವಿಷಯ

**सत्तर्कदीपावलिः – अत्र प्राणेन्द्रादिशब्दानां बलवच्छ्रुत्यादिभिः विष्णौ समन्वय उक्तः । दुःखादिशब्दानां तु तैरप्यन्यत्रैव प्रसिद्धेः । प्रसिद्धश्चायं विशेषोऽन्नादिशब्देभ्यो दुःखादिशब्दानाम् । न चैतत्पादतया गोचरः कोऽपि वैदिकशब्दः दुर्गमत्वेऽपि शिष्यत इति वोत्तराधिकरण एकस्मिन्नेव स्वरवर्णपदात्मनापि सर्ववेदसमन्वयाभिधानात् वा सामस्त्येनेति । न चैवं सति भगवतः पुनरुक्तिसम्भवो वा शङ्कनीय इत्याह – विशेषहेतुभिरिति ।**

ಪ್ರಾಣ, ಇಂದ್ರ ಮೊದಲಾದ ಶಬ್ದಗಳು ವಿಷ್ಣುವಿನಲ್ಲೇ ಸಮನ್ವಯವಾಗುತ್ತವೆಂಬುದನ್ನು ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಸಮರ್ಥನೆ ಮಾಡಿದ್ದಾಗಿದೆ. ಆದರೆ ದುಃಖೀ ಮೊದಲಾದ ಶಬ್ದಗಳು ವಿಷ್ಣುವನ್ನು ಬಿಟ್ಟು, ಬೇರೆಡೆಯೇ ಪ್ರಸಿದ್ಧವಾಗಿವೆ. ಈ ಶಬ್ದಗಳಿಗೆ ಅನ್ನಾದಿಶಬ್ದಗಳಿಗಿಂತ ವೈಲಕ್ಷಣ್ಯವಿರುವುದೂ ಕೂಡ ಸರ್ವಾನುಭೂತವಾಗಿದೆ. ಇಂಥ ದುಃಖಾದಿ ಶಬ್ದಗಳ ಸಮನ್ವಯಕ್ಕಾಗಿ ಈ ಪಾದವು ಹೊರಟಿದೆ. ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ವೈದಿಕಶಬ್ದಗಳು ದುರ್ಗಮವಾಗಿವೆ. ಆದರೂ ಕೂಡ ಈ ಶಬ್ದಗಳ ಸಮನ್ವಯವನ್ನು ಮಾಡಲೇಬೇಕು. ಮುಂದಿನ ಅಧಿಕರಣದಲ್ಲಿ ವೇದದಲ್ಲಿರವ ಪ್ರತಿಯೊಂದು ಸ್ವರ, ವರ್ಣ, ಪದಗಳ ಸಮನ್ವಯವನ್ನು ಮಾಡುವ ಮೂಲಕ ಸರ್ವವೇದ ಸಮನ್ವಯವನ್ನು ಮಾಡಿದ್ದಾರೆ. ಆದ್ದರಿಂದ ಭಾಷ್ಯದಲ್ಲಿ 'ಸಾಮಸ್ತ್ಯೇನ' ಎಂಬ ಪದಪ್ರಯೋಗವನ್ನು ಮಾಡಿರುತ್ತಾರೆ. ಹಾಗಾದರೆ

ಒಮ್ಮೆ ಸಮನ್ವಯ ಮಾಡಿದ ಶಬ್ದಗಳನ್ನೇ ಪುನಃ ಸಮನ್ವಯ ಮಾಡುತ್ತಿರುವಿರಿ. ಆದ್ದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ವಿಶೇಷಹೇತುಭಿಃ' ಎಂಬುದರಿಂದ ಈ ಪ್ರಶ್ನೆಗೆ ಉತ್ತರವನ್ನು ನೀಡಿದ್ದಾರೆ.

'ತತ್ತು ಸಮನ್ವಯಾತ್' ಎಂಬುದರ ವಿವರಣೆ

**सत्तर्कदीपावलिः – ननु येषां वेदवचसामन्यपरत्वे ब्रह्मलक्षणमतिव्यापकं स्यात्तेषामेव समन्वयोऽभिधेयो न तु सर्वेषामिति शङ्कां परिहरत्सूत्रमुपन्यस्य तदंशोक्तं पूर्वपक्षं सविषयं सहेतुकं दर्शयति – तत्तु इति । ब्रह्मशब्दोक्तगुण-सर्वस्वसिद्धये हि तल्लक्षणमुक्तं सर्वजगज्जन्मादिकारणत्वात्सम्पूर्णं ब्रह्मेति । तदुभयं चास्य मूलम् । न ह्यानुमानिकमपि गुणसर्वस्वं शास्त्रं विना विशेषेण ज्ञातुं शक्यम् । अयमयं भगवद्गुण इति । अतस्तद्विशेषतो विज्ञापयितुं सर्वशब्द समन्वयश्चतुर्थसूत्र उक्तः ।।**

ಯಾವ ಶಬ್ದಗಳು ಅನ್ಯಪರವಾದಾಗ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷ ಬರುತ್ತದೋ, ಆ ಶಬ್ದಗಳ ಸಮನ್ವಯವನ್ನಷ್ಟೇ ಮಾಡಬೇಕು. ಅದನ್ನು ಬಿಟ್ಟು, ಎಲ್ಲಾ ಶಬ್ದಗಳ ಸಮನ್ವಯವನ್ನು ಮಾಡುವುದು ಅಯುಕ್ತವಲ್ಲವೇ?

ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ, ಸೂತ್ರದಲ್ಲಿರುವ ಪೂರ್ವಪಕ್ಷಾಂಶವನ್ನು ಹೇತುಬದ್ಧವಾಗಿ ಸಮರ್ಥನೆ ಮಾಡಲು 'ತತ್ತು' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಗುಣಪರಿಪೂರ್ಣತ್ವದ ಸಮರ್ಥನೆಗೋಸ್ಕರ ಸಕಲಜಗಜ್ಜನ್ಮಾದಿ-ಕಾರಣತ್ವವೆಂಬ ಲಕ್ಷಣವನ್ನು ಬ್ರಹ್ಮನಿಗೆ ಹೇಳಲಾಯಿತು. ಇಂಥ ಜಗಜ್ಜನ್ಮಾದಿಕಾರಣತ್ವದ ಸಮನ್ವಯಕ್ಕೋಸ್ಕರವೇ ಸಕಲ ಶಬ್ದಗಳ ಸಮನ್ವಯವು ಪ್ರವೃತ್ತವಾಗಿದೆ. ಗುಣಪರಿಪೂರ್ಣತ್ವವು ಆನುಮಾನಿಕವಾದರೂ ಕೂಡ ಶಾಸ್ತ್ರವಿಲ್ಲದೇ ವಿಶೇಷವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಿಶೇಷವಾಗಿ ಅದನ್ನು ತಿಳಿಸುವುದಕ್ಕಾಗಿಯೇ ಸರ್ವಶಬ್ದದ ಸಮನ್ವಯಕ್ಕೋಸ್ಕರ ನಾಕನೆಯ ಸೂತ್ರವು ಹೊರಟಿದೆ.

**तृतीयपादभेदानुपपत्तिरित्यत उक्तम् । श्रुतिलिङ्गादिभिरिति ।**

ಅನ್ಯತ್ರಪ್ರಸಿದ್ಧವಾದ ಅನ್ನ, ಪ್ರಾಣ, ಇಂದ್ರ ಮೊದಲಾದ ಶಬ್ದಗಳ ಸಮನ್ವಯವನ್ನು ಪ್ರಥಮಪಾದದಲ್ಲಿ ಮಾಡಿದ್ದಾಯಿತು. ಇದು ವಿಷ್ಣುವಿನಲ್ಲೂ ಕೂಡ ಪ್ರಸಿದ್ಧವೆಂದು ತಿಳಿಯಬಾರದು. ಹಾಗಾದಲ್ಲಿ ಉಭಯತ್ರಪ್ರಸಿದ್ಧವೆನಿಸುವುದರಿಂದ ತೃತೀಯಪಾದದಲ್ಲೇ ಇದರ ಸಮನ್ವಯವು ಪ್ರಸಕ್ತವಾಗುತ್ತದೆ. ಈ ಕಾರಣದಿಂದ 'ಶ್ರುತಿಲಿಂಗಾದಿಭಿಃ' ಇತ್ಯಾದಿ ವಾಕ್ಯವು ಹೊರಟಿದೆ.

### ನಾಕನೇ ಪಾದದ ಸಮನ್ವಯ ವಿಷಯ

**सत्तर्कदीपावलिः – अत्र प्राणेन्द्रादिशब्दानां बलवच्छृत्यादिभिः विष्णौ समन्वय उक्तः । दुःखादिशब्दानां तु तैरप्यन्यत्रैव प्रसिद्धेः । प्रसिद्धश्चायं विशेषोऽन्नादिशब्देभ्यो दुःखादिशब्दानाम् । न चैतत्पादतया गोचरः कोऽपि वैदिकशब्दः दुर्गमत्वेऽपि शिष्यत इति वोत्तराधिकरण एकस्मिन्नेव स्वरवर्णपदात्मनापि सर्ववेदसमन्वयाभिधानात् वा सामस्त्येनेति । न चैवं सति भगवतः पुनरुक्तिसम्भवो वा शङ्कनीय इत्याह – विशेषहेतुभिरिति ।**

ಪ್ರಾಣ, ಇಂದ್ರ ಮೊದಲಾದ ಶಬ್ದಗಳು ವಿಷ್ಣುವಿನಲ್ಲೇ ಸಮನ್ವಯವಾಗುತ್ತವೆಂಬುದನ್ನು ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಸಮರ್ಥನೆ ಮಾಡಿದ್ದಾಗಿದೆ. ಆದರೆ ದುಃಖೀ ಮೊದಲಾದ ಶಬ್ದಗಳು ವಿಷ್ಣುವನ್ನು ಬಿಟ್ಟು, ಬೇರೆಡೆಯೇ ಪ್ರಸಿದ್ಧವಾಗಿವೆ. ಈ ಶಬ್ದಗಳಿಗೆ ಅನ್ನಾದಿಶಬ್ದಗಳಿಗಿಂತ ವೈಲಕ್ಷಣ್ಯವಿರುವುದೂ ಕೂಡ ಸರ್ವಾನುಭೂತವಾಗಿದೆ. ಇಂಥ ದುಃಖಾದಿ ಶಬ್ದಗಳ ಸಮನ್ವಯಕ್ಕಾಗಿ ಈ ಪಾದವು ಹೊರಟಿದೆ. ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ವೈದಿಕಶಬ್ದಗಳು ದುರ್ಗಮವಾಗಿವೆ. ಆದರೂ ಕೂಡ ಈ ಶಬ್ದಗಳ ಸಮನ್ವಯವನ್ನು ಮಾಡಲೇಬೇಕು. ಮುಂದಿನ ಅಧಿಕರಣದಲ್ಲಿ ವೇದದಲ್ಲಿರುವ ಪ್ರತಿಯೊಂದು ಸ್ವರ, ವರ್ಣ, ಪದಗಳ ಸಮನ್ವಯವನ್ನು ಮಾಡುವ ಮೂಲಕ ಸರ್ವವೇದ ಸಮನ್ವಯವನ್ನು ಮಾಡಿದ್ದಾರೆ. ಆದ್ದರಿಂದ ಭಾಷ್ಯದಲ್ಲಿ 'ಸಾಮಸ್ತ್ಯೇನ' ಎಂಬ ಪದಪ್ರಯೋಗವನ್ನು ಮಾಡಿರುತ್ತಾರೆ. ಹಾಗಾದರೆ

ಒಮ್ಮೆ ಸಮನ್ವಯ ಮಾಡಿದ ಶಬ್ದಗಳನ್ನೇ ಪುನಃ ಸಮನ್ವಯ ಮಾಡುತ್ತಿರುವಿರಿ. ಆದ್ದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ವಿಶೇಷಹೇತುಭಿಃ' ಎಂಬುದರಿಂದ ಈ ಪ್ರಶ್ನೆಗೆ ಉತ್ತರವನ್ನು ನೀಡಿದ್ದಾರೆ.

'ತತ್ತು ಸಮನ್ವಯಾತ್' ಎಂಬುದರ ವಿವರಣೆ

**सत्तर्कदीपावलिः – ननु येषां वेदवचसामन्यपरत्वे ब्रह्मलक्षणमतिव्यापकं स्यात्तेषामेव समन्वयोऽभिधेयो न तु सर्वेषामिति शङ्कां परिहरत्सूत्रमुपन्यस्य तदंशोक्तं पूर्वपक्षं सविषयं सहेतुकं दर्शयति – तत्तु इति । ब्रह्मशब्दोक्तगुण-सर्वस्वसिद्धये हि तल्लक्षणमुक्तं सर्वजगज्जन्मादिकारणत्वात्सम्पूर्णं ब्रह्मेति । तदुभयं चास्य मूलम् । न ह्यानुमानिकमपि गुणसर्वस्वं शास्त्रं विना विशेषेण ज्ञातुं शक्यम् । अयमयं भगवद्गुण इति । अतस्तद्विशेषतो विज्ञापयितुं सर्वशब्द समन्वयश्चतुर्थसूत्र उक्तः ।।**

ಯಾವ ಶಬ್ದಗಳು ಅನ್ಯಪರವಾದಾಗ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷ ಬರುತ್ತದೋ, ಆ ಶಬ್ದಗಳ ಸಮನ್ವಯವನ್ನಷ್ಟೇ ಮಾಡಬೇಕು. ಅದನ್ನು ಬಿಟ್ಟು, ಎಲ್ಲಾ ಶಬ್ದಗಳ ಸಮನ್ವಯವನ್ನು ಮಾಡುವುದು ಅಯುಕ್ತವಲ್ಲವೇ?

ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ, ಸೂತ್ರದಲ್ಲಿರುವ ಪೂರ್ವಪಕ್ಷಾಂಶವನ್ನು ಹೇತುಬದ್ಧವಾಗಿ ಸಮರ್ಥನೆ ಮಾಡಲು 'ತತ್ತು' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಗುಣಪರಿಪೂರ್ಣತ್ವದ ಸಮರ್ಥನೆಗೋಸ್ಕರ ಸಕಲಜಗಜ್ಜನ್ಮಾದಿ-ಕಾರಣತ್ವವೆಂಬ ಲಕ್ಷಣವನ್ನು ಬ್ರಹ್ಮನಿಗೆ ಹೇಳಲಾಯಿತು. ಇಂಥ ಜಗಜ್ಜನ್ಮಾದಿಕಾರಣತ್ವದ ಸಮನ್ವಯಕ್ಕೋಸ್ಕರವೇ ಸಕಲ ಶಬ್ದಗಳ ಸಮನ್ವಯವು ಪ್ರವೃತ್ತವಾಗಿದೆ. ಗುಣಪರಿಪೂರ್ಣತ್ವವು ಆನುಮಾನಿಕವಾದರೂ ಕೂಡ ಶಾಸ್ತ್ರವಿಲ್ಲದೇ ವಿಶೇಷವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಿಶೇಷವಾಗಿ ಅದನ್ನು ತಿಳಿಸುವುದಕ್ಕಾಗಿಯೇ ಸರ್ವಶಬ್ದದ ಸಮನ್ವಯಕ್ಕೋಸ್ಕರ ನಾಕನೆಯ ಸೂತ್ರವು ಹೊರಟಿದೆ.

ಜೀವೇಶ್ವರರಿಗೆ ಐಕ್ಯ ಒಪ್ಪಬೇಕೆಂಬುದು ಅಧಿಕರಣದ ಪೂರ್ವಪಕ್ಷ

**सत्तर्कदीपावलिः – तन्न युज्यते इति ।। यस्मात्साङ्ख्यानुमानकल्पितमचित्प्रधानमप्यादिकार्यात् महतः परं विविधकार्याश्रयत्वेन व्याप्तमपि तत्तद्दोषानोक्तमिति सूक्ष्मं चेत्यादि महागुणमुच्यते । नायमव्यक्तशब्दार्थो भगवान् अव्यक्तात्पुरुषः पर इत्यस्य पुरुषादवरत्वावगमात् । पुरुषश्च अव्यक्तात् परतोऽत्र जीवो भवितुमर्हति तस्य योनिमन्ये प्रपद्यन्त इत्यादि दुःखसम्बन्धावगमात् । न च भगवान् दुःखी बद्धो अवरो वा सर्वप्रमाणविरोधात्। अतोऽत्र गुह्यं ब्रह्मेत्यादिवाक्या-पर्यालोचना अर्थाज्जीव-परयोरैक्यमागच्छतीत्यनया दिशा पूर्वपक्षकरणन्यायेन पूर्वपक्ष इति भावः ।**

'ತನ್ನ ಯುಜ್ಯತೇ' ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದಾರೆ. ಯಾವ ಕಾರಣದಿಂದ ಸಾಂಖ್ಯರ ಅನುಮಾನದಿಂದ ಕಲ್ಪಿತವಾದ ಜಡಭೂತವಾದ ಪ್ರಕೃತಿಯು ಅವ್ಯಕ್ತಾದಿ ಶಬ್ದದಿಂದ ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. 'ಮಹತಃ ಪರಂ ಧ್ರುವಮ್' ಎಂಬ ಶ್ರುತಿಯಿಂದಲೂ ಕೂಡ ಈ ಜಡಪ್ರಕೃತಿಯೇ ಪ್ರತಿಪಾದ್ಯವಾಗಿದೆ. ವಿವಿಧ ಕಾರ್ಯಗಳಿಗೆ ಆಶ್ರಯವಾಗಿದೆ. ಮತ್ತು ವ್ಯಾಪ್ತವಾಗಿದೆ. ಈ ಶ್ರುತಿಯಲ್ಲಿರುವ ಅವ್ಯಕ್ತಶಬ್ದದಿಂದ ಮಹಾವಿಷ್ಣುವು ಪ್ರತಿಪಾದ್ಯನಾಗಲಾರ. ಏಕೆಂದರೆ ಪುರುಷನೆನಿಸಿದ ಮಹಾವಿಷ್ಣುವಿನಿಗಿಂತ ಅವರತ್ವವನ್ನು ಈ ಶ್ರುತಿ ಹೇಳುತ್ತಿದೆ. ಈ ಅವರತ್ವವು ವಿಷ್ಣುವಿನಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ.

ಪುರುಷಶಬ್ದದಿಂದ ಪ್ರತಿಪಾದ್ಯನಾದವನೂ ಕೂಡ ಜೀವನೇ ಆಗುತ್ತಾನೆ. ಏಕೆಂದರೆ 'ಯೋನಿಮನ್ಯೇ ಪ್ರಪದ್ಯಂತೇ' ಎಂಬುದಾಗಿ ಆ ಪುರುಷನಿಗೆ ದುಃಖಸಂಬಂಧವನ್ನು ಶ್ರುತಿಯು ಹೇಳುತ್ತಿದೆ. ಪರಮಾತ್ಮನು ದುಃಖದ ಸಂಬಂಧವುಳ್ಳವನಾಗಲು ಸಾಧ್ಯವಿಲ್ಲ. ಅದರಂತೆ ಬದ್ಧನೂ, ಅವರನೂ ಕೂಡ ಆಗಲು ಸಾಧ್ಯವಿಲ್ಲ. ಹಾಗಾದಲ್ಲಿ ಸರ್ವಪ್ರಮಾಣಗಳ ವಿರೋಧವು ಬರುತ್ತದೆ. ಆದ್ದರಿಂದ 'ಗುಹ್ಯಂ ಬ್ರಹ್ಮ' ಇತ್ಯಾದಿ ವಾಕ್ಯಗಳನ್ನು ಪರ್ಯಾಲೋಚನೆ ಮಾಡಿದಾಗ ಜೀವಪರಮಾತ್ಮರಿಗೆ ಐಕ್ಯವನ್ನೇ ಒಪ್ಪುವುದು ಸೂಕ್ತವಾಗುತ್ತವೆ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

### ಜೀವಾದಿಗಳಿಗೆ ಪರಮಾತ್ಮನೇ ನಿಯಾಮಕನೆಂದು ಸಿದ್ಧಾಂತ

**सत्तर्कदीपावळिः** – सिद्धान्तांशं व्याचष्टे – नेत्यादिना । जीवे हिंसाहेतुत्वात् तत्प्रेर्यमाणत्वाच्छरीररूपकमव्यक्तम् । तस्यैव भगवत एव । जीवस्य तच्छरीरत्वावगमात् । य आत्मा शरीरं यस्य तेजः शरीरमित्यादौ शरीरतद्वतोश्च एकनियम्यत्वदर्शनात् । तद्वतस्य हरेरेव अव्यक्तनाम्ना उक्तेर्न उक्तदोष इत्यर्थः। शरीरस्य रूपमिव रूपमस्येति शरीररूपम् । जडाव्यक्तं तु शरीररूपमपि सम्यक् न भवति तुच्छशब्दादित्येतदर्थः कप्रत्यय इत्याह – कप्रत्यय इति ।

ಸೂತ್ರದ ಸಿದ್ಧಾಂತ ಭಾಗವನ್ನು ವ್ಯಾಖ್ಯಾನ ಮಾಡಲು 'ನ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಜೀವನಲ್ಲಿರುವ ಹಿಂಸಾದಿಗಳಿಗೆ ಕಾರಣನಾದವನು ಪರಮಾತ್ಮನೇ ಆಗಿದ್ದಾನೆ. ಮತ್ತು ಜೀವರನ್ನು ಪ್ರೇರಣೆ ಮಾಡುವವನೂ ಕೂಡ ಪರಮಾತ್ಮನೇ ಆಗಿದ್ದಾನೆ. ಇಂಥ ಪರಮಾತ್ಮನಿಗೆ ಜೀವನು ಶರೀರದಂತೆ ಇದ್ದಾನೆ. 'ತಸ್ಯೈವ' ಎಂದರೆ 'ಭಗವಂತನಿಗೆ' ಎಂದರ್ಥ. 'ಯ ಆತ್ಮಾ ಶರೀರಂ ಯಸ್ಯ ತೇಜಃ ಶರೀರಮ್' ಇತ್ಯಾದಿ ವಾಕ್ಯಗಳನ್ನು ಪರ್ಯಾಲೋಚನೆ ಮಾಡಿದಾಗ ಶರೀರ ಹಾಗೂ ಶರೀರವುಳ್ಳವನಿಗೆ ಒಬ್ಬನೇ ನಿಯಾಮಕನೆಂದು ತಿಳಿಯುತ್ತಿದೆ. ಅಂಥ ಶ್ರೀಹರಿಯೇ ಅವ್ಯಕ್ತ ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಿದ ಯಾವುದೇ ದೋಷಗಳಿಗೆ ಅವಕಾಶವಿಲ್ಲ. 'ಶರೀರರೂಪ' ಎಂಬ ಪದಕ್ಕೆ ಶರೀರದಂತೆ ಇರುವವನು ಎಂದರ್ಥ. ಹೊರತು, ಜೀವನೇ ಪರಮಾತ್ಮನ ಶರೀರವೆಂದು ತಿಳಿಯಬಾರದು. ಜಡಭೂತವಾದ ಪ್ರಕೃತಿಯು ಶರೀರದಂತೆಯೂ ಕೂಡ ಆಗಲು ಸಾಧ್ಯವಿಲ್ಲ ಎಂಬುದನ್ನು 'ಕ'ಪ್ರತ್ಯಯದಿಂದ ಸೂತ್ರಕಾರರು ತಿಳಿಸಿದ್ದಾರೆ.

### ಪರಮಾತ್ಮನೇ ಅವ್ಯಕ್ತಾದಿಗಳಲ್ಲಿ ನೆಲಸಿದ್ದಾನೆ

**सत्तर्कदीपावळिः** – ननु मञ्चस्थे मञ्चशब्दवदव्यक्तगहरावव्यक्त-शब्दश्चौपचारिकः तत्र स्यादित्यत आह – परमात्मन एवेति । तुच्छतमेतत् जडाव्यक्तिं विन्यस्तं चात्र परमात्मेत्येतदर्थत्वेन सूत्रोपात्तश्रुतिं दर्शयति –

**तुच्छेनेति । तुच्छं न भवति गुणतो तमः शब्दोक्तम् आसमन्तात् सर्वैर्गुणैः भूमात्मकम् । आनीदवातमित्युक्तं ब्रह्म । एवमव्यक्तविन्यस्तस्य परमात्मन एवाव्यक्तशब्दः सांख्यश्चेत् तत्र तस्य प्रयोगो योगश्चापेक्षितः । तत्र तावत्प्रयोगश्च शब्दसूचितश्रुतीतिहासयोरस्तीत्याह – अव्यक्तमित्यादिना ।**

ಮಂಚನಲ್ಲಿರುವ ಪುರುಷನಲ್ಲಿ ಹೇಗೆ ಮಂಚ ಶಬ್ದವನ್ನು ಪ್ರಯೋಗ ಮಾಡಲಾಗುತ್ತದೋ, ಅದರಂತೆ ಅವ್ಯಕ್ತಾದಿಗಳಲ್ಲಿ ನೆಲಸಿರುವ ಪರಮಾತ್ಮನಲ್ಲಿ ಅವ್ಯಕ್ತಾದಿ ಶಬ್ದಗಳು ಗೌಣವಾಗಿವೆ ಎಂದು ಏಕೆ ಹೇಳಬಾರದು? ಈ ಪ್ರಶ್ನೆಗೆ 'ಪರಮಾತ್ಮನ ಏವ' ಎಂಬುದರಿಂದ ಉತ್ತರಿಸಿದ್ದಾರೆ.

ಪರಮಾತ್ಮನು ಅಂತರ್ಯಾಮಿಯಾಗಿರುವುದರಿಂದ ಅವ್ಯಕ್ತಾದಿ ಶಬ್ದಗಳು ಪರಮಾತ್ಮನದ್ದೇ ಹೆಸರಾಗಿದೆ ಎಂಬುದನ್ನು 'ತುಚ್ಛೇ ನ ಭವತಿ' ಎಂಬ ಶ್ರುತಿಯು ಹೇಳುತ್ತಿದೆ. ಸೂತ್ರದಲ್ಲಿ ಉಲ್ಲೇಖ ಮಾಡಿದ ಈ ಶ್ರುತಿಯನ್ನು ಭಾಷ್ಯದಲ್ಲಿ 'ತುಚ್ಛೇನ' ಇತ್ಯಾದಿಯಾಗಿ ಉಲ್ಲೇಖ ಮಾಡಿದ್ದಾರೆ. ಪರಮಾತ್ಮನಿಗಿಂತ ಗುಣದಲ್ಲಿ ಅತ್ಯಲ್ಪವಾದ ಪ್ರಕೃತ್ಯಾದಿಗಳು 'ತುಚ್ಛ' ಎನಿಸುತ್ತವೆ. ಪರಮಾತ್ಮನು ಸಕಲಗುಣಪರಿಪೂರ್ಣನಾಗಿರುವುದರಿಂದ ಭೂಮಾ ಎನಿಸುತ್ತಾನೆ.

ಹೀಗೆ ಅವ್ಯಕ್ತಾದಿಗಳಲ್ಲಿ ನೆಲಸಿರುವ ಪರಮಾತ್ಮನೇ ಅವ್ಯಕ್ತಶಬ್ದದಿಂದ ತಿಳಿಯಲು ಯೋಗ್ಯನಾಗಿದ್ದಾನೆ. ಅವನಲ್ಲೇ ಈ ಶಬ್ದಪ್ರಯೋಗವು, ಹಾಗೂ ಶಬ್ದಪ್ರಯೋಗದ ಯೌಗಿಕಾರ್ಥವು ಯುಕ್ತವಾಗುತ್ತದೆ. ಈ ವಿಷಯವು ಶ್ರುತಿ ಇತಿಹಾಸಗಳಿಂದ ಸಿದ್ಧವಾಗಿದೆ ಎಂಬುದನ್ನು 'ಅವ್ಯಕ್ತಮಚಲಮ್' ಇತ್ಯಾದಿ ಪ್ರಮಾಣದಿಂದ ಸಮರ್ಥನೆ ಮಾಡಿದ್ದಾರೆ.

### ಅವ್ಯಕ್ತಶಬ್ದದ ಯೋಗಾರ್ಥ

**सत्तर्कदीपावळिः – ।। सूक्ष्मं तु तदर्हत्वात् ।। १-४-२ ।।**

**योगोऽप्यस्ति न व्यज्यत इत्यव्यक्तमिति । तद्योगं तु सूक्ष्ममेव । तच्च परं ब्रह्मैव विष्ण्वाख्यमित्येवं सप्रमाणकं प्रतिपादयत्सूत्रमुपन्यस्य व्याचष्टे। सूक्ष्मं त्वित्यादिना । प्रधानस्यापि सूक्ष्मत्वात् तत्राप्ययं योगः किं न स्यादित्यत आह – मुख्ये चेदिति ।**

ಅವ್ಯಕ್ತಶಬ್ದಕ್ಕೆ ಯೋಗಾರ್ಥವನ್ನೂ ಕೂಡ ವಿವಕ್ಷಿಸಬೇಕು. 'ನ ವ್ಯಜ್ಯತೇ ಇತಿ ಅವ್ಯಕ್ತಮ್' ಎಂಬುದು ಇದರ ನಿಷ್ಪತ್ತಿ. ಪರಮಾತ್ಮನು ಅತ್ಯಂತ ಸೂಕ್ಷ್ಮನಾಗಿರುವುದರಿಂದ ಇವನೇ ಯೋಗಿಕಾರ್ಥನಾಗಿದ್ದಾನೆ. ಇದನ್ನು ಪ್ರಮಾಣಪುರಸ್ಸರವಾಗಿ ಪ್ರತಿಪಾದನೆ ಮಾಡಲು ಸೂತ್ರವನ್ನು ಉಲ್ಲೇಖ ಮಾಡಿ ವ್ಯಾಖ್ಯಾನ ಮಾಡಲು 'ಸೂಕ್ಷ್ಮಂ ತು' ಇತ್ಯಾದಿ ಭಾಷ್ಯ ವಾಕ್ಯವು ಹೊರಟಿದೆ. ಪ್ರಧಾನವೂ ಕೂಡ ಸೂಕ್ಷ್ಮವಾಗಿರುವುದರಿಂದ ಅವ್ಯಕ್ತಶಬ್ದದ ಯೋಗಾರ್ಥವನ್ನು ಪ್ರಧಾನದಲ್ಲೇಕೆ ಹೇಳಬಾರದು ? ಈ ಪ್ರಶ್ನೆಗೆ ಉತ್ತರಿಸಲು 'ಮುಖ್ಯೇಚೇತ್' ಎಂಬ ವಾಕ್ಯವು ಹೊರಟಿದೆ.

'ತದಧೀನತ್ವ' ಸೂತ್ರಕ್ಕೆ ಪೀಠಿಕೆ

**सत्तर्कदीपावळिः – ।। तदधीनत्वादर्थवत् ।। १-४-३ ।।**

**यदीशवदतिसूक्ष्मत्वाभावादानुमानिकस्याव्यक्तत्वम् अव्यक्तशब्दप्रवृत्तिनिमित्त भूतार्थरहितमनतिमुख्यं तर्ह्यवरदुःखिबद्धादिशब्दप्रवृत्तिनिमित्तजाड्यदुःखबद्धाद्यर्थरहितमवरत्वदुःखिबद्धत्वादिकर्मोपचारिकमेव स्यात् भगवतः । अतोऽत्र प्रधानजीवावेवाव्यक्तपुरुषशब्दोक्ताविति शङ्कापरिहारत्वेनोत्तरसूत्रमवतार्य व्याचष्टे – तदधीनत्वादित्यादिना ।**

ಪರಮಾತ್ಮನಂತೆ ಅವ್ಯಕ್ತವು ಅತಿಸೂಕ್ಷ್ಮವಾಗಿರುವುದಿಲ್ಲ. ಆದ್ದರಿಂದ ಅನುಮಾನದಿಂದ ಸಿದ್ಧವಾಗುವ ಪ್ರಕೃತಿಯು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸೂಕ್ಷ್ಮತ್ವವನ್ನು ಹೊಂದಿರುವುದಿಲ್ಲ. ಆದ್ದರಿಂದ ಅದರಲ್ಲಿ ಅವ್ಯಕ್ತಶಬ್ದವು ಮುಖ್ಯವಾಗಿ ಇರುವುದಿಲ್ಲ ಎಂದು ಹೇಳಿದಿರಿ. ಹಾಗಾದರೆ ಅವರ, ದುಃಖೀ, ಬದ್ಧ ಇವೇ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಜಾಡ್ಯ, ದುಃಖ, ಬದ್ಧ ಇವುಗಳಿಂದ ರಹಿತವಾದ ಅವರತ್ವ, ದುಃಖೀ, ಬದ್ಧತ್ವಾದಿ ಕರ್ಮಗಳು ಔಪಚಾರಿಕವಾಗಿಯೇ ಪರಮಾತ್ಮನಲ್ಲಿ ಬರಬೇಕಾಗುತ್ತದೆ. ಆದ್ದರಿಂದ ಪ್ರಧಾನ ಹಾಗೂ ಜೀವರೇ ಅವ್ಯಕ್ತ, ಪುರುಷಾದಿ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆ ಎಂದು ಹೇಳಬೇಕು. ಈ ಆಶಂಕೆಯ ಪರಿಹಾರಕ್ಕೋಸ್ಕರ ಮುಂದಿನ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ತದಧೀನತ್ವಾತ್' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

### ಅವ್ಯಕ್ತತ್ವಾದಿಗಳು ಪರಮಾತ್ಮನಲ್ಲಿ

**सत्तर्कदीपावळिः – न केवलं प्रकृतिजीवयोः अव्यक्तत्वपरत्व-पुरुषत्वादीनामीशापेक्षया अत्यल्पसूक्ष्मत्वादतिसूक्ष्मस्य सर्वोतमस्यातिपूरुष-षड्गुणस्येव अव्यक्तत्वादिकमव्यक्तशब्दादि प्रवृत्तिनिमित्तार्थवत् । किन्तु तद्गताव्यक्तत्वपरत्वपुरुषत्वादीनामपि ईशाधीनत्वाच ।**

ಕೇವಲ ಪ್ರಕೃತಿ ಹಾಗೂ ಜೀವರಲ್ಲಿ ಅವ್ಯಕ್ತತ್ವ, ಪರತ್ವ, ಪುರುಷತ್ವಾದಿಗಳು ಈಶ್ವರನ ಅಪೇಕ್ಷೆಯಿಂದ ಅತಿಸೂಕ್ಷ್ಮವಾಗಿವೆ. ಅಂದರೆ ಅತ್ಯಲ್ಪಸೂಕ್ಷ್ಮನಾದವನು ಈಶ್ವರ. ಅವನಷ್ಟು ಸೂಕ್ಷ್ಮ ಇವುಗಳು ಆಗಿರುವುದಿಲ್ಲ. ಸರ್ವೋತ್ತಮನಾದವನು ಯಾರಲ್ಲೂ ಇಲ್ಲದ ಷಡ್ಗುಣಗಳುಳ್ಳವನಾಗಿದ್ದಾನೆ. ಅವ್ಯಕ್ತತ್ವಾದಿಗಳು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವುಳ್ಳವುಗಳಾಗಿವೆ ಎಂಬುದಷ್ಟೇ ನಮ್ಮ ಅಭಿಪ್ರಾಯವಲ್ಲ. ಇವುಗಳಲ್ಲಿರುವ ಅವ್ಯಕ್ತತ್ವ, ಪರತ್ವ, ಪುರುಷತ್ವಾದಿಗಳೂ ಕೂಡ ಈಶ್ವರನ ಅಧೀನವೇ ಆಗಿವೆ.

### ಎಲ್ಲಾ ಶಬ್ದಗಳು ಈಶ್ವರನಲ್ಲೇ ಮುಖ್ಯ

**सत्तर्कदीपावळिः – ईश्वरस्य तु निरनिष्टो निरवद्य इत्यादिश्रुत्या दोषासंस्पर्शनियमात् । अवरत्वदुःखित्वबद्धत्वादीनाम् अन्यगतानामेव ईशाधीनत्वात् । तस्यैवावरत्वादिकमर्थवत् प्रकृत्यादिगतादित्येषा दिक् । अतोऽसावेवातिमुख्यतो अव्यक्तपुरुषपरावरदुःखिशब्दार्थः ।**

ಈಶ್ವರನು 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಯ ಆಧಾರದಿಂದ ದೋಷಸಂಸ್ಪರ್ಶಕ್ಕೆ ವಿಷಯವಾಗುವುದಿಲ್ಲ ಎಂಬ ನಿಯಮವುಳ್ಳವನಾಗಿದ್ದಾನೆ. ಅವರತ್ವ, ದುಃಖಿತ್ವ, ಬದ್ಧತ್ವಾದಿಗಳು ಈಶಾಧೀನವಾಗಿ ಅನ್ಯಗತವಾಗಿವೆ. ಬೇರೆಡೆ ಇರುವ ಅವರತ್ವಾದಿಗಳಿಗೆ ಇವನು ಸ್ವತಂತ್ರ-ನಾಗಿರುವುದರಿಂದ ಅವರಾದಿ ಶಬ್ದಗಳಿಂದ ಇವನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಪ್ರಕೃತ್ಯಾದಿಗಳಲ್ಲಿರುವ ಅವರಶಬ್ದದ ಪ್ರಯೋಗಕ್ಕಿಂತ ಇವನಲ್ಲಿರುವ ಪ್ರಯೋಗವೇ ಮುಖ್ಯವಾಗಿದೆ. ಆದ್ದರಿಂದ ಅವ್ಯಕ್ತ, ಪುರುಷ, ಪರ, ಅವರ, ದುಃಖೀ ಇವುಗಳೆಲ್ಲಾ ಶಬ್ದಗಳು ಅತ್ಯಂತ ಮುಖ್ಯವಾಗಿ ಇವನಲ್ಲೇ ಮುಖ್ಯವಾಗುತ್ತವೆ.

### ಎಲ್ಲೆಡೆಯೂ ಸ್ವಾಮಿಗೆ ಪ್ರಾಧಾನ್ಯ

**सत्तर्कदीपावलिः – कथमन्यथा राज्ञि जयशब्दप्रयोगो अतिबहुभिः । यद्भृत्यविषयं तदाह – यदधीन इति । यथा परात्मा जीव इत्युच्यते । अनेन जीवेनेत्यादावित्यर्थः ।**

ಹೀಗೊಪ್ಪದಿದ್ದರೆ ರಾಜನಲ್ಲಿ ಜಯಶಬ್ದದ ಪ್ರಯೋಗವನ್ನೇ ಲೋಕದಲ್ಲಿ ಅತ್ಯಂತ ಬಹಳವಾಗಿ ಮಾಡಲಾಗುತ್ತಿದೆ. ಇದು ಹೇಗೆ ತಾನೇ ಯುಕ್ತವಾಗಲು ಸಾಧ್ಯ? ಭೃತ್ಯನು ಗೆದ್ದರೆ ರಾಜನು ಗೆದ್ದನು ಎಂಬ ಪ್ರಯೋಗವು ಲೋಕದಲ್ಲಿದೆ. ಆದ್ದರಿಂದ ಯಾವ ಗುಣವು ಯಾರ ಅಧೀನವೋ ಆ ಸ್ವತಂತ್ರನಾದ ವ್ಯಕ್ತಿಯನ್ನೇ ಆ ಗುಣವುಳ್ಳವನೆಂದು ಕರೆಯಲಾಗಿದೆ. ಇದನ್ನೇ 'ಯದಧೀನ' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡಿದ್ದಾರೆ. ಪ್ರಕೃತ ಜೀವನು ಶ್ರೀಹರಿಯ ಅಧೀನನಾಗಿರುವುದರಿಂದ ಪರಮಾತ್ಮನನ್ನು ಜೀವ ಎಂದು ಅನೇನ ಜೀವ ಎಂಬ ಶ್ರುತಿಯಿಂದ ಕರೆಯಲಾಗುತ್ತದೆ ಎಂದರ್ಥ.

### ಪುರುಷಾರ್ಥ ಬೇಕೆಂದರೆ ಮೊದಲು ಅದನ್ನು ತಿಳಿಯಬೇಕು

**सत्तर्कदीपावलिः – ।। ज्ञेयत्वावचनाच ।। १-४-४ ।।**

**यो यं पुरुषार्थमिच्छति तस्य तदवाप्तये तदेवावश्यं विज्ञेयमित्युच्यते एतदेवाक्षरं ब्रह्मेत्यादौ । तदेवात्रोपनिषदि यथावद्वक्तव्यम् । जीवप्रधानादेस्तद्वचनात् । रूढमाह – ज्ञेयत्वेति ।**

ಯಾರು ಯಾವ ಪುರುಷಾರ್ಥವನ್ನು ಹೊಂದಲು ಇಚ್ಛೆ ಪಡುತ್ತಾನೋ, ಅವನು ಅದನ್ನು ಪಡೆಯಲು ಆ ಪುರುಷಾರ್ಥವನ್ನೇ ತಿಳಿಯಬೇಕು. ಆ ಪುರುಷಾರ್ಥನೇ ಅಕ್ಷರಬ್ರಹ್ಮನಾಗಿದ್ದಾನೆ. ಅದರ ಬಗ್ಗೆಯೇ ಉಪನಿಷತ್ತು ವರ್ಣನೆ ಮಾಡುತ್ತಿದೆ. ಜೀವ, ಪ್ರಧಾನ ಈ ಎಲ್ಲಾ ಶಬ್ದಗಳಿಂದಲೂ ಅವನೇ ಪ್ರತಿಪಾದ್ಯನಾಗಿದ್ದಾನೆ. ರೂಢಿಯನ್ನು ಸಮರ್ಥನೆ ಮಾಡಲು 'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರವು ಹೊರಟಿದೆ.

ಸೂತ್ರದ ಪೂರ್ವಪಕ್ಷಾಂಶ ವ್ಯಾಖ್ಯಾನ

**सत्तर्कदीपावळिः – ।। वदतीति चेन्न प्राज्ञो हि ।। १-४-५ ।।**

**ननु महतः सुतरां परं जीवं परमात्रं प्रधानं च उभयं च द्वयं निचाय्य मुच्यत इति ज्ञेयत्वोक्तेः । तयोरेवात्र वाच्यतया तदुभयविवेकज्ञानं मुक्तिसाधनमिति भावेन सूत्रपूर्वपक्षांशं व्याचष्टे । वदतीत्यादिना ।**

ಮಹತ್ತತ್ವ ಹಾಗೂ ಜೀವ ಇವರಿಬ್ಬರನ್ನು ತಿಳಿದು ಮೋಕ್ಷವನ್ನು ಪಡೆಯುತ್ತಾನೆ ಎಂಬುದಾಗಿ 'ಮಹತಃ ಪರಂ ಧ್ರುವಂ' ಎಂಬ ಶ್ರುತಿ ಹೇಳುತ್ತಿದೆ. ಈ ಶ್ರುತಿಯಲ್ಲಿ ಪ್ರಧಾನ ಹಾಗೂ ಜೀವರೇ ಪ್ರತಿಪಾದ್ಯರಾಗಿರುವುದರಿಂದ ಇವರ ವಿವೇಕಜ್ಞಾನವೇ ಮುಕ್ತಿಸಾಧನವಾಗಿದೆ ಎಂಬುದು ಪೂರ್ವಪಕ್ಷ. ಸೂತ್ರದ ಪೂರ್ವಪಕ್ಷಾಂಶವನ್ನು ಮೊದಲು ಭಾಷ್ಯದಲ್ಲಿ 'ವದತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

ಸೂತ್ರದ ಸಿದ್ಧಾಂತಾಂಶ ವ್ಯಾಖ್ಯಾನ

**सत्तर्कदीपावळिः – महतः परं ध्रुवमित्यत्र परमात्मैवोच्यते परशब्देन । महतो महीयानात्मेत्यात्मनो महतो महत्वप्रसिद्धेः । न चायमात्मा जीवः तस्याणोर्महतो महत्वायोगादिति भावेन सिद्धान्तांशं व्याचष्टे । नन्वस्तु महतो महत्वं परमात्मनः प्रधानस्यापि तत्त्वान्तरपरत्वं तु ततोऽपि । अतो महतः परं प्रधानमेवेत्यत आह – सर्वस्मादिति ।**

'ಮಹತಃ ಪರಂ ಧ್ರುವಂ' ಎಂಬಲ್ಲಿ ಪ್ರಕೃತಿ ಹಾಗೂ ಜೀವರು ಪ್ರತಿಪಾದ್ಯರೇ ಅಲ್ಲ. ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಪರ'ಶಬ್ದವು ಶ್ರುತವಾಗಿದೆ. 'ಮಹತೋ ಮಹೀಯಾನ್' ಎಂಬ ಶ್ರುತಿಯಲ್ಲಿ ಪರಮಾತ್ಮನು ಮಹತ್ತತ್ವಕ್ಕಿಂತಲೂ ಶ್ರೇಷ್ಠನಾಗಿದ್ದಾನೆಂದು ಹೇಳಲಾಗಿದೆ. ಇಂಥವನು ಜೀವನಾಗಲು ಸಾಧ್ಯವಿಲ್ಲ. ಏಕೆಂದರೆ ಅಣುವಾದ ಜೀವನು ಮಹತೋ ಮಹೀಯನಾಗಲು ಸಾಧ್ಯವೆ ಇಲ್ಲ. ಈ ಅಭಿಪ್ರಾಯದಿಂದ ಸೂತ್ರದ ಸಿದ್ಧಾಂತ ಭಾಗವನ್ನು ಪ್ರಾಜ್ಞ ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಮಹತೋ ಮಹೀಯತ್ವವು

ಪರಮಾತ್ಮನಲ್ಲಿ ಇರಲಿ. ಪ್ರಧಾನಕ್ಕೂ ಕೂಡ ಬೇರೆ ತತ್ವಗಳಿಗಿಂತ ಪರತ್ವವು ಬರುತ್ತದೆ. ಆದ್ದರಿಂದ ಪ್ರಧಾನವನ್ನೇಕೆ ವಿವಕ್ಷಿಸಬಾರದು ? ಎಂಬ ಪ್ರಶ್ನೆಗೆ 'ಸರ್ವಸ್ಮಾತ್' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಎಲ್ಲದಕ್ಕಿಂತಲೂ ಉತ್ತಮನಾದವನಿಗೆ ಮಹತತ್ತ್ವಕ್ಕಿಂತ ಉತ್ತಮತ್ವವು ಯುಕ್ತವಾಗುತ್ತದೆ.

'ಸೋಽಧ್ವನೋ ಪಾರಮಾಪ್ನೋತಿ' ಎಂಬ ಶ್ರುತ್ಯರ್ಥ

**सत्तर्कदीपावळिः – ।। प्रकरणात् ।। १-४-६ ।।**

**ननु पकृतिपुरुषयोरुभयोरपि महतः परत्वे महतः परं ध्रुवमित्यत्र पुरुषस्यैव ग्रहणे को हेतुरित्यत आह – प्रकरणादिति । पृथिव्यादिप्रकृत्यन्तनिकाये स्वकीयेऽस्यामुपनिषद्युक्तवक्ष्यमाणप्रकारेण रथाख्ये पुरुषाख्ये वा श्रीविष्णोः परमस्थाने तिष्ठत्ययं जीवराशिरतः सकलमिदम् अहं त्वं च तदायत्तमिति यो विजानाति संसाराध्वनः पारमाप्नोति तत्परं विष्णोः परमं स्थानं क्षीराब्ध्यादौ मुक्तप्राप्यमिति मोक्षदविष्णुप्रकरणत्वात् । महतः परं ध्रुवं निचाय्येति स एव ज्ञेयत्वेनोच्यत इत्यर्थः ।छ**

ಪ್ರಕೃತಿ ಹಾಗೂ ಪುರುಷ ಇವರಿಬ್ಬರೂ ಮಹತತ್ತ್ವಕ್ಕಿಂತ ಶ್ರೇಷ್ಠರಾಗುವುದಾದರೆ 'ಮಹತಃ ಪರಂ ಧ್ರುವಂ' ಎಂಬಲ್ಲಿ ಪುರುಷನನ್ನೇ ವಿವಕ್ಷಿಸಲು ಏನು ಹೇತು? ಎಂಬ ಪ್ರಶ್ನೆಗೆ ಉತ್ತರಿಸಲು 'ಪ್ರಕರಣಾತ್' ಎಂಬ ಸೂತ್ರವು ಹೊರಟಿದೆ. ಪೃಥಿವಿಯಿಂದ ಪ್ರಾರಂಭಿಸಿ, ಪ್ರಕೃತಿಯ ತನಕ ಇರುವ ತನ್ನ ಈ ಶರೀರವೇ ರಥ ಎನಿಸಿದೆ. ಉಪನಿಷತ್ತು ಮುಂದೆ ಇದನ್ನು ಪ್ರತಿಪಾದನೆ ಮಾಡಿದೆ.

ಪೃಥಿವಿಯಿಂದ ಪ್ರಕೃತಿಯ ತನಕ ಸಮಸ್ತವೂ ಕೂಡ ಪರಮಾತ್ಮನಿಗೆ ಶರೀರದಂತೆ ಇದೆ. ಈ ಉಪನಿಷತ್ತಿನಲ್ಲಿ ಹಿಂದೆ ಹೇಳಿದ, ಮುಂದೆ ಹೇಳಲ್ಪಡುವ ಪ್ರಕಾರದಂತೆ ವಿಷ್ಣುವಿನ ಪರಮಸ್ಥಾನದಲ್ಲಿ ಸಮಸ್ತಜೀವರಾಶಿಯೂ ನೆಲಸಿರುತ್ತದೆ. ಆದ್ದರಿಂದ ನಾನು, ನೀನು ಇತ್ಯಾದಿ ಎಲ್ಲಾ ಶಬ್ದಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದಾಗಿ ಯಾರು

ತಿಳಿಯುತ್ತಾನೋ, ಅವನು ಸಂಸಾರವನ್ನು ದಾಟಿ, ಮೋಕ್ಷವನ್ನು ಪಡೆಯುತ್ತಾನೆ. ಕ್ಷೀರಸಮುದ್ರಶಾಯಿಯಾದ ವಿಷ್ಣುವೇ ಮುಕ್ತರಿಂದ ಪ್ರಾಪ್ತನಾಗಿದ್ದಾನೆ. ಎಂಬುದಾಗಿ ಈ ಪ್ರಕರಣವು ವಿಷ್ಣುವಿಗೆ ಸಂಬಂಧಪಟ್ಟಿದೆ. ಇಂಥ ವಿಷ್ಣುವೇ ಜ್ಞೇಯತ್ವೇನ ವಿಷಯನಾಗಿದ್ದಾನೆಂಬುದು 'ಮಹತಃ ಸೋಽಧ್ವನಃ' ಇತ್ಯಾದಿ ಶ್ರುತಿಯ ಅಭಿಪ್ರಾಯವಾಗಿದೆ.

### ಪ್ರಶ್ನೋಪನ್ಯಾಸದ ಆಧಾರ

**सत्तर्कदीपावळिः – ।। त्रयाणामेव चैवमुपन्यासः प्रश्नश्च ।। १-४-७ ।।**

**यथा प्रकरणं महतः परं ध्रुवमित्यादो भगवतोऽन्यस्य ज्ञेयत्वानुक्तौ प्रमाणम् । एवं प्रश्नोपन्यासावपीत्याह – त्रयाणामिति । ननु पितृसौमनस्यं प्रार्थनीयमेव न प्रष्टव्यम् । अन्यथा तस्य भगवतः अन्यस्यैव प्रश्नोपन्यासविषयत्वेन ज्ञेयत्वापत्तेः पूर्वसूत्रविरोध इत्यत आह – अविज्ञातेति। पितृसौमनस्यस्य तदा तेनाज्ञातत्वात् तद्विषयप्रार्थनं च प्रश्नः । एतादृक्प्रश्नोपन्यासविषयत्वं न ज्ञेयत्वापादकमिति भावः ।**

ಹೇಗೆ ಪ್ರಕರಣವು 'ಮಹತಃ ಪರಂ ಧ್ರುವಂ' ಇತ್ಯಾದಿಯಾಗಿ ಭಗವಂತನನ್ನು ಬಿಟ್ಟು, ಬೇರೆ ಪದಾರ್ಥವನ್ನು ತಿಳಿಯಬಾರದೆನ್ನಲು ಪ್ರಮಾಣವಾಗಿದೆಯೋ, ಅದರಂತೆ ಪ್ರಶ್ನೋಪನ್ಯಾಸಗಳೂ ಕೂಡ ಪ್ರಮಾಣವಾಗಿವೆ ಎಂಬುದನ್ನು 'ತ್ರಯಾಣಾಮೇವ' ಇತ್ಯಾದಿ ಭಾಷ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. ಪಿತೃಸೌಮನಸ್ಯವನ್ನು ಪ್ರಾರ್ಥನೆ ಮಾಡಬೇಕೇ ವಿನಃ ಪ್ರಶ್ನಿಸಬಾರದು. ಹೀಗೊಪ್ಪದಿದ್ದರೆ ಪ್ರಶ್ನೋಪನ್ಯಾಸಗಳು ಭಗವಂತನನ್ನು ಬಿಟ್ಟು ಬೇರೆಯದನ್ನೇ ವಿಷಯೀಕರಿಸುತ್ತವೆ ಎಂದಂತಾಯಿತು. ಆಗ ಅವುಗಳೇ ಜ್ಞೇಯವಾಗಬೇಕಾಗುತ್ತದೆ. ಹೀಗೊಪ್ಪಿದರೆ ಹಿಂದಿನ ಸೂತ್ರದಿಂದ ವಿರೋಧವು ಬರುತ್ತದಲ್ಲವೇ? ಈ ಪ್ರಶ್ನೆಗೆ 'ಅವಿಜ್ಞಾತಪ್ರಾರ್ಥನಂ ಚ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಪಿತೃಸೌಮನಸ್ಯಗಳು ಆಗ ನಚಿಕೇತನಿಗೆ ಅಜ್ಞಾತವಾಗಿತ್ತು. ಅಜ್ಞಾತವಿಷಯದಲ್ಲಿ ಮಾಡುವ ಪ್ರಾರ್ಥನೆಯೂ ಕೂಡ ಪ್ರಶ್ನೆಯೆಂದೇ ಕರೆಸಿಕೊಳ್ಳುತ್ತದೆ. ಇಂಥ ಪ್ರಶ್ನೋಪನ್ಯಾಸವಿಷಯತ್ವವು ಜ್ಞೇಯತ್ವಕ್ಕೆ ಆಪಾದಕವಾಗುವುದಿಲ್ಲ ಎಂಬುದು ಅಭಿಪ್ರಾಯ.

'ಮಹತಃ ಪರಂ ಧ್ರುವಂ' ಎಂಬಲ್ಲೂ ವಿಷ್ಣುವೇ ಪ್ರತಿಪಾದ್ಯ

**सत्तर्कदीपावळिः – महद्वच ।। १-४-८ ।।**

**शब्दप्रवृत्तिनिमित्तमुख्यत्वपर्यालोचनया महान्तं विभुमात्मानम् इत्यादाविव महतः परं ध्रुवमित्यादावपि भगवानेव ज्ञेयत्वेनोच्यत इति सिद्ध्यतीत्याह – महद्वचेत्यादिना । यथा भगवन्महत्वमभिहितं तद्वत्तस्य परत वध्रुवत्वाद्यनन्तत्वादयोऽपीत्यर्थः ।।**

ಶಬ್ದ ಪ್ರವೃತ್ತಿನಿಮಿತ್ತವಾದ ಮುಖ್ಯತ್ವವನ್ನು ಪರ್ಯಾಲೋಚನೆ ಮಾಡಿದಾಗ 'ಮಹಾಂತಂ ವಿಭುಮಾತ್ಮಾನಂ' ಎಂಬಲ್ಲಿ ಹೇಗೆ ವಿಷ್ಣುವೇ ಜ್ಞೇಯತ್ವೇನ ಪ್ರತಿಪಾದ್ಯನಾಗಿದ್ದಾನೋ, ಅದರಂತೆ 'ಮಹತಃ ಪರಂ ಧ್ರುವಂ' ಎಂಬಲ್ಲಿಯೂ ಕೂಡ ವಿಷ್ಣುವೇ ಜ್ಞೇಯತ್ವೇನ ಪ್ರತಿಪಾದ್ಯನಾಗಿದ್ದಾನೆ. ಈ ವಿಷಯವನ್ನು 'ಮಹದ್ವಚ್ಚ' ಇತ್ಯಾದಿ ಭಾಷ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. ಹೇಗೆ ಪರಮಾತ್ಮನಲ್ಲಿ ಮಹತ್ವವನ್ನು ಉಪಪಾದನೆ ಮಾಡಲಾಯಿತೋ, ಅದರಂತೆ ಪರತ್ವ, ಧ್ರುವತ್ವ, ಅನಂತತ್ವಾದಿಗಳನ್ನೂ ಕೂಡ ಪರಮಾತ್ಮನಲ್ಲಿ ಉಪಪಾದನೆ ಮಾಡಬೇಕು.

ಅವ್ಯಕ್ತಾದಿಶಬ್ದಸಮನ್ವಯಕ್ಕೆ ಮತ್ತೊಂದು ಕಾರಣ

**सत्तर्कदीपावळिः – ।। चमसवदविशेषात् ।। १-४-९ ।।**

**एवं भगवत एव ज्ञेयत्ववचनात् स एवाव्यकतपुरुषपरावरदुःखिशब्दार्थः । इतोऽपि स एवैतच्छब्दार्थ इत्याह – चमसवदित्यादिना । यद्यपि त्रयाणामेवेति सूत्रे भगवतोऽन्यस्य ज्ञेयत्वानुक्तिप्रतिपादनपरे अग्निस्थस्य तस्यैव अग्निशब्दपर ममुख्यार्थत्वमुक्तम् । तदन्वितार्थस्वार्थाभिधानेन अग्निकाण्डस्य तत्र वाक्यसमन्वयश्च । अनेनैव न्यायेन ज्योतिरादिकर्मस्वपीन्द्रादिगतस्य भगवत एव तच्छब्दार्थपरममुख्यार्थत्वेन सर्वयज्ञेड्यत्वात् समग्रस्यापि कर्मकाण्डस्य तत्र वाक्यसमन्वयश्च।**

ಇಲ್ಲಿಯತನಕ ಭಗವಂತನೇ ಜ್ಞೇಯನಾಗಿರುವುದರಿಂದ ಅವನಲ್ಲೇ ಅವ್ಯಕ್ತ, ಪುರುಷ, ಪರ, ಅವರ, ದುಃಖೀ ಮೊದಲಾದ ಶಬ್ದಗಳು ಸಮನ್ವಯ ಹೊಂದುತ್ತವೆ ಎಂದು ಸಮರ್ಥನೆ ಮಾಡಲಾಯಿತು. ಮತ್ತೊಂದು ಕಾರಣದಿಂದಲೂ ಕೂಡ ಪರಮಾತ್ಮನು ಈ ಎಲ್ಲಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬುದನ್ನು ಉಪಪಾದನೆ ಮಾಡುವುದಕ್ಕಾಗಿ 'ಚಮಸವತ್' ಇತ್ಯಾದಿ ಭಾಷ್ಯವು ಹೊರಟಿದೆ. ವಾಸ್ತವಿಕವಾಗಿ 'ತ್ರಯಾಣಾಮೇವ' ಇತ್ಯಾದಿ ಸೂತ್ರದಲ್ಲಿ ಭಗವಂತನನ್ನು ಬಿಟ್ಟು, ಉಳಿದವುಗಳಿಗೆ ಜ್ಞೇಯತ್ವವನ್ನು ಹೇಳಿರುವುದಿಲ್ಲ ಎಂಬ ವಿಷಯವನ್ನು ಪ್ರತಿಪಾದನೆ ಮಾಡುವಾಗ ಅಗ್ನಿಯಲ್ಲಿರುವ ಪರಮಾತ್ಮನು ಅಗ್ನಿಶಬ್ದದ ಪರಮಮುಖ್ಯಾರ್ಥನೆಂದು ಹೇಳಲಾಯಿತು. ತದನ್ವಿತವಾದ ಅರ್ಥವನ್ನು ಪ್ರತಿಪಾದನೆ ಮಾಡುವ ಮೂಲಕ ಸಮಗ್ರ ಅಗ್ನಿಕಾಂಡವೇ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ತಿಳಿಯಬೇಕು. ಇದರಿಂದ ವಾಕ್ಯಸಮನ್ವಯವು ಸಿದ್ಧವಾಗುತ್ತದೆ. ಇದೇ ನ್ಯಾಯದಿಂದ ಜ್ಯೋತಿರಾದಿಕರ್ಮಗಳಲ್ಲೂ ಕೂಡ ಇಂದ್ರಾದಿಗಳಲ್ಲಿರುವ ಭಗವಂತನೇ ಆಯಾ ಶಬ್ದಗಳ ಪರಮಮುಖ್ಯಾರ್ಥನಾಗಿ, ಸರ್ವಯಜ್ಞ ಆರಾಧ್ಯನಾಗಿದ್ದಾನೆ. ಅವನಲ್ಲೇ ಸಮಗ್ರ ಕರ್ಮಕಾಂಡವು ಅಲ್ಲಿರುವ ವಾಕ್ಯಸಮನ್ವಯವು ಆಗುತ್ತದೆಂದು ತಿಳಿಯಬೇಕು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಆನುಮಾನಿಕಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

# ವಿವರವಾದ ವಿಷಯಾನುಕ್ರಮಣಿಕೆ

## ಜ್ಯೋತಿರುಪಕ್ರಮಾಧಿಕರಣ

## ನ ಸಂಖ್ಯೋಪಸಂಗ್ರಹಾಧಿಕರಣ

## ಆಕಾಶಾಧಿಕರಣ

## ಸಮಾಕರ್ಷಾಧಿಕರಣ

## ಪ್ರಕೃತ್ಯಧಿಕರಣ

## ಏತೇನಾಧಿಕರಣ

# ಸ್ಮೃತ್ಯಧಿಕರಣ

ಭಾವದೀಪ



ಬ್ರಹ್ಮಸೂತ್ರ



ಬ್ರಹ್ಮಸೂತ್ರಭಾಷ್ಯ



ಸತ್ತರ್ಕದೀಪಾವಳಿ

# ನ ವಿಲಕ್ಷಣತ್ವಾಧಿಕರಣ

# ಅಭಿಮಾನ್ಯಧಿಕರಣ

# ಪರಿಶಿಷ್ಟ

## ಆನುಮಾನಿಕಾಧಿಕರಣ - ಸತ್ತರ್ಕದೀಪಾವಳಿ



* * * *

ಶುಭ್ರವರ್ಣ . . . ಹೊರ ಕತ್ತಲೆ ಕತ್ತರಿಸುವ ಶಕ್ತಿ. . .
ಸರ್ವಜ್ಞನಾದ ಶಿವನ ತಲೆಯೇ ನೆಲೆ. . . .
ಇದುವೇ ಚಂದ್ರಿಕಾ.

ಮಿನುಗುವ ವರ್ಣ . . . ಶರಣೆಂದವರ ಒಳ ಕತ್ತಲೆ
ಕತ್ತರಿಸುವ ಶಕ್ತಿ. . .
ಜ್ಞಾನಿವರೇಣ್ಯರ ತಲೆಯೇ ನೆಲೆ. . .
ಇದುವೇ ತಾತ್ಪರ್ಯಚಂದ್ರಿಕಾ.

ಚಂದ್ರಿಕೆಯ ಪ್ರಕಾಶ ಚಂದ್ರಿಕೆಯ ಜನಕರಿಂದಲೇ !

ಶ್ರೀವ್ಯಾಸರು ಬಿತ್ತಿದ ಬೀಜ ಬೆಳೆಯುತ್ತಾ ಬಂದು
ಇಂದು ಶ್ರೀರಾಘವೇಂದ್ರ ಗುರುಸಾರ್ವಭೌಮರ
ಅಮೃತಮಯಕೃತಿಗಳಿಂದ ಫಲಗಳುಂಟಾಗಿ
ಮಧ್ವಸಿದ್ಧಾಂತವೆಂಬ ಮಹಾವೃಕ್ಷವು
ಸೊಬಗಿನಿಂದ ಕಂಗೊಳಿಸುತ್ತಿದೆ.

ಸ್ಫೂರ್ತಿ :- ಗುರುಗುಣಸ್ತವನ

ಪ್ರಕಾಶನ
ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀ ರಾಘವೇಂದ್ರಸ್ವಾಮಿಗಳ ಮಠ
ಮಂತ್ರಾಲಯ - 518 345 (ಆಂಧ್ರ ಪ್ರದೇಶ)